# ಕರ್ನಾಟಕದ ಕನ್ನಡ ಮತ್ತು
# ಕ್ರೈಸ್ತ ಬುಡಕಟ್ಟುಗಳ ಸಂಸ್ಕೃತಿ ಅಧ್ಯಯನ

(ಪಿಹೆಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

ತಾಮಸ್ ಚಿನ್ನಪ್ಪ

ಮಾರ್ಗದರ್ಶಕರು

ಡಾ. ಕೇಶವನ್ ಪ್ರಸಾದ್ ಕೆ.

ಪ್ರಾಧ್ಯಾಪಕ





ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾ-೫೮೩ ೨೭೬

೨೦೦೯

# ಕರ್ನಾಟಕದ ಕನ್ನಡ ಮತ್ತು
# ಕ್ರೈಸ್ತ ಬುಡಕಟ್ಟುಗಳ ಸಂಸ್ಕೃತಿ ಅಧ್ಯಯನ

(ಪಿಹೆಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

**ತಾಮಸ್ ಚಿನ್ನಪ್ಪ**

ಮಾರ್ಗದರ್ಶಕರು

**ಡಾ. ಕೇಶವನ್ ಪ್ರಸಾದ್ ಕೆ.**

ಪ್ರಾಧ್ಯಾಪಕರು



ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ -೫೮೩ ೨೭೬

೨೦೦೯

## ದೃಢೀಕರಣ ಪತ್ರ

ತಾಮಸ್ ಚಿನ್ನಪ್ಪರವರು ಕರ್ನಾಟಕದ ಕನ್ನಡ ಮತ್ತು ಕ್ರೈಸ್ತ ಬುಡಕಟ್ಟುಗಳ ಸಂಸ್ಕೃತಿ ಅಧ್ಯಯನ ಎಂಬ ಶೀರ್ಷಿಕೆಯ ಪಿ.ಹೆಚ್.ಡಿ. ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧ ಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಡಾ. ಕೇಶವನ್ ಪ್ರಸಾದ್ ಕೆ.**
ಮಾರ್ಗದರ್ಶಕರು ಹಾಗೂ ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾನಿಲಯ, ಹಂಪಿ

ಸ್ಥಳ : ವಿದ್ಯಾರಣ್ಯ

ದಿನಾಂಕ : 27. 8. 07

# ಪ್ರಮಾಣ ಪತ್ರ

ಕರ್ನಾಟಕದ ಕನ್ನಡ ಮತ್ತು ಕ್ರೈಸ್ತ ಬುಡಕಟ್ಟುಗಳ ಸಂಸ್ಕೃತಿ ಅಧ್ಯಯನ ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿ.ಹೆಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ. ಕೇಶವನ್ ಪ್ರಸಾದ್ ಕೆ. ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಪ್ರಬಂಧವನ್ನು ಈ ಮೊದಲು ಯಾವ ಪದವಿಗೂ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ತಾಮಸ್ ಚಿನ್ನಪ್ಪ 29/08/09
ಸಂಶೋಧಕ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ

ದಿನಾಂಕ : 29.08.09

# ಕರ್ನಾಟಕದ ಕನ್ನಡ ಮತ್ತು ಕ್ರೈಸ್ತ ಬುಡಕಟ್ಟುಗಳ ಸಂಸ್ಕೃತಿ ಅಧ್ಯಯನ

## ಪರಿವಿಡಿ

ಅಧ್ಯಾಯ - ನಾಲ್ಕು

ಬುಡಕಟ್ಟು ಕ್ರೈಸ್ತರ ಜೀವನ ವರ್ತನ ಸಂಬಂಧಿ ಸಂಪ್ರದಾಯ ಮತ್ತು ಆಚರಣೆಗಳು

ಅಧ್ಯಾಯ - ಐದು

ಬುಡಕಟ್ಟು ಕ್ರೈಸ್ತರ ಹಬ್ಬ, ಜಾತ್ರೆ ಮತ್ತು ಉತ್ಸವಗಳು

## ಕೊರಗ ಸಮುದಾಯವಿರುವ ಜಿಲ್ಲೆಗಳು



# ಸಿದ್ದಿ ಸಮುದಾಯವಿರುವ ಜಿಲ್ಲೆಗಳು



# ಅಧ್ಯಾಯ - ಒಂದು

## ಅಧ್ಯಯನದ ಉದ್ದೇಶ ವ್ಯಾಪ್ತಿ ಮತ್ತು ವಿಧಾನ

**1.1 ಅಧ್ಯಯನದ ಉದ್ದೇಶ** ಒಟ್ಟಾರೆ ಮಾನವ ಭೌಗೋಳಿಕ ಮಿತಿ ,ಬಣ್ಣ, ಮೇಲು–ಕೀಳು ಎಂಬ ಭಾವನೆಯನ್ನು ಮಿರಿ ಧರ್ಮದ ಹೆಸರಲ್ಲಿ ಮಾನವೀಯ ಮೌಲ್ಯವನ್ನು ಒಪ್ಪಿಕೊಳ್ಳುವುದು ಆತನಿಗೆ ಅಂತಿಮ ಸತ್ಯವೆಂದು ಮನವರಿಕೆಯಾಗಿರುವುದು. ಉತ್ತಮ ಬೆಳವಣಿಗೆ ಹಾಗೂ ಅಪೇಕ್ಷಣೆಯ ಕೂಡ. ಆ ಹಿನ್ನೆಲೆಯಲ್ಲಿ ಕಗ್ಗತ್ತಲ ಖಂಡದಿಂದ ಖರೀದಿಸಿ ತಂದು ಇವರನ್ನು ಪ್ರಾಣಿಯಂತೆ ಕಾಣಲಾಗುತ್ತಿದ್ದ ಮಾನವ ಸಮುದಾಯ ವೊಂದು ಇಂದು ಕರ್ನಾಟಕದಲ್ಲಿ ಮಾನವರಾಗಿ ಗೌರಯುತವಾದ ಬದುಕನ್ನು ಸಾಗಿ ಸುತ್ತಿರುವುದು ವಾಸ್ತವ ಆದರೂ ಅದರ ಹಿಂದಿನ ಸತ್ಯಾಸತ್ಯತೆಯನ್ನೂ ಅರಿಯುವುದು ಈ ಅಧ್ಯಯನದ ಮಹತ್ವದ ಉದ್ದೇಶವಾಗಿದೆ.

1. ಬುಡಕಟ್ಟು . ಕ್ರೈಸ್ತರ ಭೌಗೋಳಿಕ ಪರಿಸರವನ್ನು ಗುರುತಿಸುವುದು.
2. ಬುಡಕಟ್ಟು ಕ್ರೈಸ್ತರ ಚಾರಿತ್ರಿಕ ಹಿನ್ನಲೆಯನ್ನು ತಿಳಿಯುವುದು.
3. ಬುಡಕಟ್ಟು ಕ್ರೈಸ್ತರ –ಈಗಿನ ಸಾಮಾಜಿಕ ,ಆರ್ಥಿಕ ,ಮತ್ತು ಶೈಕ್ಷಣಿಕ ಸ್ಥಿತಿಗತಿಯನ್ನು ದಾಖಲಿಸುವುದು
4. ಬುಡಕಟ್ಟು.ಕ್ರೈಸ್ತರಿಗೆ ಎದುರಾಗುತ್ತಿರುವ ಸಮಸ್ಯೆಗಳನ್ನು ಪರಿಶೀಲಿಸುವುದು.
5. ಆಯಾ ಬುಡಕಟ್ಟು ಕ್ರೈಸ್ತರ ಸಂಸ್ಕೃತಿ ಅನನ್ಯತೆಯನ್ನು ದಾಖಲಿಸುವುದು.

**1.2 ಅಧ್ಯಯನದ ವ್ಯಾಪ್ತಿ** ಸಾಮಾಜಿಕ ಹಾಗೂ ಐತಿಹಾಸಿಕ ಕಾರಣಗಳಿಗಾಗಿ ಕೆಲವು ಬುಡಕಟ್ಟು ಕ್ರೈಸ್ತರು ಕರ್ನಾಟಕ ರಾಜ್ಯಕ್ಕೆ ವಲಸೆ ಬಂದು ಕನ್ನಡಿಗರಾಗಿ ಪರಿಶಿಷ್ಟವರ್ಗವೆಂದು ಪರಿಗಣಿತವಾಗಿದೆ. ಬೇರೆ ಪ್ರದೇಶಗಳಿಂದ ಇವರು ವಲಸೆ ಬರಲು ಕಾರಣವಾದ ಅಂಶಗಳು ಮಹತ್ವ ಹೊಂದಿರುತ್ತದೆ. ಹಾಗೇ ವಲಸೆ ಬಂದ ಕ್ರೈಸ್ತ ಸಿದ್ದಿಗಳು ತಮ್ಮ ಸಂಸ್ಕೃತಿಯನ್ನು ಎಷ್ಟರ ಮಟ್ಟಿಗೆ ಉಳಿಸಿಕೊಂಡಿದ್ದಾರೆ ? ಅಥವಾ ಬೇರೆ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿ, ತಮ್ಮ ಸಂಸ್ಕೃತಿಯನ್ನು ಮರೆತಿದ್ದಾರೆಯೇ ಅಥವಾ ತಮ್ಮ ಮೂಲ ಪರಿಸರದ ಸಂಸ್ಕೃತಿಯ ಕೆಲವು ಅಂಶಗಳನ್ನು ಉಳಿಸಿಕೊಂಡು ಬದುಕಿನ ಸಾಂಗತ್ಯಕ್ಕೆ ಒತ್ತು ಕೊಟ್ಟಿದ್ದಾರೆಯೇ ? ಎಂದು ತಿಳಿಯಲು ಇಂತಹ ವಲಸೆ ಬಂದ ಸಮುದಾಯದ ಅಧ್ಯಯನದಿಂದ ಸಾಧ್ಯವಿದೆ. ಅದಲ್ಲದೆ ಹೊರಗಿನಿಂದ ಬಂದು ಇಲ್ಲಿನ ಕ್ರೈಸ್ತ ಸಂಸ್ಕೃತಿ ಮತ್ತು ಜೀವನ ಕ್ರಮಕ್ಕೆ ಹೊಂದಿಕೊಂಡು ಬಾಳುತ್ತಿರುವವರ ಜೀವನ ಕ್ರಮ ಆಚಾರ-ವಿಚಾರಗಳು ಬೇರೆಯವರಿಗಿಂತ ಬಿನ್ನವಾಗಿರುತ್ತದೆ. ಕರ್ನಾಟಕದ ಇತರ ಜನರು ಹೊರಗಿನಿಂದ ಬಂದ ವಲಸಿಗರ ಮೇಲೆ ಯಾವ ರೀತಿಯ ಪ್ರಭಾವ ಬೀರಿದ್ದಾರೆ ಮತ್ತು ಆ ಪ್ರಭಾವಕ್ಕೆ ವಲಸೆ ಬಂದ ಸಮುದಾಯ ಎಷ್ಟರ ಮಟ್ಟಿಗೆ ಒಳಗಾಗಿದ್ದಾರೆ ಎಂಬ ಅಂಶವನ್ನು ಗುರುತಿಸಲಾಗಿದೆ.

ಯಾವುದೇ ಒಂದು ಸಮುದಾಯ ತನ್ನದೇ ಆದ ಆಚಾರ-ವಿಚಾರ, ನಡೆವಳಿಕೆ, ಸಂಪ್ರದಾಯ, ದೇವರು, ದೇವತೆ ಆರಾಧನೆ ಮುಂತಾದವನ್ನು ರೂಡಿಸಿಕೊಂಡಿರುತ್ತಾರೆ. ಈ ದೃಷ್ಟಿಯಲ್ಲಿ

ಕರ್ನಾಟಕ ಕ್ರೈಸ್ತ ಬುಡಕಟ್ಟುಗಳ ಬದುಕಿನ ಹಲವು ಮಜಲುಗಳನ್ನು ಕುರಿತು ಅಧ್ಯಯನ ನಡೆಸಿ ಅವರ ಸಂಸ್ಕೃತಿಯ ಮೂಲಕ ನಮಗೆ ಸಿಗುವ ಉತ್ತಮ ಅಂಶಗಳನ್ನು ದಾಖಲಿಸ ಲಾಗುವುದು.

**1.3 ಅಧ್ಯಯನದ ಮಹತ್ವ** ಯಾವುದೇ ಒಂದು ಸಂಸ್ಕೃತಿ ಗೊತ್ತಾದ ಜನತೆಯ ಜೀವನಕ್ರಮವೇ ಆಗಿರುತ್ತದೆ. ಒಂದು ವ್ಯವಸ್ಥಿತ ರೀತಿಯಲ್ಲಿ ಆ ಜನತೆಯ ಬದುಕು, ಹೊಂದಾಣಿಕೆ, ಹೊಣೆಗಾರಿಕೆ ಮತ್ತು ಆಯ್ಕೆಯನ್ನನುಸರಿಸಿ ನಡೆಯುತ್ತದೆ. ಒಂದು ಜನತೆಯ ಸಂಸ್ಕೃತಿ ಎಂದರೆ ಅದರ ಸಮಸ್ತವೂ ಅದರಲ್ಲಿ ಅಂತರ್ಗತವಾಗಿರುತ್ತದೆ.

ಸಂಸ್ಕೃತಿ ಸಮಸ್ತ ಮಾನವಕುಲಕ್ಕೂ ಸಂಬಂಧಿಸಿರುವಂತೆಯೇ ಪ್ರತಿಯೊಂದು ಗುಂಪಿಗೂ ವಿಶಿಷ್ಟವೂ ಅನನ್ಯವೂ ಆಗಿದೆ. ಪ್ರತಿಯೊಂದು ಮಾನವ ಗುಂಪೂ ತನ್ನದೇ ಆದ ಜೀವನ ವಿಧಾನವನ್ನು ಅಳವಡಿಸಿಕೊಂಡಿರುವುದೇ ಅದಕ್ಕೆ ಕಾರಣ. ಭಾಷಿಕ, ಭೌಗೋಳಿಕ, ಧಾರ್ಮಿಕ ಮತ್ತು ಚಾರಿತ್ರಿಕ ಹಿನ್ನೆಲೆ ಅನನ್ಯತೆ ರೂಪುಗೊಳ್ಳುವಲ್ಲಿ ಮಹತ್ವದ ಪಾತ್ರ ವಹಿಸುತ್ತದೆ. ಆದ್ದರಿಂದಲೇ ಮಾನವ ಪ್ರಪಂಚದಲ್ಲಿ ಹಲವಾರು ಸಂಸ್ಕೃತಿಗಳಿರುವುದು ಸಹಜವಾಗಿದೆ (ಹಿರಿಯಣ್ಣ:1992:2).

ಪ್ರತಿಯೊಂದು ಸಂಸ್ಕೃತಿಯ ವರ್ತನೆಗಳೂ ಒಂದಿಲ್ಲೊಂದು ರೀತಿಯಲ್ಲಿ ಕಾರ್ಯಕಾರಣ ಅವಲಂಬಿತ ಮೌಲ್ಯ ಹಾಗೂ ಸೂತ್ರದ ಮೇಲೆ ನಿಂತಿರುತ್ತದೆ. ಇದರಿಂದ ಪ್ರತಿಯೊಂದು ಸಮಾಜಕ್ಕೂ ಸಂಸ್ಕೃತಿಗೂ ತನ್ನದೇ ಆದ ನೈತಿಕ, ಸಾಮಾಜಿಕ ಮೌಲ್ಯಗಳು ಕಟ್ಟು ಪಾಡುಗಳು ಇರುತ್ತವೆ.ಈ ಹಿನ್ನೆಲೆಯಲ್ಲಿ ಬುಡಕಟ್ಟು ಕ್ರೈಸ್ತರ ಕ್ರೈಸ್ತರ ಜಾನಪದ ಸಂಪ್ರದಾಯಗಳು ಕ್ರೈಸ್ತರ ಸಂಸ್ಕೃತಿಗೆ ಹೊಂದುವವೆ ಎಂಬುದನ್ನು ಕ್ರೈಸ್ತ ಸಮುದಾಯದ ಸಂಸ್ಕೃತಿಯ ಹಿನ್ನೆಲೆಯಲ್ಲಿ ಅವುಗಳ ವೈಶಿಷ್ಟ್ಯಗಳನ್ನು ಪರಿಶೀಲಿಸಬೇಕಾಗಿದೆ.

`ಜನಪದ ಸಂಪ್ರದಾಯ' (Folk custom) ಒಂದು ಜನಸಮುದಾಯದ ಜೀವನದ ಹಲವು ಮುಖಗಳನ್ನು ಪರಿಚಯಿಸುವುದಲ್ಲದೆ ಸಾಮಾಜಿಕ ಜೀವನವನ್ನು ಎಳೆಎಳೆಯಾಗಿ ಪ್ರತಿಬಿಂಬಿಸುವಂಥದು. ಅದು ಜನಸಾಮಾನ್ಯರ ಮಾನಸಿಕ ಒತ್ತಡವನ್ನು ಸಂದರ್ಭೋಚಿತವಾಗಿ ಹೊರಹೊಮ್ಮಿಸುವಂಥದ್ದು. ತಲೆಮಾರಿನಿಂದ ತಲೆಮಾರಿಗೆ ಪರಂಪರಾನುಗತವಾಗಿ ಸಾಗಿಬಂದು ಯುಗದಿಂದ ಯುಗಕ್ಕೆ ಪ್ರವಹಿಸುವಂಥದ್ದಾಗಿದೆ.

ಜಾನಪದ, ಕ್ರೈಸ್ತರನ್ನೂ ಒಳಗೊಂಡಂತೆ ಪ್ರತಿಯೊಬ್ಬ ಮಾನವನಲ್ಲಿಯೂ ಹುದುಗಿರುವ ಅಂತಃಸ್ಸತ್ವ. ಅದು ಎಂದಾದರೂ, ಹೇಗಾದರೂ ಒಮ್ಮೆ ನಾಣ್ನುಡಿಯಾಗಿಯೊ, ಗಾದೆಯಾಗಿಯೊ, ಒಗ ಟಾಗಿಯೊ, ಕಥೆಯಾಗಿಯೊ - ಹೀಗೆ ಯಾವುದಾದರೂ ಒಂದು ರೂಪದಲ್ಲಿ ಹೊರಹೊಮ್ಮಬಹುದು.

**1.4 ಅಧ್ಯಯನದ ವಿಧಾನ** (ಪ್ರಸ್ತುತ ಅಧ್ಯಯನವು ಕರ್ನಾಟಕದ ಬುಡಕಟ್ಟು ಕ್ರೈಸ್ತರ ಸಂಪ್ರದಾಯಗಳನ್ನು ಕುರಿತ್ತಾಗಿದೆ.) ಕನ್ನಡದಲ್ಲಿ `ಕ್ರೈಸ್ತಜಾನಪದ' ಕುರಿತ ಪುಸ್ತಕಗಳು ಹೆಚ್ಚಿನ ಸಂಖ್ಯೆಯಲ್ಲಿ ಇಲ್ಲದಿದ್ದರೂ, ಲಭ್ಯ ಇರುವ ಸಾಮಗ್ರಿಯನ್ನು ಬಳಸಿಕೊಂಡು ಕರ್ನಾಟಕದಲ್ಲಿ

ಬುಡಕಟ್ಟು ಕ್ರೈಸ್ತರು ನೆಲೆಸಿರುವ ಪ್ರದೇಶಗಳಿಗೆ ಪ್ರತ್ಯಕ್ಷವಾಗಿ ಭೇಟಿಕೊಟ್ಟು ಕ್ಷೇತ್ರಕಾರ್ಯದ ಮೂಲಕ ಮಾಹಿತಿ ಸಂಗ್ರಹಣೆ ಮಾಡಿಕೊಳ್ಳಲಾಯಿತು.

ಅಧ್ಯಯನಕ್ಕೆ ಅನುಕೂಲವಾಗುವಂತೆ ಕರ್ನಾಟಕದ ಬುಡಕಟ್ಟು ಕ್ರೈಸ್ತರನ್ನು ಮೂರು ವರ್ಗವಾಗಿ ವಿಂಗಡಿಸಿಕೊಂಡು, ಅವರಲ್ಲಿ ರೂಢಿಯಲ್ಲಿರುವ ಸಂಪ್ರದಾಯ ಮತ್ತು ನಂಬಿಕೆಗಳನ್ನು ಅಧ್ಯಯನ ಮಾಡಲಾಗಿದೆ. ಸಿದ್ದಿ, ಮತ್ತು ಕೊರಗ ಬುಡಕಟ್ಟು ಕ್ರೈಸ್ತರ ವಿಭಿನ್ನ ಸಂಪ್ರದಾಯಗಳ ಹೋಲಿಕೆ ಮತ್ತು ವ್ಯತ್ಯಾಸಗಳನ್ನು ಅಭ್ಯಸಿಸಲಾಗಿದೆ. ಈ ಅಧ್ಯಯನಕ್ಕೆ ಹಿನ್ನೆಲೆಯಾಗಿ ಕರ್ನಾಟಕದಲ್ಲಿ ಕ್ರೈಸ್ತರ ಮೂಲ ಮತ್ತು ಪರಂಪರೆಯನ್ನು ಪರಿಶೀಲಿಸಲಾಗಿದ್ದು ಕ್ರೈಸ್ತಧರ್ಮದ ಪ್ರವೇಶದ ಬಗ್ಗೆ ಸ್ಥೂಲವಾದ ವಿವರಣೆ ಕೊಡಲಾಗಿದೆ. ಕರ್ನಾಟಕದಲ್ಲಿ ಬುಡಕಟ್ಟು ಕ್ರೈಸ್ತರು ಮೂಲತಃ ಅರಣ್ಯವಾಸಿಗಳೇ ಹೆಚ್ಚಾಗಿರುವುದರಿಂದ ಇವರ ಸಂಪ್ರದಾಯ ಮತ್ತು ಆಚರಣೆಗಳು ಬಹುತೇಕ ಸ್ಥಳೀಯ ಹಿಂದೂ ಸಂಪ್ರದಾಯಗಳನ್ನೇ ಹೋಲುತ್ತವೆ. ಅಂತೆಯೇ ಆಫ್ರಿಕಾದಿಂದ ವಲಸೆ ಬಂದು ಕರ್ನಾಟಕದಲ್ಲಿ ನೆಲೆಸಿರುವ ಸಿದಿ ಬುಡಕಟ್ಟು ಕ್ರೈಸ್ತರಲ್ಲಿ ವಿಭಿನ್ನ ರೀತಿಯ ಸಂಪ್ರದಾಯಗಳು ರೂಢಿಯಲ್ಲಿರುವುದನ್ನು ಗುರುತಿಸಬಹುದಾಗಿದೆ.

ಕರ್ನಾಟಕದ ಏಳು ತಾಲ್ಲೂಕುಗಳಲ್ಲಿ ಬುಡಕಟ್ಟು ಕ್ರೈಸ್ತರು ನೆಲಸಿರುವುದು ಕಂಡು ಬರುತ್ತದೆ. ಆದರೆ ಬುಡಕಟ್ಟು ಕ್ರೈಸ್ತರು ಹೆಚ್ಚಿನ ಸಂಖ್ಯೆಯಲ್ಲಿ ನೆಲಸಿರುವ ಪ್ರದೇಶಗಳನ್ನು ಮಾತ್ರ ಇಲ್ಲಿ ಅಧ್ಯಯನಕ್ಕೊಳಪಡಿಸಲಾಗಿದೆ. ಅವುಗಳಲ್ಲಿ ಉತ್ತರ ಕನ್ನಡ, ದಕ್ಷಿಣ ಕನ್ನಡ, ಜಿಲ್ಲೆಗಳಲ್ಲಿ ಕ್ಷೇತ್ರ ಕಾರ್ಯನಡೆಸಿ, ಅಧ್ಯಯನ ಮಾಡಲಾಗಿದೆ. ಒಂದು ಜಿಲ್ಲೆಯ ಆಡಳಿತಕ್ಕೆ ಒಳಪಡುವ ಬೇರೆ ಬೇರೆ ತಾಲ್ಲೂಕುಗಳ ಸ್ವರೂಪವು ವಿಭಿನ್ನವಾಗಿರುತ್ತದೆ. ಇವುಗಳ ಅಧ್ಯಯನ ಕೆಲವೊಮ್ಮೆ ಅನುಕೂಲವೂ ಆಗಬಹುದು. ಅನಾನುಕೂಲವೂ ಆಗಬಹುದು. ಉದಾ: ಲಂಬಾಣಿಗರ ತಾಂಡಾದ ಅಧ್ಯಯನವು ನಿರ್ದಿಷ್ಟವಾಗಿ ಒಂದೇ ಪಂಗಡದವರ ನಂಬಿಕೆ, ಆಚಾರ ಸಂಪ್ರದಾಯಗಳನ್ನು ಹೊಂದಿರುತ್ತದೆ. ಆದರೆ ಹಲವು ಜಾತಿ, ಭಾಷೆಗಳಿಂದ ಕೂಡಿದ ಒಂದು ಸಂಕೀರ್ಣ ಸ್ವರೂಪದ ಹಳ್ಳಿಯಲ್ಲಿ ಅವುಗಳನ್ನು ಪರಸ್ಪರ ತೌಲನಿಕವಾಗಿ ನೋಡುವುದಕ್ಕೆ ಅವಕಾಶವಿರುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಕರ್ನಾಟಕದಲ್ಲಿ ನೆಲೆಸಿರುವ ಸಿದ್ದಿ, ಕೊರಗ ಬುಡಕಟ್ಟು ಕ್ರೈಸ್ತರ ಸಂಪ್ರದಾಯ ಆಚರಣೆಗಳ ಪರಿಶೀಲನೆಯನ್ನು ಈ ಹಿನ್ನೆಲೆಯಲ್ಲಿ ಕಾಣಬಹುದು.

ಸಾಮೂಹಿಕ ಆಚರಣೆಗಳಲ್ಲಿ ಇತರ ಧರ್ಮೀಯರೊಡನೆ ಇರುವ ಸಾಮ್ಯತೆಗಳು ಕ್ರೈಸ್ತರ ವಿಶಿಷ್ಟತೆಯನ್ನೂ, ಅನನ್ಯತೆಯನ್ನೂ ಪ್ರಕಟಪಡಿಸುತ್ತವೆ. ಧಾರ್ಮಿಕ ಚೌಕಟ್ಟಿನೊಳಗೇ ಇದ್ದುಕೊಂಡು ಹಿಂದೂ ಸಂಪ್ರದಾಯದ ಸಾಮಾಜಿಕ ಆಚರಣೆಗಳನ್ನು ಇವರು ಮುಂದುವರೆಸಿಕೊಂಡು ಹೋಗುತ್ತಿದ್ದಾರೆ.

ಮೂಲತ ಇದೊಂದು ಸಮುದಾಯ ಅಧ್ಯಯನವೇ ಆಗಿರುವುದರಿಂದ ಸಂಪೂರ್ಣವಾಗಿ ಕ್ಷೇತ್ರವನ್ನು ಅವಲಂಬಿಸಿದೆ, ಆ ಹಿನ್ನಲೆಯಲ್ಲಿ ಬುಡಕಟ್ಟು ಕ್ರೈಸ್ತ ಸಮುದಾಯಗಳು ಕಂಡುಬರುವ ಪ್ರದೇಶಗಳನ್ನು ಗುರುತಿಸಿ ಕ್ಷೇತ್ರ ಕಾರ್ಯವನ್ನು ಕೈಗೂಂಡು ಮಾಹಿತಿಯನ್ನು ಸಂಗ್ರಹಿಸುವುದು ಅವಶ್ಯಕ ಹಾಗೂ ಹಬ್ಬ-ಹರಿದಿನ, ಜಾತ್ರೆ-ಉತ್ಸವ ಇವೆ ಮುಂತಾದ ಹಲವಾರು ಕಾರ್ಯಕ್ರಮಗಳನ್ನು ನೇರವಾಗಿ ಪಾಲ್ಗೊಳ್ಳುವ

ಮೂಲಕ·ದಲ್ಲಿ ಸಂಗ್ರಹಿಸಿದ ಮಾಹಿತಿಗಳನ್ನು ಖಚಿತಪಡಿಸಿಕೊಂಡು ಸಂಶೋಧನೆಯ ಬರಹದಲ್ಲಿ ಬಳಸಲಾಗಿದೆ.

**ವಿಷಯ ಅಧ್ಯಯನ : (Case Study Method)** ಬುಡಕಟ್ಟು ಕ್ರೈಸ್ತರ ಸಾಮಾಜಿಕ, ಆರ್ಥಿಕ ಹಾಗೂ ಶೈಕ್ಷಣಿಕ ಸ್ಥಿತಿಗತಿಯನ್ನು ವಿಶ್ಲೇಷಿಸಲು ವಿಷಯ ಅಧ್ಯಯದ ವಿಧಾನ ಹೆಚ್ಚು ಪ್ರಯೋಜನಕಾರಿಯಾಗಿದೆ. ಆದ್ದರಿಂದ ಈ ವಿಧಾನವನ್ನು ಅನುಸರಿಸಲಾಗಿದೆ.

**ಪ್ರಶ್ನಾವಳಿ ವಿಧಾನ : (Questioner method)** ಅಧ್ಯಯನದ ವಿಷಯಕ್ಕೆ ಅನುಗುಣವಾಗಿ ಸೂಕ್ತವಾದ ಪಶ್ನಾವಳಿಯನ್ನು ರಚಿಸಿ ಕ್ಷೇತ್ರಕಾರ್ಯದ ಮೂಲಕ ಮಾಹಿತಿಯನ್ನು ಪಡೆಯಲಾಗಿದ್ದು .ಸದರಿ ಪ್ರಶ್ನಾವಳಿಯಲ್ಲಿ ದಾಖಲಿಸಿಕೊಂಡಿರುವ ಮಾಹಿತಿಯನ್ನು ಪ್ರಬಂಧದ ರಚನೆಗೆ ಮೂರಕವಾಗಿ ಬಳಸಿಕೊಳ್ಳಲಾಗಿದೆ.

**ಸಂದರ್ಶನ ವಿಧಾನ : (Interview method)** ಅಧ್ಯಯನಕ್ಕೆ ಆಯ್ಕೆಮಾಡಿಕೊಂಡಿರುವ ಬುಡಕಟ್ಟು ಕ್ರೈಸ್ತರು; ನೆಲೆಸಿರುವ ಪ್ರದೇಶಗಳಿಗೆ ಭೇಟಿಕೊಟ್ಟು ಸಿದ್ದಪಡಿಸಿದ ಪ್ರಶ್ನಾವಳಿಯ ಮೂಲಕ ಸಮುದಾಯದ ಹಿರಿಯರಿಂದ ಮಾಹಿತಿ ಪಡೆದು ಅಧ್ಯಯನದ ವಿಚಾರದಲ್ಲಿ ಬಳಸಿಕೊಳಳಲಾಗುವುದು.

**ಅವಲೋಕನ ವಧಾನ : (Observation method)** ಬುಡಕಟ್ಟು ಕ್ರೈಸ್ತರಲ್ಲಿ ರೂಢಿಯಲ್ಲಿರುವ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಆಚರಣಾತ್ಮಕ ಸಂಗತಿಗಳನ್ನು ನೇರವಾಗಿ ಭಾಗವಹಿಸುವ ಮೂಲಕ ಅವಲೋಕಿಸಿ ವಿಷಯವನ್ನು ಗ್ರಹಿಸಿ ಟಪ್ಪಣಿ ಮಾಡಿ ಕೊಳ್ಳಲಾಗಿದ್ದು ಸದರಿ ಮಾಹಿತಿಯನ್ನು ಸೂಕ್ತ ರೀತಿಯಲ್ಲಿ ಪ್ರಬಂಧದ ರಚನೆ ಸಂದರ್ಭದಲ್ಲಿ ಬಳಸಿಕೊಳ್ಳಲಾಗುವುದು.

**ಐತಿಹಾಸಿಕ ವಿಧಾನ (Historrcal Method):** ಕರ್ನಾಟಕದ ಕ್ರೈಸ್ತರು ಹಾಗೂ ಬುಡಕಟ್ಟು ಕ್ರೈಸ್ತರ ಕುರಿತು ನಡೆದಿರುವ ಅಧ್ಯಯನವನ್ನು ಗಮನಿಸಿ ಪ್ರಸ್ತುತ ಅಧ್ಯಯನಕ್ಕೆ ಮೂರಕವಾದ ಮಾಹಿತಿಯನ್ನು ದಾಖಲಿಸಿಕೊಂಡು (ಶಾಸನ, ತಾಮ್ರಪಟ, ತಹನಾಮೇ) ಅವರ ಚರಿತ್ರೆಯನ್ನು ಕಟ್ಟಿಕೊಡಲು ಪ್ರಯತ್ನಿಸಲಾದೆ.

**ಸಂಖ್ಯಾಶಾಸ್ತ್ರಿಯ ವಿಧಾನ (Stastistical Method)** ಬುಡಕಟ್ಟು ಕ್ರೈಸ್ತರ ಬಗೆಗೆ ಲಭ್ಯವಿರುವ ಮಾಹಿತಿಯನ್ನು ಆಧರಿಸಿ ಜನಸಂಖ್ಯೆ, ಸಾಕ್ಷರತ ಮಟ್ಟ ವೃತ್ತಿಯನ್ನು ಕುರಿತು ಅಗತ್ಯವಾದ್ದಲ್ಲಿ ಅಂಕಿ ಸಂಖ್ಯಾ ಮಾಹಿತಿಯನ್ನು ನೀಡಲಾಗಿದೆ.

**ಅಧ್ಯಯನ ಮಿತಿಗಳು (Limitations of the study)** ಅಧ್ಯಯನವು ಕರ್ನಾಟಕದ ಕನ್ನಡ ಹಾಗೂ ಬುಡಕಟ್ಟು ಕ್ರೈಸ್ತರನ್ನು ಕುರಿತದ್ದಾಗಿದೆ. ಕರ್ನಾಟಕದ ಕ್ರೈಸ್ತರ ಬಗ್ಗೆ ಹೇಳುವಾಗ ಕೇವಲ ದಕ್ಷಿಣ ಕರ್ನಾಟಕದ ಆಯ್ದ ಜಿಲ್ಲೆಗಳಿಗೆ ಮಾತ್ರ ಸೀಮಿತಗೊಳಿಸಲಾಗುತ್ತದೆ.(ಉದಾಹರಣೆಗೆ ಮೈಸೂರು, ಚಾಮಾರಾಜನಗರ, ಹಾಸನ, ಮಂಡ್ಯ, ಬೆಂಗಳೂರು ಗ್ರಾಮ, ಬೆಂಗಳೂರುನಗರ, ರಾಮನಗರ, ತುಮಕೂರು , ಚಿತ್ರದುರ್ಗ, ದಾವಣಗೆರೆ, ಹಾವೇರಿ, ಶಿವಮೊಗ್ಗ, ಚಿಕ್ಕಮಂಗಳೂರು, ಉಡುಪಿ, ದಕ್ಷಿಣಕನ್ನಡ, ಉತ್ತರಕನ್ನಡ ಮತ್ತು ಕೋಲಾರ), ಹಾಗೂ ಕರ್ನಾಟಕದಲ್ಲಿ ಕಂಡುಬರುವ ಎರಡು ಬುಡಕಟ್ಟು ಕ್ರೈಸ್ತರಾದ ಕೊರಗ ಮತ್ತು ಸಿದ್ದಿ ಸಮುದಾಯಗಳನ್ನು ಕುರಿತು ಅಧ್ಯಯನ ನಡೆಸಲಾಗಿದೆ.

ಅಧ್ಯಯನವು ಸದರಿ ಸಮುದಾಯಗಳಿಂದ ಸಂಗ್ರಹಿಸಿದ ಮೌಖಿಕ ಮಾಹಿತಿಯನ್ನು ಹಾಗೂ ಕ್ಷೇತ್ರಕಾರ್ಯದಿಂದ ಅವಲೋನ ವಿಧಾನದಿಂದ ಗ್ರಹಿಸಿ ದಾಖಲಿಸಿಕೊಂಡ ಮಾಹಿತಿಯನ್ನು ಆಧರಿಸಿದ್ದಾಗಿದೆ. ಸದರಿ ಅಧ್ಯಯನಕ್ಕೆ 2008 ಡಿಸೆಂಬರ್ 31 ರ ಒಳಗೆ ಸಂಗ್ರಹಿಸಿಕೊಳ್ಳಲಾದ ಮಾಹಿತಿಯನ್ನು ಬಳಸಿಕೊಳ್ಳಲಾಗಿದೆ ಇದರಿಂದ ಸಂಸ್ಕೃತೀಕರಣವೇರ್ಪಟ್ಟು, ತಮ್ಮದೇ ಆದ ವಿಶಿಷ್ಟ ಸಂಸ್ಕೃತಿಯನ್ನು ಇವರು ರೂಪಿಸಿ ಕೊಂಡಿದ್ದಾರೆ.

1.5 ಇದುವರೆಗೂ ಆಗಿರುವ ಅಧ್ಯಯನ ಪರಾಮರ್ಶೆ :

ಕರ್ನಾಟಕದ ಬುಡಕಟ್ಟು ಜನರಿಗೆ ಕ್ರೈಸ್ತಧರ್ಮ ಪರಧರ್ಮವು ಹೌದು ಮತಾಂತರ ಹೊಂದಿರುವ ಬುಡಕಟ್ಟು ಜನರು ಅಲ್ಪಸಂಖ್ಯಾತರಾಗಿರಬಹುದು. ಆದರೆ ಕ್ರೈಸ್ತಧರ್ಮವನ್ನು ಸ್ವೀಕರಿಸಿರುವ ಜನತೆ ಇವರೇ ಆಗಿರುವುದರಿಂದ ಅವರು ಮೂಲ ಜನಪದ ಸಂಸ್ಕೃತಿಯನ್ನು ಸಾಂಪ್ರದಾಯಿಕವಾಗಿ ಹೆಣಿದುಕೊಂಡ ಜನರೇ ಆಗಿದ್ದಾರೆ. ಅವರ ಆಚಾರ-ವಿಚಾರಗಳು ಧಾರ್ಮಿಕ, ಸಾಮಾಜಿಕ ನಂಬಿಕೆಗಳು ಆಚರಣೆಗಳು ಇತ್ಯಾದಿಗಳಲ್ಲಿ ರಾಷ್ಟ್ರೀಯತೆಯನ್ನು ಗುರುತಿಸಬಹುದು. ಆದರೆ ಈ ನಿಟ್ಟಿನಲ್ಲಿ ಕನ್ನಡದಲ್ಲಿ ನಡೆದಿರುವ ಅಧ್ಯಯನ ಅತ್ಯಲ್ಪ ಪ್ರಮಾಣದ್ದು.

ಪಾಶ್ಚಾತ್ಯರಲ್ಲಿ ಕ್ರೈಸ್ತ ಜಾನಪದ ಕುರಿತು ಸಾಕಷ್ಟು ಅಧ್ಯಯನಗಳು ನಡೆದಿದ್ದು ಪುಸ್ತಕಗಳ ರೂಪದಲ್ಲಿ ಪ್ರಕಟವಾಗಿವೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಉದಾಹರಿಸಬಹುದಾಗಿದೆ. `Peasant customs and savage myth' ಎಂಬ ಪುಸ್ತಕದಲ್ಲಿ Miss Rachal Harriet Busk ಎಂಬ ಲೇಖಕಿಯ ಬಗೆಗೆ ಬರೆಯುವಾಗ ಆಕೆ ಬರೆದ "The folklore of Rome, collected by word of mouth from the people" ಎಂಬ ಕೃತಿಯ ಬಗ್ಗೆ ಪ್ರಸ್ತಾಪಿಸಲಾಗಿದೆ. ಆಕೆಯ ಕೃತಿಯಲ್ಲಿ ರೋಮನ್ನರಲ್ಲಿ ರೂಢಿಯಲ್ಲಿರುವ ಐತಿಹ್ಯ, ಸಂಪ್ರದಾಯಗಳ ವಿಶದವಾದ ಚರ್ಚೆ ಇದೆ (ಡಾರ್ಸನ್:1968:608-609).

The Gypsies ಎಂಬ ಪುಸ್ತಕದಲ್ಲಿ ಕ್ರೈಸ್ತರು ಅವಲಂಬಿಸಿರುವ ವ್ಯಕ್ತಿಗಳು, ಉಡುಪು, ಊಟೋಪಚಾರಗಳು; ಮದುವೆ, ಹೆರಿಗೆ, ಇತ್ಯಾದಿ ಸಂದರ್ಭಗಳಲ್ಲಿ ಅನುಸರಿಸಲಾಗುವ ಸಂಪ್ರದಾಯಗಳ ಬಗೆಗೆ ಮಾಹಿತಿ ಇದೆ (Charles Duff:1963).

'The Evalution of Culture' ಎಂಬ ಪುಸ್ತಕದಲ್ಲಿ 'Advances in Cult and Religious Ideas' ಎಂಬ ಶೀರ್ಷಿಕೆಯಡಿ ಕ್ರೈಸ್ತ ಸಂಪ್ರದಾಯಗಳಲ್ಲಿ ಪ್ರಮುಖ ಆಚರಣೆಯಾದ ದೀಕ್ಷಾಸ್ನಾನ ಹಾಗೂ ಧರ್ಮಸಭೆಯ (Church) ಬಗ್ಗೆಗೆ ಚರ್ಚಿಸಲಾಗಿದೆ. ದೀಕ್ಷಾಸ್ನಾನದ ಬಗ್ಗೆ ಇಲ್ಲಿ ವೈಜ್ಞಾನಿಕ ವಿಶ್ಲೇಷಣೆಯನ್ನೂ ಮಾಡಲಾಗಿದೆ (Julius Lippert 1931:384-390). ದೀಕ್ಷಾಸ್ನಾನದ ವಿಧಾನ ಗಳಲ್ಲಿ ರಕ್ತದ ದೀಕ್ಷೆಯೂ ಒಂದು. ಪಾಶ್ಚಾತ್ಯರಲ್ಲಿ ಅದರ ವಿವೇಚನೆ ವಿಭಿನ್ನ ರೀತಿಯಲ್ಲಿ ನಡೆದಿರುವುದು ಕಂಡು ಬಂದಿದೆ, 1(James Hastings Vol-2, 1909:372).

'The Idea of a Christian Society' ಎಂಬ ಪುಸ್ತಕದಲ್ಲಿ ಇಂದಿನ ಕ್ರೈಸ್ತ ಸಮಾಜದ ಸ್ಥಿತಿ ಗತಿಗಳನ್ನು ಕುರಿತು ಸೂಕ್ತ ಅಧ್ಯಯನ ನಡೆಸಲಾಗಿದೆ. (Eliot, T.S. 1939:472) 'Races and Culture of the World' ಎಂಬ ಪುಸ್ತಕದಲ್ಲಿ ಅಂದಿನ ಯೆಹೂದಿಗಳ ಜಾನಪದದ ಸಂಪೂರ್ಣ ಮಾಹಿತಿ ನೀಡಲಾಗಿದೆ. (Eugene Pittard: 1989:337-351).

`A Study of Anthropology' ಎಂಬ ಕೃತಿಯಲ್ಲಿ ಕ್ರೈಸ್ತರ ಸೃಷ್ಟಿ ಪುರಾಣಗಳ ಬಗೆಗೆ ಮಾಹಿತಿಗಳು ದೊರೆಯುತ್ತವೆ (David E. Hunter and Phillip whilten 1976:23-26).

'Hindu Manners, customs and ceremonies' ಎಂಬ ಪುಸ್ತಕವು ಅತ್ಯುತ್ತಮ ಜಾನಪದ ಕೃತಿಯಾಗಿದೆ. ಇದರಲ್ಲಿ Tolerance for other religious ಮತ್ತು Former

Ascendency of Christianity ಎಂಬ ಅಧ್ಯಾಯದಲ್ಲಿ ಲೇಖಕರು ಇತರರೊಡನೆ `ಕ್ರೈಸ್ತರ ಸಂಬಂಧ' ಕುರಿತು ಬರೆದಿದ್ದಾರೆ (Abbe Dubois 1906:299-300). ಇಲ್ಲಿ ಮತಾಂತರಗೊಂಡ ಕ್ರೈಸ್ತರ ಜೀವನ ಕ್ರಮವು ಚಿತ್ರಿತವಾಗಿದೆ.

'ಹೊಸಗನ್ನಡ ಅರುಣೋದಯ' ಎಂಬ ಪುಸ್ತಕದಲ್ಲಿ ಕ್ರೈಸ್ತಸಾಹಿತ್ಯ ಎಂಬ ಅಧ್ಯಾಯದ `ಕಥನ ಇತ್ಯಾದಿ' ಎಂಬ ವಿಭಾಗದಲ್ಲಿ ಅನೇಕ ಕ್ರೈಸ್ತ ಲೇಖಕರನ್ನೂ ಅವರ ಕೃತಿಗಳನ್ನೂ ಹೆಸರಿಸಲಾಗಿದೆ (ಹಾವನೂರ:1974:440).

`ಕನ್ನಡ ಜಾನಪದ ವಿಶ್ವಕೋಶ'ದಲ್ಲಿ ಕಿಸ್ಮಸ್ ಹಬ್ಬದ ಆಚರಣೆಯ ಬಗೆಗೆ ಮಾಹಿತಿಗಳು ದೊರೆಯುತ್ತವೆ. "ಕೊಟ್ಟಿಗೆಯಲ್ಲಿ ಶಿಶು, ಪೂರ್ವದೇಶದ ಮೂವರು ಜ್ಞಾನಿಗಳು (ಮೆಜೈ) ಕ್ರಿಸ್ತ ಶಿಶುವನ್ನು ಪೂಜಿಸುವುದು ಮತ್ತು ನಕ್ಷತ್ರದ ಬೆಳಕಿನಲ್ಲಿ ಬೆತ್ಲೆಹೇಮ್‌ಗೆ ಹೋಗುವುದು, ಈ ಕ್ರಿಸ್ಮಸ್ ಕಥೆಯಲ್ಲಿ ಜನ್ಮನಿರೂಪಣೆಯನ್ನು ಚಿತ್ರಿಸಲಾಗಿದೆ. (ಕಂಬಾರ (ಸಂ) 1985:583) ಹಾಗೂ ದೀಕ್ಷಾಸ್ನಾನದ ಕುರಿತು ಕ್ರಿಸ್ತನಿಗೆ ಪೂರ್ವದ ಯುಗದಲ್ಲೇ ಈ ಪದ್ಧತಿ ಇತ್ತು. "ಶುದ್ಧೀಕರಣ ಎನ್ನುವುದು ತಾಯಿ ಮತ್ತು ಮಗುವಿನ ಮೈಲಿಗೆ ಅಥವಾ ಅಶುದ್ಧಿಯನ್ನು ನಿವಾರಿಸುವ ಕಲ್ಪನೆಯನ್ನು ಆಧರಿಸಿರಬಹುದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ, (ಅದೇ ಪುಟ 1695). ಕ್ರೈಸ್ತ ಪಂಗಡಗಳಲ್ಲಿರುವ ವೈದೃಶ್ಯದ ಬಗೆಗೆ ಪ್ರಸ್ತಾಪಿಸುತ್ತ" ಪ್ರಾಟೆಸ್ಟಂಟ್ ದೇಶಗಳಲ್ಲಿ ಕೂಡ ಸೈತಾನನ ಪ್ರಾಮುಖ್ಯತೆ ಇದೆ. ಆದರೆ ವರ್ಜಿನ್ ಮೇರಿ ಮತ್ತು ಸಂತರ ಪ್ರಾಮುಖ್ಯತೆ ಇಲ್ಲ" ಎಂದು ಬರೆದಿದ್ದಾರೆ (ಅದೇ ಪುಟ 1696).

ದಯಾನಂದ ಪ್ರಭು ಅವರ 'ಮೈಸೂರು ಸಂಸ್ಥಾನದ ಕ್ರೈಸ್ತರ ಇತಿಹಾಸ' ಎಂಬ ಕೃತಿ ಮೈಸೂರು ಜಿಲ್ಲೆಯಲ್ಲಿ ಕ್ರೈಸ್ತರು ನೆಲಸಿರುವ ಪ್ರದೇಶಗಳು, ಹಾಗೂ ಅವರ ಹಿನ್ನೆಲೆಗಳ ಬಗೆಗೆ ವಿವರಗಳನ್ನು ಒದಗಿಸುತ್ತದೆ. ಕರ್ನಾಟಕ ಕ್ರೈಸ್ತರ ಮೂಲ ಹಾಗೂ ಚರ್ಚುಗಳ ಬಗೆಗೆ, ಇಲ್ಲಿನ ಕ್ರೈಸ್ತರ ಜನಪದ ಸಾಹಿತ್ಯದ ಬಗೆಗೆ ಮತ್ತು ಕ್ರೈಸ್ತ ಜಾನಪದದ ಬಗೆಗೆ ಬಿ.ಎಸ್. ತಲ್ವಾಡಿ ಅವರು ಹೊರತಂದಿರುವ ಕೃತಿಗಳು ಪರಿಶೀಲನಾರ್ಹವಾಗಿವೆ. ಕ್ರೈಸ್ತ ಜನಪದ ಸಂಪ್ರದಾಯಗಳ ಅಧ್ಯಯನ ನಡೆಸುವ ಸಂಶೋಧಕರಿಗೆ ಸಾಕಷ್ಟು ಪೂರಕ ಸಾಮಾಗ್ರಿಯನ್ನುಈ ಕೃತಿಗಳು ದೊರಕಿಸಿಕೊಡುತ್ತದೆ.

ಕ್ರೈಸ್ತರ ಪವಿತ್ರಗ್ರಂಥ ಬೈಬಲ್ಲಿನ ಹಳೆಯ ಒಡಂಬಡಿಕೆ ಹಾಗೂ ಮುಸ್ಲಿಮರ ಪವಿತ್ರ ಗ್ರಂಥ ಖುರಾನಿನ ವಿಚಾರಗಳಲ್ಲಿ ಬಹುತೇಕ ಸಾಮ್ಯತೆ ಕಂಡು ಬರುತ್ತದೆ. ಮಾತ್ರವಲ್ಲ ಕ್ರೈಸ್ತ-ಮುಸಲ್ಮಾನರ ಹೆಸರುಗಳಲ್ಲೂ ಸಾಮ್ಯತೆಯನ್ನು ಗುರುತಿಸಬಹುದು.

ಉದಾ: ಕ್ರೈಸ್ತರು `ಅಬ್ರಹಾಂ' ಎಂದು ಹೆಸರಿಡುತ್ತಾರೆ. ಮುಸ್ಲಿಮರಲ್ಲಿ ಅದು `ಇಬ್ರಾಹಿಂ' ಎಂದು

ಬಳಕೆಯಾಗಿದೆ. ಹಾಗೆಯೇ ಜೋಸೆಫ್ ಮುಸ್ಲಿಮರಲ್ಲಿ `ಯೂಸುಫ್' ಆಗಿದೆ.

ಇಂತಹ ಸಾಮ್ಯತೆಗಳಿಂದ ಕ್ರೈಸ್ತ-ಮುಸಲ್ಮಾನರಲ್ಲಿ ಧಾರ್ಮಿಕ ಸಂಬಂಧ ದೂರವಾಗಿಲ್ಲ ಎಂಬ ಭಾವನೆ ಇದೆ. ವರ್ಷಕ್ಕೊಮ್ಮೆ ಉಪವಾಸದ ದಿನಗಳನ್ನು ಎರಡೂ ಪಂಗಡದವರು ಆಚರಿಸುತ್ತಾರೆ. ಪ್ರಾರ್ಥನೆಯ ಪ್ರಾಮುಖ್ಯತೆ ಎರಡು ಪಂಗಡಗಳಲ್ಲೂ ಪ್ರಬಲವಾಗಿದೆ. ಆದರೆ ಸಾಮಾಜಿಕ ಆಚಾರಣೆಗಳಲ್ಲಿ ಸಂಪೂರ್ಣ ವ್ಯತ್ಯಾಸವನ್ನು ಕಾಣಬಹುದು. ಹಳ್ಳಿಗಳಲ್ಲಿ ನೆಲಸಿರುವ ಇತರ ಕ್ರೈಸ್ತರು ಪೂರ್ವಾಶ್ರಮದಲ್ಲಿ ಹಿಂದು ಗಳಾಗಿದ್ದ ಕಾರಣ ಹಿಂದೂ ಸಂಪ್ರದಾಯಗಳನ್ನೇ

ಉಳಿಸಿಕೊಂಡಿದ್ದಾರೆ. ಮುಸ್ಲಿಮರು ಗೋಮಾಂಸ ಸೇವಿಸುತ್ತಾರೆಂಬ ಕಾರಣದಿಂದ ಅವರ ಮನೆಗಳಲ್ಲಿ (ಮೈಸೂರಿನ ಹಳ್ಳಿಗಳಲ್ಲಿ ನೆಲಸಿರುವ) ಕ್ರೈಸ್ತರು ಊಟ ಮಾಡುವುದಿಲ್ಲ. ಇದರಿಂದ ಮೈಸೂರಿನ ಕ್ರೈಸ್ತರಲ್ಲಿ ಗೋವು ಪೂಜನೀಯ ಎಂಬ ಭಾವನೆ ಇರುವುದು ವೇದ್ಯವಾಗುತ್ತದೆ.

ಕರ್ನಾಟಕದ ಬುಡಕಟ್ಟು ಕ್ರೈಸ್ತರು ಸಾಕಷ್ಟು ಭೌತಿಕ ಜನಪದ ಸಂಪ್ರದಾಯಗಳನ್ನು ಹೊಂದಿದ್ದಾರೆ. ಇವರ ಉಡುಗೆ-ತೊಡುಗೆ, ಅಡುಗೆಗಳಲ್ಲಿ ವೈದ್ಯ ಪದ್ಧತಿ, ವೃತ್ತಿಗಳಲ್ಲಿ ಕಂಡು ಬರುವ ಆಚಾರ-ವಿಚಾರಗಳು ವಿಶಿಷ್ಟವಾಗಿವೆ. ಈ ಜಿಲ್ಲೆಯ ಕ್ರೈಸ್ತರ ಉಡುಗೆ-ತೊಡುಗೆಗಳು ಇತರ ಧರ್ಮೀಯರಿಗಿಂತ ಬಿನ್ನವಾಗಿವೆ. ನಾಗರಿಕ ಸಮಾಜದಲ್ಲಿ ಉಡುಗೆ-ತೊಡುಗೆಗಳಿಂದಲೇ ಕ್ರೈಸ್ತರೆಂದು ಗುರುತಿಸುವಷ್ಟು ವ್ಯತ್ಯಾಸ ಕಂಡುಬರುತ್ತದೆ. ಇತರ ಧರ್ಮೀಯರು ರೂಢಿಯಲ್ಲಿರದಂತಹ ಸಿದ್ಧಪಡಿಸದೆಯಿರುವ ಕೆಲವು ತಿನಿಸು ತಿಂಡಿಗಳನ್ನು ಕ್ರೈಸ್ತರು ತಮ್ಮ ಹಬ್ಬಗಳಲ್ಲಿ ಮಾಡುವುದು ಸಿದ್ಧಪಡಿಸುವುದುಂಟು.

ಹಿಂದೂಧರ್ಮವು ಭಾಗವತ, ಪುರಾಣ, ಐತಿಹ್ಯಗಳನ್ನು ಹೊಂದಿರುವಂತೆ ಕ್ರೈಸ್ತ ಧರ್ಮವೂ ತನ್ನದೇ ಆದ ಪುರಾಣಗಳನು ಹೊಂದಿದೆ. "Ancient near eastern myth in the Bible" ಎಂಬ ಪುಸ್ತಕದ ಆಧಾರದ ಮೇಲೆ, ಅಧ್ಯಯನಕ್ಕೆ ಅನುಕೂಲವಾಗುವಂತೆ ಇವರ ಪುರಾಣಗಳನ್ನು ಮೂರು ವಿಭಾಗ ಗಳಾಗಿ ಮಾಡಿಕೊಂಡಿದೆ:

1. ನರಕಲೋಕದ ಸೃಷ್ಟಿ
2. ಜಗತ್ತಿನ ಸೃಷ್ಟಿ
3. ಜಲಪ್ರಳಯ

ಈ ಪುರಾಣಗಳು ಕರ್ನಾಟಕದ ಬುಡಕಟ್ಟು ಕ್ರೈಸ್ತರ ಜೀವನದಲ್ಲಿ ಬೀರಿರುವ ಪ್ರಭಾವವನ್ನು ಅಭ್ಯಸಿಸಲಾಗಿದೆ. ಅಲ್ಲದೆ ವಾಕ್ಪರಂಪರೆಯಲ್ಲಿ ರೂಢಿಯಲ್ಲಿರುವ ಅನೇಕ ಕಥೆ, ಗೀತೆ, ಗಾದೆ, ಒಗಟು ಗಳನ್ನು ಸಂಗ್ರಹಿಸಿ, ಅವುಗಳ ತೌಲನಿಕ ಅಧ್ಯಯನ ಮಾಡಲಾಗಿದೆ. ಜನಪದ ಕಲೆಗಳಾದ ಕೋಲಾಟ, ಮತ್ತು ನಾಟಕಗಳು, ನೃತ್ಯ ಬುಡಕಟ್ಟು ಕ್ರೈಸ್ತರಲ್ಲಿ ರೂಡಿಯಲ್ಲಿದೆ. ಕರಕುಶಲ ಕಲೆಗಳಲ್ಲಿ ಬುಡಕಟ್ಟು ಕ್ರೈಸ್ತರು ನಿಸ್ಸೀಮರು. ಪೀಠೋಪಕರಣಗಳ ಅಲಂಕಾರ, ಪೀಠೋಪಕರಣಗಳಿಗೆ ಉಪಯೋಗಿಸುವ ವಸ್ತ್ರಗಳನ್ನು ಕಲಾತ್ಮಕವಾಗಿ ಹೊಲಿಯುವುದು, ದಾರದ ಲೇಸುಗಳ ವಿನ್ಯಾಸ, ಹೂದಾನಿಗಳನ್ನು ಜೋಡಿಸುವುದು, ಗೋದಲಿ ನಿರ್ಮಿಸುವುದು, ಕ್ರಿಸ್ಮಸ್‌ಸ್ಟಾರ್, ಕ್ರಿಸ್ಮಸ್ ಟ್ರೀ ಗಳನ್ನು ತಯಾರಿಸುವುದು, ಗೃಹಾಲಂಕಾರ, ತೇರು ಜೋಡಿಸುವಿಕೆ ಮುಂತಾದ ಕೆಲಸಗಳಲ್ಲಿ ಇವರ ಕಲಾನೈಪುಣ್ಯತೆ ಕಂಡು ಬರುತ್ತದೆ. ಈ ಎಲ್ಲಾ ವಿಷಯಗಳನ್ನು ಭೌತಿಕ, ಶಾಬ್ದಿಕ ಮತ್ತು ಜನಪದ ಕಲೆ ಎಂಬ ಉಪವಿಭಾಗಗ ಳಾಗಿ ಮಾಡಿಕೊಂಡು ಎರಡನೆಯ ಅಧ್ಯಾಯದಲ್ಲಿ ಮಂಡಿಸಲಾಗಿದೆ.

ಯಾವುದೇ ಒಂದು ಸಮುದಾಯದ ಸಾಂಸ್ಕೃತಿಕ ಅಧ್ಯಯನ ಹುಟ್ಟಿನಿಂದ ಸಾವಿನವರೆಗೆ ಅವರ ಸಂಪ್ರದಾಯ ಮತ್ತು ಆಚರಣೆಗಳ ಬಗೆಗೆ ಮಾಹಿತಿಯನ್ನು ಒದಗಿಸುತ್ತದೆ. ಕರ್ನಾಟಕದ ಬುಡಕಟ್ಟು ಕ್ರೈಸ್ತರಲ್ಲಿ ಈ ಆಚರಣೆ ಮತ್ತು ಸಂಪ್ರದಾಯಗಳು ಇತರ ಧರ್ಮೀಯರಿಗಿಂತ ಬಿನ್ನವಾಗಿವೆ, ಎಂಬುದು ಒಂದು ಅಂಶವಾದರೆ, ಕ್ರೈಸ್ತರಲ್ಲೇ ವಿಬಿನ್ನ ಪಂಗಡಗಳಲ್ಲಿ ಆಚರಣೆಯಲ್ಲಿರುವ ಸಂಪ್ರದಾಯಗಳಲ್ಲೂ ಸಾದೃಶ್ಯ-ವೈದೃಶ್ಯಗಳು ಕಾಣಸಿಗುತ್ತದೆ. ಕನ್ನಡ, ಕೊಂಕಣಿ, ತುಳು ಭಾಷೆಗ ಳನ್ನಾಡುವ ಬುಡಕಟ್ಟು ಕ್ರೈಸ್ತರಲ್ಲಿ ರೂಢಿಯಲ್ಲಿರುವ ನಂಬಿಕೆ, ಆಚರಣೆಗಳು ಮೊದಲೇ

ಹೇಳಿರುವಂತೆ ಹಿಂದೂ ಸಂಪ್ರದಾಯ, ಪದ್ಧತಿಗಳನ್ನು ಬಹುಮಟ್ಟಿಗೆ ಹೋಲುವಂತಿದೆ. ಸಿದ್ದಿ ಕ್ರೈಸ್ತರ ಮದುವೆ ಸಂಪ್ರದಾಯಗಳು ಭಿನ್ನವಾದ ರೀತಿ ರಿವಾಜುಗಳನ್ನು ಹೊಂದಿವೆ. ಕಾರಣ ಇವರು ಮೂಲತಃ ಭಾರತೀಯರಲ್ಲ. ಕಾರಣಾಂತರದಿಂದ ಗೋವಾ, ಆಫ್ರಿಕಾ, ಗುಜರಾತ್ ಮುಂತಾದ ಕಡೆಗಳಿಂದ ವಲಸೆ ಬಂದವರಾಗಿದ್ದಾರೆ. "ಹುಟ್ಟಿನಿಂದ ಸಾವಿನವರೆಗಿನ ಸಂಸ್ಕಾರಗಳಲ್ಲಿ ಹೆಚ್ಚು ಸಂಪ್ರದಾಯಗಳನ್ನು ಹೊಂದಿರುವಂಥದ್ದು. ಜೀವನದ ಆವರ್ತನದಲ್ಲಿ ಜನಪದ ಜಗತ್ತು ಮದುವೆಗೆ ಮುಖ್ಯಸ್ಥಾನ ಕೊಟ್ಟಿದೆ" (ಬಿಳಿಮಲೆ:1990:7) ಅಂತೆಯೇ ಕರ್ನಾಟಕದ ಬುಡಕಟ್ಟು ಕ್ರೈಸ್ತರ ಸಾಂಸ್ಕೃತಿಕ ಅಧ್ಯಯನದಲ್ಲೂ ವಿವಾಹ ಸಂಸ್ಕಾರವನ್ನು ವಿಶೇಷವಾಗಿ ಚರ್ಚೆಗೆ ಒಳಪಡಿಸಲಾಗಿದೆ.

ಕರ್ನಾಟಕದ ಕ್ರೈಸ್ತ ಬುಡಕಟ್ಟುಗಳ ಜೀವನ ಮೌಲ್ಯಗಳೇ ಆ ಸಮುದಾಯದ ಸಾಂಸ್ಕೃತಿಕ ಅಧ್ಯಯನದ ಮೂಲವಾಗಿದೆ.ಅವರ ಬದುಕಿನ ಸಮಗ್ರ ಅಂಶಗಳಲ್ಲಿ ಕ್ರೈಸ್ತ ಸಂಸ್ಕೃತಿ ಹಾಸು ಹೊಕ್ಕಾಗಿದೆ. ಈ ದೃಷ್ಟಿಯಿಂದ ಬುಡಕಟ್ಟು ಕ್ರೈಸ್ತರ ಸಾಂಘಿಕ ಜೀವನ,ಕುಟುಂಬ ಪದ್ಧತಿ, ಇವರ ವೃತ್ತಿಗಳಲ್ಲಿ, ವಿಶಿಷ್ಟತೆಗಳಿರುತ್ತವೆ. ಮತ್ತು ಆ ಪರಿಸರದ ಪ್ರಭಾವದಿಂದ ಅನೇಕ ಬದಲಾವಣೆಗಳು ಉಂಟಾಗಿವೆ.ಆಯಾ ಪ್ರದೇಶದಲ್ಲಿ ನೆಲೆಸಿದ ನಂತರ ಜೀವನ ನಿರ್ವಹಣೆಗೆ ಕೈಗೊಂಡ ಮಾರ್ಗಗಳು, ಇಲ್ಲಿನ ನಾಗರೀಕತೆಗೆ ಸ್ಪಂದಿಸಿದ ರೀತಿ, ಮತ್ತು ಆರಾಧನೆಯಲ್ಲಿ ಪಾಲ್ಗೊಳ್ಳುವ, ಪ್ರಭಾವಿತರಾಗುವ, ರೀತಿ-ನೀತಿಯನ್ನು ಗುರುತಿಸಲು ಸಾಧ್ಯವಾಗಿದೆ.

ಈ ಎಲ್ಲಾ ಹಿನ್ನೆಲೆಗಳನ್ನು ಸಮಗ್ರವಾಗಿ ಕ್ರೊಢಿಕರಿಸಿ ಒಂದೇ ಒಂದು ಮಾತಿನಲ್ಲಿ ಹೇಳುವುದಾದರೆ, ಕನ್ನಡ ನಾಡಿನಲ್ಲಿ ಕ್ರೈಸ್ತ ಬುಡಕಟ್ಟುಗಳು ಬದುಕಿ ಬಾಳಬೇಕು, ಉಳಿಯ ಬೇಕು, ಬೆಳೆಯ ಬೇಕು.

ಅಭಿವೃದ್ಧಿ ಮತ್ತು ಪರಂಪರೆಯ ರಕ್ಷಣೆ ಇವೆರಡೂ ಇಂದು ಅಗತ್ಯ. ಈ ಸಮುದಾಯದ ಹಿತಾಶಕ್ತಿಗಳನ್ನು ಕಾಪಾಡುವ ಪ್ರಯತ್ನ ನಡೆಯಬೇಕು. ಇಲ್ಲದೆ ಹೋದರೆ ನಾಗರೀ ಕತೆಯ ಪ್ರವಾಹದಲ್ಲಿ ಅವರೂ ಸಹ ಮುಳುಗಿ ಹೋಗುತ್ತಾರೆ.

ಆದುದರಿಂದ ಅವರ ಹಳೆಯ ಬದುಕಿನ ಆಧಾರದಲ್ಲಿಯೇ ನಿಲ್ಲುವ ಹೊಸ ಬಾಳನ್ನು ಕಟ್ಟಲು ಇಂದು ಬುಡಕಟ್ಟು ಕ್ರೈಸ್ತರು ಮುಂದಾಗಬೇಕು. ಇಲ್ಲದಿದ್ದಲ್ಲಿ ಸಾಂಸ್ಕೃತಿಕ ಸಂಪರ್ಕವೂ ಕೂಡ ಹಲವಾರು ಸಮಸ್ಯೆಗಳನ್ನು ಉಂಟು ಮಾಡುತ್ತದೆ.ಆದಿವಾಸಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೊಳಿಸುವುದಕ್ಕೂ ಮುಂಚೆ ಅವರ ಸಮಸ್ಯೆಗಳನ್ನು ಅರಿತುಕೊಳ್ಳುವುದು ಮುಖ್ಯ.

ಸಾಮಾಜಿಕ ಸಂಘಟನೆ, ಆರ್ಥಿಕ ವ್ಯವಸ್ಥೆ, ಧಾರ್ಮಿಕ ಲಕ್ಷಣಗಳು, ಸಾಂಸ್ಕೃತಿಕ ಸಂಪರ್ಕದ ಮಟ್ಟ ಮುಂತಾದವುಗಳನ್ನು ಲಕ್ಷದಲ್ಲಿರಿಸಿಕೊಂಡಾಗ ಸಮಸ್ಯೆಗಳನ್ನು ಗುರುತಿಸುವ ಕಾರ್ಯಗಳು ಪರಿಹಾರವಾಗಿ ಅಭಿವೃದ್ಧಿಯ ಹಿಡಿತವು ಬದಲಾಗುತ್ತದೆ. ಬುಡಕಟ್ಟು ಕ್ರೈಸ್ತರ ಜನ ಸಮೂಹದ ಪ್ರಮುಖ ವಾಹಿನಿಯಲ್ಲಿ ಸಮರ್ಪಕವಾಗಿ ಸೇರಲು ದಾರಿಯಾಗುತ್ತದೆ. ಇಂತಹ ಪ್ರಸ್ತಾವನೆಯ

ಮೂಲಕವೇ ಆದಿವಾಸಿಗಳಿಗೆ ಸಂರಕ್ಷಣೆ ನೀಡಿರುವ ಸಂವಿಧಾನದ ಬದ್ಧತೆಯನ್ನು ಜಾರಿಗೊಳಿಸಬಹುದಾಗಿದೆ.

# ಅಧ್ಯಾಯ – ಎರಡು

## ಕರ್ನಾಟಕ ಕ್ರೈಸ್ತರ ಮೂಲ ಪರಂಪರೆ ಮತ್ತು ಸೃಷ್ಟಿ ಪುರಾಣಗಳು

ಕ್ರೈಸ್ತ ಧರ್ಮವನ್ನು ಸ್ವೀಕರಿಸಿದ ಕ್ರಿಸ್ತನ ಅನುಯಾಯಿಗಳು ಕ್ರೈಸ್ತರೆನಿಸಿಕೊಳ್ಳುತ್ತಾರೆ. ಒಂದೇ ಧರ್ಮಸಭೆಯ ಅಡಿಯಲ್ಲಿ (Church) ಧರ್ಮಪಾಲನೆ ಮಾಡುತ್ತಿರುವ ಇವರು ಹಲವಾರು ಪಂಗಡಗಳಿಗೆ ಸೇರಿದವರಾಗಿದ್ದು, ವಿಭಿನ್ನ ರೀತಿಯ ಸಂಪ್ರದಾಯ, ಆಚರಣೆಗಳನ್ನು ರೂಢಿಸಿ ಕೊಂಡಿರುವುದು ಒಂದು ವೈಶಿಷ್ಟ್ಯವೇ ಆಗಿದೆ. ಯಾವುದೇ ಒಂದು ಸಮುದಾಯದ ಸಾಂಸ್ಕೃತಿಕ ಅಧ್ಯಯನದಲ್ಲಿ ತೊಡಗುವಾಗ ಆ ಸಮುದಾಯದ ಮೂಲ ಮತ್ತು ಪರಂಪರೆ, ನೆಲಸಿರುವ ಪ್ರದೇಶಗಳು, ಆ ಧರ್ಮದ ಪ್ರಭಾವ, ರೂಢಿಯಲ್ಲಿರುವ ಸಂಪ್ರದಾಯಗಳು, ಆಂತರಿಕ ಸಮಾಜ ರಚನೆ, ಸಾಮಾಜಿಕ ಸ್ಥಾನಮಾನಗಳನ್ನು ಗಮನಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಬುಡಕಟ್ಟು ಕ್ರೈಸ್ತರನ್ನು ಕುರಿತು ಈ ಕೆಳಗೆ ಕಾಣಿಸಿದ ಉಪಶೀರ್ಷಿಕೆಗಳಲ್ಲಿ ವಿವೇಚನೆಗೆ ಗುರಿಪಡಿಸಿದೆ:

1) ಕರ್ನಾಟಕದಲ್ಲಿ ಕ್ರೈಸ್ತರ ಮೂಲ ಮತ್ತು ಪರಂಪರೆ
2) ನೆಲಸಿರುವ ಪ್ರದೇಶಗಳು
3) ಒಳಪಂಗಡಗಳು
4) ಇತರ ಧರ್ಮೀಯರೊಡನೆ ಇವರ ಸಂಬಂಧ.

ಕ್ರೈಸ್ತಧರ್ಮ ಕರ್ನಾಟಕವನ್ನು ಪ್ರವೇಶಿಸಿ ಹಲವಾರು ಶತಮಾನಗಳೇ ಸಂದಿವೆ. ಆದರೂ ನಿರ್ದಿಷ್ಟವಾಗಿ ಅದು ಎಂದು ಪ್ರವೇಶಿಸಿತೆಂದು ಹೇಳಲು ಬರುವುದಿಲ್ಲ. ಈ ಸಂಬಂಧ ಕೆಲಸ ಮಾಡಿರುವ ವಿದ್ವಾಂಸರ ಅಭಿಪ್ರಾಯಗಳಲ್ಲಿ ಒಮ್ಮತವಿಲ್ಲ. ಆದರೂ ಇಲ್ಲಿ ಮುಖ್ಯವಾದ ಕೆಲವು ಅಂಶಗಳನ್ನು ಲಕ್ಷಿಸುವುದು ಯುಕ್ತವೆನಿಸುತ್ತದೆ.

ಕರ್ನಾಟಕದಲ್ಲಿ ಕ್ರೈಸ್ತಧರ್ಮದ ಸ್ಪಷ್ಟಗುರುತು ಸಿಗುವುದು ಪೋರ್ಚುಗೀಸರು ಭಾರತಕ್ಕೆ ಬಂದ ಕಾಲದಿಂದೀಚೆಗೆ. ಆದರೆ ಇದಕ್ಕಿಂತ ಮೊದಲೇ ಕ್ರೈಸ್ತರು ಕರ್ನಾಟಕದಲ್ಲಿದ್ದರು ಎಂಬುದಕ್ಕೆ ಸಾಕ್ಷ್ಯಾಧಾರಗಳಿವೆ -ಕ್ರಿಸ್ತನ ಹನ್ನೆರಡು ಮಂದಿ ಶಿಷ್ಯರಲ್ಲೊಬ್ಬನಾದ ಸಂತ ಥಾಮಸನನ್ನು ಕ್ರಿ.ಶ. 52 ರಲ್ಲಿ ' ಗುಡ್ನಾಫರ್ ' ಎಂಬ ದೊರೆ ಆಮಂತ್ರಿಸಿದ್ದನು. ಆತ ಮೈಸೂರಿನ 'ಕುಟ್ನಾಪ್ಪಾರ್' ಅಥವಾ ಕಂದಪ್ಪ ರಾಜನಿರಬಹುದೆಂದು ಹಲವು ವಿದ್ವಾಂಸರ ಅಭಿಪ್ರಾಯ (ಕನ್ನಡ ವಿಷಯ ವಿಶ್ವಕೋಶ ಸಂಪುಟ, ಪು. 423) ಸಂತ ಥಾಮಸನು ಕರ್ನಾಟಕಕ್ಕೆ ಬಂದಿದ್ದನು ಎಂಬ ಹೇಳಿಕೆಗೆ ಒತ್ತುಕೊಟ್ಟ ಮತ್ತೊಂದು ಪ್ರಬಲ ಆಧಾರವನ್ನು ಗುರುತಿಸಬಹುದು. ಅದೆಂದರೆ ಮದ್ರಾಸಿನ ಸಮೀಪದ ಮೈಲಾಪುರದ ಸೆಂಟ್ ಥಾಮಸನ ಸಮಾಧಿಯ ದೇವಸ್ಥಾನಕ್ಕೆ ಉಂಬಳಿಯನ್ನು ಕೊಟ್ಟ ಶಾಸನ. ಇದರಲ್ಲಿ ಬುಕ್ಕರಾಯನ ಹೆಸರಿದೆ. ಈ ಕಾಲವು ಕ್ರಿ.ಶ 1376 ಇರಬಹುದು ಎಂದು ಊಹಿಸಲಾಗಿದೆ.

ಸುಮಾರು 6ನೇ ಶತಮಾನದಲ್ಲಿ ಕ್ರೈಸ್ತಮತ ಕರ್ನಾಟಕಕ್ಕೆ ಬಂದಿತೆಂಬುದಾಗಿ ಹಿರಿಯ ವಿದ್ವಾಂಸರುಗಳಾದ ಸಿ. ಹಯವದನರಾವ್ ಮತ್ತು ಎಂ.ವಿ.ಕೃಷ್ಣರಾವ್ ಅವರುಗಳ ಉಲ್ಲೇಖ ಗಳೊಂದಿಗೆ ತಲ್ವಾಡಿಯವರು ಪ್ರತಿಪಾದಿಸಿದ್ದಾರೆ. ಇವರ ಉಲ್ಲೇಖಗಳನ್ನು ಒಪ್ಪಿಕೊಳ್ಳುವುದಾದರೆ ಕ್ರೈಸ್ತಮತ ಕರ್ನಾಟಕಕ್ಕೆ ಕಾಲಿಟ್ಟ ಕಥೆಯನ್ನು 6ನೇ ಶತಮಾನಕ್ಕೆ ಕೊಂಡೊಯ್ಯಲು ಸಾಧ್ಯವಾಗುತ್ತದೆ. ಇವಕ್ಕೆ ಚಾರಿತ್ರಿಕ ಆಧಾರಗಳು ದೊರಕದಿದ್ದರೂ ಊಹೆ ತಪ್ಪೆಂದು ಸಮರ್ಥಿಸಲಾಗದು (ತಲ್ವಾಡಿ 1989:36).

ಹಾಗೆಯೇ ಕ್ರೈಸ್ತಧರ್ಮವು 1325ರ ಹೊತ್ತಿನಲ್ಲಿ ಕರ್ನಾಟಕದಲ್ಲಿ ಅಸ್ತಿತ್ವದಲ್ಲಿತ್ತು ಎಂದು ಅನೇಕ ವಿದ್ವಾಂಸರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ: " ಕ್ರಿ.ಶ. 1321 ರಲ್ಲಿ ಡೊಮಿನಿಕನ್ ಸಭೆಯ ಗುರುಗಳು ಕರ್ನಾಟಕಕ್ಕೆ ಬಂದರು. ಇವರ ಹೆಸರು ಫಾ॥ ಜೋರ್ಡನ್ ಎಂದು. ಇವರು ಕ್ರೈಸ್ತಮತ ಪ್ರಚಾರ ಮಾಡುವ ಹಿರಿದಾಸೆಯಿಂದ ಕೆಲವು ಫ್ರಾನ್ಸಿಸ್ಕನ್ ಸನ್ಯಾಸಿಗಳ ಜೊತೆ ಭಾರತಕ್ಕೆ ಬಂದರು. ತಮ್ಮ ಜೊತೆಯಲ್ಲಿದ್ದ ಸನ್ಯಾಸಿಗಳನ್ನು ಮಹಾರಾಷ್ಟ್ರದ ಗಡಿಪ್ರದೇಶ ಠಾಣಾದಲ್ಲೇ ಬಿಟ್ಟು, ಇವರು ಕರ್ನಾಟಕಕ್ಕೆ ಬಂದು ನೆಲೆನಿಂತರು. ಕ್ರೈಸ್ತಧರ್ಮದ ಬೀಜಬಿತ್ತಲು ಅವರು ಪಟ್ಟ ನೋವು, ಸಂಕಟಗಳ ಬಗ್ಗೆ ಅವರು ಬರೆದಿದ್ದ ಪತ್ರದ ಆಧಾರ ದೊರೆತಿದೆ " (ಎಸ್.ಎಂ. ಮಾರಾ 1972:55).

ಕ್ರಿ.ಶ. 1445ರಲ್ಲಿ ವಿಜಯನಗರದ ಅರಸರ ಬಳಿ ಕ್ರೈಸ್ತ ದಿವಾನನೊಬ್ಬ ಇದ್ದನೆಂದು ತಿಳಿದು ಬರುತ್ತದೆ (Tribes & Caste Vol.3) ಈತನ ಹೆಸರು ನಿಮ್ಹೆಫೆಝಿರ್ (Nimhepezir) ಎಂಬುದಾಗಿ ಕನ್ನಡ ವಿಷಯ ವಿಶ್ವಕೋಶದಲ್ಲಿ ಉಲ್ಲೇಖಿಸಲಾಗಿದೆ (ಪು. 424). ಇವೆಲ್ಲಾ ಕರ್ನಾಟಕದಲ್ಲಿ ಕ್ರೈಸ್ತಧರ್ಮ ಪೋರ್ಚುಗೀಸರು ಬರುವ ಮುನ್ನವೇ ಇದ್ದಿತೆಂಬುದಕ್ಕೆ ಸಮರ್ಥನೆ ನೀಡುತ್ತವೆ.

ಇಷ್ಟು ಹಳೆಯ ಇತಿಹಾಸವನ್ನು ಹೊಂದಿದ್ದರೂ ಕ್ರಿಸ್ತನ ಪ್ರಭಾವವನ್ನು ಕರ್ನಾಟಕದಲ್ಲಿ ತೀವ್ರವಾಗಿ ಬೀರಲು ಸಫಲವಾಗಿಲ್ಲವೆಂಬ ಅಭಿಪ್ರಾಯವಿದೆ (ಮಾನ್ಯುಯೆಲ್‌ದೂತ 1972 ಜೂನ್). ಇದಕ್ಕೆ ಹಲವಾರು ಕಾರಣಗಳಿವೆ. ಈ ಕಾರಣಗಳನ್ನು ಭೌಗೋಳಿಕ, ಐತಿಹಾಸಿಕ ಮತ್ತು ಸಾಮಾಜಿಕ ಕಾರಣಗಳೆಂದು ವಿಂಗಡಿಸಬಹುದು.

2.1 **ಭೌಗೋಳಿಕ ಹಿನ್ನೆಲೆ** ಕರ್ನಾಟಕವು ಒಂದು ಒಳನಾಡು.ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು ಮಾತ್ರ ಸಮುದ್ರ ಕರಾವಳಿಯನ್ನು ಹೊಂದಿವೆ.ಇದರ ಉದ್ದ ಕೇವಲ ಕಿ.ಮೀ.ಗಳು ಮಾತ್ರ. ಆದ್ದರಿಂದ ಈ ಎರಡು ಜಿಲ್ಲೆಗಳನ್ನು ಬಿಟ್ಟು ಇತರೆ ಪ್ರದೇಶಗಳು ವಿದೇಶದಿಂದ ಬಂದ ವರ್ತಕರ ಮತ್ತು ಧರ್ಮಪ್ರಬೋಧಕರ ಪ್ರಭಾವಕ್ಕೆ ಸುಲಭವಾಗಿ ಒಳಗಾಗಲಿಲ್ಲ. ತೀರಪ್ರದೇಶಗಳಾದ ಕೇರಳ,ಆಂಧ್ರ ಮತ್ತು ತಮಿಳುನಾಡುಗಳಂತೆ ಕರ್ನಾಟಕ ಕ್ರೈಸ್ತಮತದ ಪ್ರಚಾರಕ್ಕೆ ಹೆಚ್ಚು ಒಳಗಾಗಲಿಲ್ಲ. ಎರಡನೆಯದಾಗಿ ತೀರ ಪ್ರದೇಶಕ್ಕೂ ಒಳನಾಡಿಗೂ ಮಧ್ಯೆ ಇರುವ ಪಶ್ಚಿಮಘಟ್ಟಗಳು ಹಾಗೂ ಅನಾನುಕೂಲಕರವಾದ ರಸ್ತೆ ಮಾರ್ಗಗಳು ಮತಪ್ರಚಾರಕರಿಗೆ ಸಾಕಷ್ಟು ತೊಂದರೆಯನ್ನು ಉಂಟು ಮಾಡಿರುವ ಸಾಧ್ಯತೆಯಿದೆ.

2.2 **ಐತಿಹಾಸಿಕ ಹಿನ್ನೆಲೆ** ಗೋವಾದಲ್ಲಿ ಪೋರ್ಚುಗೀಸರು ಅನೇಕ ಸ್ಥಳೀಯ ಭಾರತೀಯರನ್ನು ಮತಾಂತರಗೊಳಿಸಿದರು. ಆದರೆ 1560ರಲ್ಲಿ ಪೋರ್ಚುಗೀಸರು ಜಾರಿಗೆ ತಂದ "ಕೋರ್ಟ್ ಆಫ್ ಇನ್‌ಕ್ವಿಸಿಷನ್" (The Mysore T & C. Vol.III Pp-4) ಪರಿಣಾಮವಾಗಿಯೂ, 1683 ರಲ್ಲಿ ಗೋವಾದ ಮೇಲೆ ನಡೆದ ಮರಾಠನಾಯಕ ಶಾಂಬಾಜಿಯ ಧಾಳಿಯ ಪರಿಣಾಮದಿಂದಾಗಿಯೂ ಕ್ರಿ.ಶ. 1747ರ ವೇಳೆಗೆ ನಡೆದ ಇನ್ನಿತರ ಮರಾಠಿಗರ ದಾಳಿಯ ಪರಿಣಾಮ ಸಾವಿರಾರು ಕ್ರೈಸ್ತರು ಕರ್ನಾಟಕದ ನಾನಾ ಭಾಗಗಳಿಗೆ ವಿಶೇಷವಾಗಿ ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಿಗೆ ವಲಸೆ ಹೋದರು. ಈ ಕಾರಣದಿಂದ ಕರ್ನಾಟಕದಲ್ಲಿ ಕ್ರೈಸ್ತರ ಸಂಖ್ಯೆ ಬೆಳೆಯಿತು. ಆದರೆ 18ನೇ ಶತಮಾನದ ಅಂತ್ಯದಲ್ಲಿ ಕ್ರೈಸ್ತಮತದ ಬೆಳವಣಿಗೆಗೆ ತೀವ್ರವಾದ ಹಿನ್ನೆಡೆಯಾಯಿತು. ಏಕೆಂದರೆ ಕ್ರಿ.ಶ. 1799ರವರೆಗೆ ಮೈಸೂರು ರಾಜ್ಯದಲ್ಲಿ ಅತಿ ಪ್ರಬಲರಾಗಿದ್ದ ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಆಳ್ವಿಕೆಯ

ಫಲವಾಗಿ ಕನ್ನಡ ನಾಡಿನಲ್ಲಿ ಕ್ರೈಸ್ತಮತವೆಂಬ ಮಹಾವೃಕ್ಷದ ಕೊಂಬೆರೆಂಬೆಗಳೆಲ್ಲ ಕತ್ತರಿಸಲ್ಪಟ್ಟವು. ಹಾಸನದ ಬಳಿ ' ಗ್ರಾಮ ' ಎಂಬಲ್ಲಿದ್ದ ಒಂದು ಚರ್ಚು ಕಮಾಂಡರ್ ಸೂರಪ್ಪನಿಂದ ಉಳಿದುಕೊಂಡಿತು. ಉಳಿದೆಲ್ಲಾ ಚರ್ಚುಗಳು ನೆಲಸಮವಾದವು. ಇಂತಹ ಐತಿಹಾಸಿಕ ಕಾರಣಗಳು ಕರ್ನಾಟಕದಲ್ಲಿ ಕ್ರೈಸ್ತ ಧರ್ಮದ ಬೆಳವಣಿಗೆಗೆ ಆಡಚಣೆಗಳಾದವು ಎಂದು ಇತಿಹಾಸದ ಮೂಲಗಳಿಂದ ತಿಳಿದು ಬರುತ್ತದೆ.

**2,3 ಸಾಮಾಜಿಕ ಹಿನ್ನೆಲೆ** ಕಠಿಣವಾದ ಜಾತಿಪದ್ಧತಿ ಹಾಗೂ ಸಂಪ್ರದಾಯದ ಕಾರಣದಿಂದ ಕ್ರೈಸ್ತಮತ ಬೋಧಕರು ಹೆಚ್ಚಾಗಿ ಕೆಳ ವರ್ಗದವರನ್ನೇ ಮತಾಂತರಗೊಳಿಸಿದರು. ಇದನ್ನು ಸಮರ್ಥಿಸಲು ವಿದ್ವಾಂಸರ ಕೆಲವು ಮಾತುಗಳನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. "ಸೆಂಟ್ ಫ್ರಾನ್ಸಿಸ್ ಕ್ಸೇವಿಯರ್ ಮತ್ತು ಅವರ ಹಿಂದಿನ ಮಿಷನರಿಗಳು ಹೆಚ್ಚಾಗಿ ಕೆಲಸ ಮಾಡಿದ್ದು ಗೋವಾದ ಬೆಸ್ತರ ಜೊತೆ, ಆದ್ದರಿಂದ ಕೆಳಜಾತಿಯವರು ಹೆಚ್ಚಿನ ಸಂಖ್ಯೆಯಲ್ಲಿ ಮತಾಂತರ ಹೊಂದಿದ್ದರು. ಇದರಿಂದ ಕ್ರೈಸ್ತಮತ ಆದ್ದರಿಂದ ಕೆಳಜಾತಿಯವರಿಗೆ ಮತ್ತು ಪರಂಗಿಯವರಿಗೆ ಎಂಬ ಭಾವನೆ ಬೇರೂರಿತ್ತು. ಭಾರತದ ಭವ್ಯವೂ ಪುರಾತನವೂ ಆದ ಸಂಸ್ಕೃತಿಯನ್ನೊಳಗೊಂಡಿದ್ದ ಬ್ರಾಹ್ಮಣರನ್ನು ಪರಿವರ್ತಿಸುವುದು ಅಷ್ಟೇನೂ ಸುಲಭವಾದ ಕೆಲಸವಾಗಿರಲಿಲ್ಲ " (ನಾಗೇಗೌಡ 1964: xxiv). ಈ ಮಾತುಗಳು ಮೇಲಿನ ಕಾರಣವನ್ನು ಸಮರ್ಥಿಸುತ್ತವೆ. ಆರ್ಥಿಕವಾಗಿ ಹಿಂದುಳಿದಿದ್ದ, ಒಂದು ಹೊತ್ತಿನ ಊಟಕ್ಕೂ ಭವಣೆ ಪಡುತ್ತಿದ್ದ ಜನ ಮತ ಧರ್ಮಕ್ಕಿಂತಲೂ ಜೀವನವನ್ನು ರೂಪಿಸಿಕೊಳ್ಳುವ ಮಾರ್ಗವನ್ನು ಕಂಡುಕೊಳ್ಳುವುದು ಅನಿವಾರ್ಯವಾಗಿತ್ತು. ಈ ಮಾತುಗಳಿಗೆ ಒತ್ತುಕೊಟ್ಟಂತೆ ಅಬ್ಬೆದುಬ್ಬೆ ಅವರು ತಮ್ಮ ಪತ್ರವೊಂದರಲ್ಲಿ ಹೀಗೆಂದು ಬರೆದಿದ್ದಾರೆ : "During the long period I have lived in India in the capacity of Missionary, in all between two and three hundred converts of both sexes, of this number two third were pariahs or beggars; and the rest were composed of Sudras vagrants and out east of several tribes, who being without resources, turned Christians in order to form connexious, chiefly for the purpose of marriage, or with some other interested view" (The Jesuits in Mysore 1955 Pp. 235)

ವಿದ್ವಾಂಸರ ಈ ಮಾತುಗಳನ್ನು ಸಮರ್ಥಿಸುತ್ತ ಮೇಲು ಜಾತಿಯವರಿಗೆ ಮೂಲ ಅವಶ್ಯಕತೆಗಳ ಅಭಾವವಿಲ್ಲದ್ದರಿಂದ ಅವರು ತಮ್ಮ ಸ್ಥಾನಮಾನಗಳನ್ನು ಸಮಾಜದಲ್ಲಿ ಉಳಿಸಿಕೊಂಡಿದ್ದರೆಂಬುದನ್ನು ಒಪ್ಪಿಕೊಳ್ಳಬಹುದು. ಕ್ರೈಸ್ತರು ಕೀಳುಜಾತಿಯವರನ್ನು ಮತಾಂತರ ಗೊಳಿಸುವುದನ್ನು ಕಂಡು, ಮೇಲುಸ್ತರದವರಿಗೆ ತಾವೂ ಕ್ರೈಸ್ತಮತವನ್ನು ಅವಲಂಬಿಸಿದರೆ ತಾವೂ ಕೀಳುಜಾತಿಯವರಾಗುತ್ತೇವೆಂಬ ಭಾವನೆ ಇದ್ದಿರಬೇಕು. ಆದ್ದರಿಂದಲೇ ಕ್ರೈಸ್ತಮತಕ್ಕೆ ಸೇರಿದವರನ್ನು ಹೀಯಾಳಿಸಿ ಅವರಿಗೆ ಬಹಿಷ್ಕಾರ ಹಾಕಲಾಯಿತು. ಈ ಕಾರಣದಿಂದ ಮತಾಂತರಕ್ಕೊಳಗಾದವರು ಪ್ರತ್ಯೇಕ ಕ್ಷೇತ್ರ ಅಥವಾ ಕೊಪ್ಪಲುಗಳಲ್ಲಿ ವಾಸಿಸುವುದನ್ನು ಇಂದಿಗೂ ಕಾಣುತ್ತೇವೆ[1]. ಎರಡನೆಯದಾಗಿ ಕ್ರೈಸ್ತರು ಪಾಶ್ಚಾತ್ಯ ಸಂಸ್ಕೃತಿಯ ಆರಾಧಕರು; ಕ್ರೈಸ್ತಮತಾವಲಂಬನೆ ಮಧ್ಯಪಾನ ಇತ್ಯಾದಿ ದುಶ್ಚಟಗಳಿಗೆ ರಹದಾರಿ ಎಂಬ ತಪ್ಪಭಿಪ್ರಾಯಗಳು ಕ್ರೈಸ್ತೇತರರಲ್ಲಿ ಪ್ರಬಲವಾಗಿತ್ತು. ಅಲ್ಲದೆ ಪ್ರಾರ್ಥನೆ, ಪೂಜಾವೇಳೆಯ ಹಾಡು, ಸಂಗೀತ ಪ್ರಬೋಧಕರ ಉಡುಪು ಇತ್ಯಾದಿಗಳು ಹಿಂದೂ ಸಂಸ್ಕೃತಿಗಿಂತ ಭಿನ್ನವಾಗಿ, ಪಾಶ್ಚಾತ್ಯ ಮಾದರಿಯಲ್ಲೇ ಇದ್ದವು. ಇವೆಲ್ಲಾ ಕಾರಣಗಳಿಂದಾಗಿ ಕ್ರೈಸ್ತಮತದ ಅಂಗೀಕಾರ ಅಷ್ಟು ಸುಲಭವಾಗಿರಲಿಲ್ಲ. ಆದರೂ ಮತ ಪ್ರಚಾರಕರು ತಮ್ಮ ಪ್ರಯತ್ನವನ್ನು ನಿಲ್ಲಿಸಲಿಲ್ಲ. ಇವರು ಒಂದು ಹೆಗ್ಗುರಿಯನ್ನು ಇಟ್ಟುಕೊಂಡೇ ಭಾರತಕ್ಕೆ ಬಂದಿದ್ದರು. " 1542ರಲ್ಲಿ ಸೆಂಟ್

ಫ್ರಾನ್ಸಿಸ್ ಕ್ಸೇವಿಯರನ ಆಗಮನದಿಂದ ಇಂಡಿಯಾದಲ್ಲಿ ಸ್ಥಾಪನೆಯಾದ ಜೆಸೂಯಿಟ್ ಸಂಘಟನೆಯಲ್ಲಿ ಜೆಸೂಯಿಟರು ಇಡೀ ಪ್ರಪಂಚವನ್ನೇ ಕ್ರೈಸ್ತಮತಕ್ಕೆ ಪರಿವರ್ತನೆ ಮಾಡಬೇಕೆಂಬ ದೊಡ್ಡ ಆಸೆಯಿಟ್ಟುಕೊಂಡಿದ್ದರು " (ನಾಗೇಗೌಡ, 1969–17 ಸಂಪುಟ – 3). ತಮ್ಮ ಧ್ಯೇಯ ಸಾಧನೆಗಾಗಿ ಅವರು ಮತ್ತೊಂದು ನಿರ್ಧಾರಕ್ಕೆ ಬಂದದ್ದುಂಟು. ಉಡುಪಿನಿಂದ ತಾನೊಬ್ಬ ಪೋರ್ಚುಗೀಸನೆಂದೇ ಗುರುತಿಸುವ ಸ್ಥಳೀಯರ ಮನಸೆಳೆಯುವುದು ಕಷ್ಟವೆಂದು ಸನ್ಯಾಸಿ ಉಡುಪನ್ನು ಧರಿಸಲು ಅನುಮತಿಕೊಡಬೇಕೆಂದು ತಮ್ಮ ಪ್ರಾಂತ್ಯಾಧಿಕಾರಿಗಳಲ್ಲಿ ನಿವೇದಿಸಿಕೊಂಡರು. ಏಕೆಂದರೆ ಮಧುರೆಯ ಗುರುಗಳಾಗಿದ್ದ ' ರಾಬರ್ಟ್ ನೊಬಿಲಿ ' ಎಂಬುವವರು ಸಹ ಇದೇ ದಿಸೆಯಲ್ಲಿ ಮುಂದುವರೆದು ಸಫಲರಾಗಿದ್ದು, ಇವರ ಬಗ್ಗೆ ನಾಗೇಗೌಡರು ಹೀಗೆ ಬರೆದಿದ್ದಾರೆ; " 1605 ರಲ್ಲಿ ಇಂಡಿಯಾಕ್ಕೆ ಬಂದ ಫಾದರ್ ರಾಬರ್ಟ್ ದೆ ನೊಬಲಿ ಎಂಬ ಜೊಸೂಯಿಟ್ ಮಿಷನರಿ ಮೇಲ್ಜಾತಿಯವರಾದ ಬ್ರಾಹ್ಮಣರ ಪರಿವರ್ತನೆಯಾದರೆ ಉಳಿದವರ ಪರಿವರ್ತನೆ ತಾನೇ ತಾನಾಗಿ ಆಗುತ್ತದೆ ಎಂದು ಭಾವಿಸಿದ್ದರು. ಕ್ರೈಸ್ತನಾದರೂ ಬ್ರಾಹ್ಮಣನಂತೆ ಜನಿವಾರ ಹಾಕಿಕೊಂಡು ಶಿಲುಬೆಯನ್ನು ನೇತುಹಾಕಿಕೊಡಿಂದ್ದರು. ಈ ಕಾರಣದಿಂದ ಅವನಿಗೆ ' ರೋಮನ್ ಬ್ರಾಹ್ಮಣ ' ಎಂಬ ಹೆಸರು ಬಂದಿತು " (ಅದೇ ಪುಟ xxiv).

16ನೇ ಶತಮಾನದಲ್ಲಿ ಫಾದರ್ ಚಿನ್ನಾಮಿ (ಲಿಯೋನಾರ್ಡೋ ಚಿನ್ನಾಮಿ) ಎಂಬುವವರು ಪ್ರಥಮಬಾರಿಗೆ ಹಿಂದೂ ಸನ್ಯಾಸಿಯ ಉಡುಪು ಧರಿಸಿ ಕರ್ನಾಟಕಕ್ಕೆ ಬಂದು ಧರ್ಮ ಪ್ರಚಾರದಲ್ಲಿ ತೊಡಗಿದರು. ಅವರನ್ನೇ ಆದರ್ಶವಾಗಿಟ್ಟುಕೊಂಡು ಫಾದರ್ ಅಬ್ಬೇ ದುಬ್ಬಾ ಕ್ರಿ.ಶ. 1799ರಲ್ಲಿ ಟಿಪ್ಪುವಿನ ಮರಣಾನಂತರ ಮೈಸೂರು ಸಂಸ್ಥಾನಕ್ಕೆ ಬಂದು ಅಲ್ಲಿನ ರೈತಾಪಿ ಜನರಂತೆಯೇ ಉಡುಪು ಧರಿಸಿ ಧಾರ್ಮಿಕ ಕಾರ್ಯಗಳಲ್ಲಿ ತೊಡಗಿದರು. ಟಿಪ್ಪುವಿನ ಹಿಂಸಾಚಾರದಿಂದ ಚದುರಿಹೋಗಿದ್ದ ಕ್ರೈಸ್ತರನ್ನೆಲ್ಲಾ ಒಗ್ಗೂಡಿಸುವುದೇ ಅವರ ಯೋಜನೆಯಾಗಿತ್ತು. ಅದರ ಬಗೆಗೆ ಅವರಿಗೆ ಅತೃಪ್ತಿ ಇದ್ದಂತೆಯೂ ಕಾಣುವುದಿಲ್ಲ. ಹಿಂದುಗಳ ನಡುವೆ ಹಿಂದು ಸನ್ಯಾಸಿಯಂತೆ ಹಲವು ವರ್ಷಗಳು ಬಾಳಿದ ಅಬ್ಬೇ ದುಬ್ಬಾ ಅವರು ಜನಸಾಮಾನ್ಯರ ಜೊತೆ ಬೆರೆತು ಅವರ ಆಚಾರ–ವಿಚಾರ, ಸಂಪ್ರದಾಯ ಪದ್ಧತಿಗಳನ್ನು ಆಳವಾಗಿ ಅಧ್ಯಯನ ಮಾಡಿ " Hindu, Manners, customs and ceremonies" ಎಂಬ ಉತ್ತಮವಾದ ಗ್ರಂಥವೊಂದನ್ನು ಬರೆದಿದ್ದಾರೆ. ಈ ಗ್ರಂಥವು ಜಾನಪದ ಅಧ್ಯಯನಕ್ಕೆ ಒಂದು ಅಮೂಲ್ಯ ಕೊಡುಗೆಯಾಗಿದೆ. ಈ ಗ್ರಂಥದಲ್ಲಿ ಅವರು ಭಾರತೀಯರ ಭಾವೈಕ್ಯತೆಯ ಬಗ್ಗೆ ತಮ್ಮ ಅಭಿಮಾನವನ್ನು ಹೀಗೆ ಸೂಚಿಸಿದ್ದಾರೆ: "There is every reason to believe that the true God was well known to the people of India at the time, when they first banded themselves together as a nation" (Abbe Dubois: 1972 : -10) ಎಲ್ಲಾ ವಿದೇಶಿ ಮತಬೋಧಕರಂತೆ ಆ ಉದ್ದೇಶವನ್ನಿಟ್ಟುಕೊಂಡೇ ಇವರು ಭಾರತಕ್ಕೆ ಬಂದಿದ್ದರು. ಆದರೆ ದೀರ್ಘಕಾಲ ನಮ್ಮ ಜನರೊಂದಿಗೆ ಬೆರೆತು, ನಮ್ಮವರಂತೆಯೇ ಬಾಳಿದ ಫಾದರ್ ಅಬ್ಬೇದುಬ್ಬಾ ಅವರು ಈ ಸಂಸ್ಕೃತಿ, ಸಂಪ್ರದಾಯಗಳನ್ನು, ಮೆಚ್ಚಿ ಪುಸ್ತಕದ ರೂಪದಲ್ಲಿ ಅವರ ಭಾವನೆಗಳನ್ನು ವ್ಯಕ್ತಪಡಿಸಿ ಅಮರರಾಗಿದ್ದಾರೆ. ಅವರು ಮಾಡಿದ ಒಂದು ಮುಖ್ಯವಾದ ಕೆಲಸವೆಂದರೆ ಈ ಮೊದಲೇ ಮತಾಂತರಗೊಂಡು, ಟಿಪ್ಪುವಿನ ಹಿಂಸೆಯಿಂದ ಚದುರಿ ಹೋಗಿದ್ದ ಕ್ರೈಸ್ತರನ್ನೆಲ್ಲಾ ಒಂದುಗೂಡಿಸಿ ಶ್ರೀರಂಗಪಟ್ಟಣದ 'ಗಂಜಾಂ'ನಲ್ಲಿ ಅವರಿಗೆ ಆಶ್ರಯ ನೀಡಿದ್ದಾರೆ.

ಹೀಗೆ ಪರಂಪರೆಯಿಂದ ಬುಡಕಟ್ಟುಗಳಾಗಿದ್ದ ಕರ್ನಾಟಕದ ಕ್ರೈಸ್ತರು ಕಾರಣಾಂತರಗಳಿಂದ ಕ್ರೈಸ್ತಧರ್ಮವನ್ನು ಸ್ವೀಕರಿಸಿದರೂ, ಅದನ್ನು ತಮ್ಮದಾಗಿಸಿಕೊಂಡು ನಿಷ್ಠೆಯಿಂದ ಧಾರ್ಮಿಕ ನಿಯಮಗಳನ್ನು ಪರಿಪಾಲಿಸುತ್ತಾ ಬಂದಿರುವುದು ಕಂಡು ಬರುತ್ತದೆ.

**2.4 ಸೃಷ್ಟಿ ಪುರಾಣ** ನಡೆಯಿತೆಂದು ಹೇಳಲಾದ ಘಟನೆಗಳ ಸುತ್ತ ಹುಟ್ಟಿಕೊಂಡ ಕಟ್ಟುಕತೆಗಳೇ ಐತಿಹ್ಯಗಳು. ಈ ಘಟನೆಯನ್ನು ಸಂಪೂರ್ಣವಾಗಿ ಮರೆಸಿ ದೈವಿಕಾಂಶಗಳು ಕೂಡಿಕೊಂಡು ಅದ್ಭುತವಾಗಿ ಬೆಳೆದು ಅವೆಲ್ಲ ಒಂದು ಕಾಲದಲ್ಲಿ ನಡೆದವೆಂಬಂತೆ ಭ್ರಮೆ ಹುಟ್ಟಿಸುವ ಕತೆಗಳೇ ಪುರಾಣಗಳು (ಹಿರಿಯಣ್ಣ: 1982:606).

ಕ್ರೈಸ್ತರ ಧಾರ್ಮಿಕ ಗ್ರಂಥ "ಪವಿತ್ರ ಬೈಬಲ್" ಅನೇಕ ಪೌರಾಣಿಕ ಲಕ್ಷಣಗಳನ್ನು ಹೊಂದಿದ್ದರೂ ಅದು ಕಾಲ್ಪನಿಕ ಎಂಬುದನ್ನು ಕ್ರೈಸ್ತರು ಅಲ್ಲಗಳೆಯುತ್ತಾರೆ. ಮಾತ್ರವಲ್ಲ ಅವೆಲ್ಲ ನಡೆದವೆಂಬುದನ್ನು ನಂಬು ಎಂದು ದೃಢವಾಗಿ ಹೇಳುತ್ತಾರೆ. ಅಧ್ಯಯನದ ದೃಷ್ಟಿಯಿಂದ ಬೈಬಲ್ಲಿನ ಪೌರಾಣಿಕ ಅಂಶಗಳನ್ನೂ ಅವು ಜನಪದರ ಜೀವನದುದ್ದಕ್ಕೂ ಪ್ರತಿಬಿಂಬಿಸಿರುವ ಸಂಪ್ರದಾಯಗಳನ್ನು ಕಲೆ ಹಾಕಿ ಅಭ್ಯಾಸಿಸಲಾಗಿದೆ.

"In the narrow sense myth is a story about gods or other superhuman beings or one told to account for a custom, institution or natural Phenomenon. In the broader sense myth is that expression of the creative imagination which interprets the real in the terms of continuos situation"
(The interpreters dictionary of the Bible 1962:481) ಈ ಹೇಳಿಕೆಯ ಬೆಳಕಿನಲ್ಲಿ ಕ್ರೈಸ್ತರ ಪುರಾಣಗಳನ್ನು ಪರಿಶೀಲಿಸುವುದು ಯುಕ್ತ.

ಜಗತ್ತಿನಾದ್ಯಂತ ಹರಡಿಕೊಂಡಿರುವ ಪುರಾಣಗಳನ್ನು ಪರಿಶೀಲಿಸದಾಗ ಅವು ಪರಸ್ಪರ ಹೋಲುವುದನ್ನು ಕಾಣುತ್ತೇವೆ. ಈ ಕಾರಣದಿಂದ ಪುರಾಣವನ್ನು ಕುರಿತ ಯಾವುದೇ ವರ್ಗೀಕರಣ ತುಂಬ ಕಷ್ಟವಾಗುತ್ತದೆ. ಪುರಾಣವೆಂದರೆ ಪುರಾತನವಾದದ್ದು ಎಂಬ ಅರ್ಥ ಇದೆಯಾದರೂ ಹೊಸಕಳೆಯಿರುವ ಹಳೆಯ ನಿರೂಪಣೆ ಎಂದೂ ಇದನ್ನು ಅರ್ಥೈಸಬಹುದಾಗಿದೆ.

ಸೃಷ್ಟಿ, ಸ್ಥಿತಿ, ಲಯಗಳು ಎಲ್ಲ ಪುರಾಣಗಳಲ್ಲೂ ಕಂಡು ಬರುವ ಪ್ರಧಾನ ಅಂಶಗಳಾಗಿವೆ. ಬೈಬಲ್ಲಿನಲ್ಲಿ ಇರುವಂತೆ ಮಾನವ, ಪ್ರಕೃತಿ, ಜೀವಜಂತುಗಳ ಸೃಷ್ಟಿಕಾರ್ಯವು ವಿಶ್ವದ ಎಲ್ಲಾ ಕ್ರೈಸ್ತರು ನಂಬಿ ಸ್ವೀಕರಿಸಿರುವ ಪುರಾಣವಾಗಿದೆ. ಪ್ರಕೃತಿಯ ವಿಕೋಪ, ಬಿರುಗಾಳಿ, ಜಲಪ್ರಳಯ ಇತ್ಯಾದಿ ಅನಾಹುತಗಳಿಗೆ ದೇವರ ಕೋಪ ಮತ್ತು ಶಾಪ ಕಾರಣ ಎಂದು ನಂಬುತ್ತಾರೆ. "ನಂಬಿಕೆಗೆ ಬರೆದ ಶಾಸನವನ್ನೇ ಪುರಾಣ ಎನ್ನಬಹುದು. ಒಂದು ನಂಬಿಕೆ ಸರಿಯಾದುದನ್ನು ಸಮರ್ಥಿಸಿ ಅದಕ್ಕೆ ಮಹತ್ವವನ್ನು ತಂದು ಕೊಡುತ್ತದೆ." (ತೀ.ನಂ.ಶಂಕರನಾರಾಯಣ 1982:52) ನಂಬಿಕೆಯ ಆಧಾರದ ಮೇಲೆಯೇ ಕ್ರೈಸ್ತರ ಧಾರ್ಮಿಕ ಆಚರಣೆಗಳು, ಸಂಪ್ರದಾಯಗಳು ಉಳಿದುಕೊಂಡು ಬಂದಿವೆ ಎನ್ನಬಹುದು.

ಬೈಬಲ್ಲಿನಲ್ಲಿ ಕಂಡು ಬರುವ ಅಂಶಗಳನ್ನು ಆಧರಿಸಿ ಕ್ರೈಸ್ತರ ಪುರಾಣಗಳನ್ನು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. (ANET)[2]

1. ನರಕಲೋಕದ ಸೃಷ್ಟಿಗೆ ಸಂಬಂಧಿಸಿದ ಪುರಾಣ.
2. ಜಗತ್ತಿನ ಸೃಷ್ಟಿಗೆ ಸಂಬಂಧಿಸಿದ ಪುರಾಣ.
3. ಜಲಪ್ರಳಯ ಪುರಾಣ.

**2.4.1 ನರಕಲೋಕದ ಸೃಷ್ಟಿ ಪುರಾಣ** ಜಗತ್ತಿನ ಸೃಷ್ಟಿಗೆ ಮುನ್ನವೇ ನರಕಲೋಕದ ಸೃಷ್ಟಿಯಾಗಿರುತ್ತೆಂಬುದು ಕ್ರೈಸ್ತರ ನಂಬಿಕೆ. ನರಕಲೋಕದ ಸೃಷ್ಟಿಗೆ ಕಾರಣವನ್ನು ಹೀಗೆ ಹೇಳಲಾಗಿದೆ. ದೇವರು ತನ್ನ ಆಧಾರ ಸ್ವರೂಪವನ್ನೇ ಹೋಲುವ ಆತ್ಮಸ್ವರೂಪಿಗಳಾದ ದೂತವೃಂದವನ್ನು ಸೃಷ್ಟಿಸಿದ. ದೇವರಿಂದ ಸೃಷ್ಟಿಗೊಂಡ ದೇವದೂತರು ಸುರದ್ರೂಪಿಗಳೂ,

ಕ್ಷಿಪ್ರವೇಗದಿಂದ ಗಗನ ಸಂಚಾರಮಾಡಲು ರೆಕ್ಕೆಗಳನ್ನು ಹೊಂದಿದ್ದವರೂ ಆಗಿದ್ದರು. ದೇವರ ಸೃಷ್ಟಿಯಿಂದ ಆನಂದಿತರಾಗಿ ಅಮೃತ ಕಾಂತಿಯಿಂದ ಕಂಗೊಳಿಸುತ್ತಿದ್ದರು ಎಂದು ಹೇಳಲಾಗಿದೆ. ಇದು ಶುದ್ದ ಜನಪದ ಕಲ್ಪನೆಯಾಗಿದೆ. ದೇವರು ದೇವದೂತರನ್ನು ಆತ್ಮಸ್ವರೂಪಿಗಳಾಗಿ ಸೃಷ್ಟಿಸಿದರು ಎಂಬುದು ಬೈಬಲ್ಲಿನ ಅಂಶವಾದರೂ, ದೈಹಿಕ ಸೌಂದರ್ಯವನ್ನೂ ಗಗನಸಂಚಾರ ಮಾಡಲು ರೆಕ್ಕೆಗಳನ್ನೂ ಇಲ್ಲಿ ಕಲ್ಪಿಸಿರುವುದು ಜನಪದ ಜಾಯಮಾನಕ್ಕೆ ಸಹಜವಾಗಿದೆ.

ಆತ್ಮಸ್ವರೂಪಿಗಳಾಗಿದ್ದ ದೇವದೂತರು ದೇವರ ನಿರ್ಗುಣ, ಸ್ವಭಾವವನ್ನು ಹೊಂದಿರಲಿಲ್ಲ. ಅವರಲ್ಲಿ ಕೆಲವರು ದೇವರಂತೆಯೇ ತಾವು, ತಾವೇಕೆ ದೇವರ ಆಜ್ಞಾಪಾಲನೆ ಮಾಡಬೇಕೆಂಬ ಅಹಂಭಾವವನ್ನು ತಳೆದು ಅವಿಧೇಯರಾದರು. ದೇವರ ಆಜ್ಞೆಗೆ ವಿಧೇಯರಾಗಿ ನಡೆದುಕೊಳ್ಳುತ್ತಿದ್ದ ಮತ್ತೊಂದು ಗುಂಪು ಇವರ ಅವಿಧೇಯತೆಯನ್ನು ಖಂಡಿಸಿದಾಗ ವೈಷಮ್ಯ ಏರ್ಪಟ್ಟು ಬಂಡಾಯ ಹೂಡಿದರು ಎಂದು ಹೇಳಲಾಗಿದೆ. ಆಗ ದೇವರು ಉಭಯ ಪಕ್ಷಗಳನ್ನು ಕರೆದು ವಿಚಾರಿಸಿ ಬಂಡಾಯವೆದ್ದಿದ್ದವರು ತಪ್ಪಿತಸ್ಥರೆಂದು ತೀರ್ಮಾನಿಸಿ ನರಕಲೋಕವನ್ನು ಸೃಷ್ಟಿಸಿ ದುದೈವದೂತ ರನ್ನು ಅಲ್ಲಿಗೆ ದಬ್ಬಿದನಂತೆ. In ancient Norse Mythology Hel is the ill-favoured goddess of the under world (Encyclopedia VII:207) ನರಕಕ್ಕೆ ಅಧೋಲೋಕವೆಂದು ಕರೆಯುವರು. "ಭೂತಳದ ಆಳದಲ್ಲಿ ಗಾಢಾಂಧಕಾರ ತುಂಬಿದ ಮತ್ತು ಸದಾ ಭುಗಿಲೆಂದುರಿಯುತ್ತಿರುವ ಭಯಂಕರ ಬೆಂಕಿಯಿರುವ ಲೋಕವೇ ನರಕ" (ವಿಶ್ವಕೋಶ 10:96). "ಆ ಬೆಂಕಿ ಆರುವುದಿಲ್ಲ" (ಮಾರ್ಕ್ 9:43–47)

ಈ ವರ್ಣನೆಯನ್ನು ಮಿಲ್ಟನ್ ಕವಿಯು ತನ್ನ Paradise Lost ಎಂಬ ಕಾವ್ಯದಲ್ಲಿ ಮನೋಜ್ಞವಾಗಿ ಚಿತ್ರಿಸಿದ್ದಾನೆ. ಅದರ ಮೂಲ ಸವಿಸ್ತಾರವಾಗಿ ಎಲ್ಲಿಯೂ ಪ್ರಕಟವಾಗಿಲ್ಲ. ಆದರೂ ಬೈಬಲ್ಲಿನ ಹಳೆಯ ಒಡಂಬಡಿಕೆಯಲ್ಲಿ ಅಲ್ಲಲ್ಲಿ ಕಾಣಿಸಿಕೊಂಡಿರುವ ಕೆಲವು ಸಾಲುಗಳ ಆಧಾರದ ಮೇಲೆ ಕವಿ ತನ್ನ ಅಮೋಘ ಶೈಲಿಯನ್ನು ಮೆರೆದಿದ್ದಾನೆ (ಬೈಬಲ್ ಯೆಶಾಯ 14:12–17).

“ ನರಕಯಾತನೆ ಅನುಭವಿಸಿದ ”
“ ನಿನ್ ಕೈಗೆ ಹಾವು ಕಡಿಯ ”
“ ನಿನ್ ಕೈಗೆ ಚೇಳು ಕಡಿಯ ”
“ ನಿನ್ ಮುಖಕ್ಕೆ ಬೆಂಕಿಹಾಕ ”
“ ನೀ ನಡೆಯೋ ಹಾದಿ ಮುಳ್ಳಾಗ ”

– ಕೋಪ ಬಂದಾಗ ಈ ರೀತಿ ಶಪಿಸುವುದು ಸಾಮಾನ್ಯ. ಆದರೆ ಮೇಲಿನ ಸಂದರ್ಭಗಳಲ್ಲಿ ಆಗುವ ನೋವು–ಹಿಂಸೆಗಳನ್ನು ಬಲ್ಲವರಾದ ಜನ ತಮ್ಮ ವೈರಿಗಳಿಗೆ ಇಂತಹ ನೋವು–ಹಿಂಸೆ ಗಳಾಗಲಿ ಎಂದು ಬಯಸುತ್ತಾರೆ.

ಹಿಂದೂ ಧರ್ಮದಲ್ಲಿ, ಫಲಾಪೇಕ್ಷೆಯಿಂದ ಕರ್ಮ ಮಾಡಿದರೆ ಪ್ರಾಣಿಗಳಾಗಿ ಹುಟ್ಟಬೇಕಾಗುತ್ತದೆ ಎಂಬ ನಂಬಿಕೆ ಇದ್ದರೆ, ಕ್ರೈಸ್ತ ಧರ್ಮದಲ್ಲಿ ಅಕ್ಷಮ್ಯ ಅಪರಾಧ ಮಾಡಿ ಪಶ್ಚಾತ್ತಾಪ ಪಡದೆ ತೀರಿಕೊಂಡರೆ ಅನಂತವಾದ ಬೆಂಕಿಯಲ್ಲಿ ಬಿದ್ದು ಯಾತನೆಯನ್ನು ಅನುಭವಿಸ ಬೇಕು, ಇಲ್ಲಿಂದ ಮತ್ತೆ ಬಿಡುಗಡೆಯೇ ಇಲ್ಲ ಎಂಬ ನಂಬಿಕೆ ಇದೆ. ಆದರೆ ಕ್ರೈಸ್ತರಿಗೆ ಪುನರ್ಜನ್ಮದಲ್ಲಿ ನಂಬಿಕೆ ಇಲ್ಲ‘ ಮಾಡಿದ್ದುಣ್ಣೋ ಮಹಾರಾಯ ’ ಎಂಬ ನೀತಿ ತತ್ವದಂತೆ ಜಗತ್ತಿನಲ್ಲಿ ತಾವು ಮಾಡಿದ ಕರ್ಮಗಳಿಗೆ ಅನುಸಾರ ದೇವರು ತೀರ್ಪಿತ್ತು ಸ್ವರ್ಗ ಅಥವಾ ನರಕ ಪ್ರಾಪ್ತಿಯಾಗುವಂತೆ ಮಾಡುತ್ತಾನೆ. ಸ್ವರ್ಗ ಪ್ರಾಪ್ತಿಗಾಗಿ ಪೂಜೆ, ಪ್ರಾರ್ಥನೆ, ಸಂಸ್ಕಾರಗಳು, ಕಾಯ್ದೆ ಕಟ್ಟಳೆಗಳು ಹುಟ್ಟಿಕೊಂಡಿವೆ.

ದೀಕ್ಷಾಸ್ನಾನ ಒಂದು ದಿವ್ಯ ಸಂಸ್ಕಾರ. ಅದನ್ನು ಪಡೆಯದವನಿಗೆ ಸ್ವರ್ಗವಿಲ್ಲ, ಎಂಬುದನ್ನು ಪ್ರತಿಯೊಬ್ಬ ಕ್ರೈಸ್ತನೂ ನಂಬಿದ್ದಾನೆ. ಆದಕಾರಣ ಮಗು ಜನಿಸಿದ ನಲವತ್ತು ದಿನಗಳೊಳಗೆ ದೀಕ್ಷಾಸ್ನಾನ ಕೊಡಿಸುವ ಪದ್ಧತಿ ರೂಢಿಯಲ್ಲಿದೆ. ಭಾನುವಾರ ಪೂಜೆ ಕಾಣದಿದ್ದರೆ ನರಕಪ್ರಾಪ್ತಿಯಾಗುತ್ತದೆ ಎಂಬ ಭಯವಿದೆ. ಭಾನುವಾರ ಎಷ್ಟೇ ಕೆಲಸಗಳಿದ್ದರೂ, ಚರ್ಚಿಗೆ ಹೋಗಿ ಪೂಜೆಯಲ್ಲಿ ಪಾಲ್ಗೊಳ್ಳುತ್ತಾರೆ. ಪಾಪನಿವೇದನೆ ಮಾಡಿ ಪಾಪರಹಿತರಾಗುತ್ತಾರೆ. ದೇವರ ದಶಾಜ್ಞೆ ಮತ್ತು ಧರ್ಮ ಸಭೆಯ ಆರು ಕಟ್ಟಳೆಗಳನ್ನು ಪಾಲಿಸುತ್ತಾರೆ.

ಮಕ್ಕಳು ತಪ್ಪು ಮಾಡಿದಾಗ ದೇವರು ಶಿಕ್ಷಿಸುತ್ತಾನೆಂಬ ಭಯ ಹುಟ್ಟಿಸುವುದು ವಾಡಿಕೆ. ಸುಳ್ಳು ಹೇಳಿದರೆ ನಾಲಿಗೆ ಬಿದ್ದುಹೋಗುತ್ತದೆ. ಕೆಟ್ಟದ್ದನ್ನು ಕೇಳಿದರೆ ನರಕದಲ್ಲಿ ಕಾದ ಸೀಸೆಯನ್ನೂ, ಕಾದ ಎಣ್ಣೆಯನ್ನೂ ಕಿವಿಯೊಳಗೆ ಸುರಿಯುತ್ತಾರೆ. ನರಕದ ಬೆಂಕಿಯಲ್ಲಿ ಸುಟ್ಟು ಕರಕಲಾಗಬೇಕಾಗುತ್ತದೆ ಎಂದೆಲ್ಲ ಹೇಳಿ ಮಕ್ಕಳು ತಪ್ಪು ಮಾಡದಂತೆ ತಿಳಿವಳಿಕೆ ಕೊಡುತ್ತಾರೆ. ಪ್ರತಿಯೊಬ್ಬರ ಬಳಿಯೂ ಬಲಗಡೆ ದೇವದೂತರು ಎಡಗಡೆ ಪಿಶಾಚಿಯೂ ಕಾಯುತ್ತಾ ಇರುತ್ತವೆ. ದೇವದೂತರು ಒಳ್ಳೆಯದನ್ನು ಹೇಳಿಕೊಡುತ್ತಾರೆ, ಪಿಶಾಚಿ ಕೆಟ್ಟದರ ಕಡೆ ಎಳೆಯುತ್ತದೆ. ಅದಕ್ಕಾಗಿ ಸದಾ ಒಳ್ಳೆಯ ಕೆಲಸಗಳನ್ನು ಮಾಡಲು ಪ್ರಾರ್ಥಿಸಬೇಕು, ಎಂದು ಬೋಧಿಸುತ್ತಾರೆ. ಅಷ್ಟೇ ಅಲ್ಲ ಪಿಶಾಚಿಯ ತಂತ್ರಗಳ ಬಗೆಗೆ ರುದ್ರ ಭಯಂಕರವಾದ ಕತೆಗಳನ್ನು ಹೇಳಿ ಪಿಶಾಚಿ ಮತ್ತು ನರಕದ ಬಗ್ಗೆ ಭಯ, ಭೀತಿ ಹುಟ್ಟಿಸಿ, ಅಸತ್ಯ, ಅನ್ಯಾಯಗಳಿಂದ ದೂರವಿರಲು ಪ್ರೇರೇಪಿಸುತ್ತಾರೆ.

ಮೈಸೂರು ಭಾಗದ ಕ್ರೈಸ್ತರಿಗೆ ಇಂದಿಗೂ ದೇವದೂತರಲ್ಲಿ ನಂಬಿಕೆಯಿದೆ. ಮೈಸೂರಿನ ಸಂತ ಫಿಲೋಮಿನಾ ಚರ್ಚಿನಲ್ಲಿ ಪೂಜಾಪೀಠದ ಎರಡು ಪಕ್ಕಗಳಲ್ಲೂ ಇಬ್ಬರು ದೇವದೂತರ ಪ್ರತಿಮೆಗಳಿರುವುದನ್ನು ಕಾಣುತ್ತೇವೆ. ಈ ಜಿಲ್ಲೆಯ ಎಲ್ಲಾ ತಾಲ್ಲೂಕುಗಳ ಚರ್ಚುಗಳಲ್ಲಿ ಸಾಮಾನ್ಯವಾಗಿ ಇಂತಹ ಪ್ರತಿಮೆಯನ್ನು ಕಾಣಬಹುದಾಗಿದೆ.. ಅಲ್ಲದೆ ಮನೆಯ ಬಾಗಿಲಿಗೆ, ಗೋಡೆಯ ಮೇಲೆ ದೇವದೂತರ ಭಾವಚಿತ್ರಗಳನ್ನು ನೇತುಹಾಕಿರುತ್ತಾರೆ. ದೇವದೂತರ ಭಾವಚಿತ್ರ ಗಳನ್ನು ಕಂಡರೆ ಪಿಶಾಚಿ ಓಡಿಹೋಗುತ್ತದೆ ಎಂಬುದು ಇದರ ಹಿಂದೆ ಇರುವ ನಂಬಿಕೆ ತಮಗೆ ಮಾರ್ಗದರ್ಶನ ಮಾಡಲು ಪ್ರತಿದಿನ ದೇವದೂತನನ್ನು ಪ್ರಾರ್ಥಿಸುವಂತೆ ಮಕ್ಕಳಿಗೆ ಹೇಳುತ್ತಾರೆ.

ಸ್ತ್ರೀ ಗಂಭೀರಳಾಗಿರಬೇಕು, ಮೈತುಂಬಾ ಬಟ್ಟೆ ಧರಿಸಬೇಕು. ಅಶ್ಲೀಲ ಅಲಂಕಾರಗಳನ್ನು ಮಾಡಿಕೊಂಡರೆ ಇತರರ ಪಾಪಕ್ಕೆ ಕಾರಣಳಾಗುವುದಲ್ಲದೆ, ಅಹಂಕಾರ, ಕಾಮ ಕ್ರೋಧ ಮೋಹ ಮದ ಮಾತ್ಸರ್ಯಾದಿ ದುರ್ಗುಣಗಳಿಗೆ ದಾರಿಯಾಗುತ್ತದೆ, ಸೈತಾನನ ದಾಸಿಯಾಗಿ ಸದಾಕಾಲ ನರಕವಾಸಿಯಾಗಬೇಕಾಗುತ್ತದೆ ಎಂದು ತಮ್ಮ ಹೆಣ್ಣು ಮಕ್ಕಳಿಗೆ ಬುದ್ಧಿ ಹೇಳುತ್ತಾರೆ. ಹೀಗೆ ಪ್ರತಿ ಹಂತದಲ್ಲೂ ಸೂಕ್ಷ್ಮವಾಗಿ ನರಕದ ಭಯವನ್ನು ತುಂಬಿ, ಕೆಟ್ಟ ಹಾದಿ ತುಳಿಯುವುದನ್ನು ತಪ್ಪಿಸುತ್ತಾರೆ.

**2.4.2 ಜಗತ್ತಿನ ಸೃಷ್ಟಿ ಪುರಾಣ** ವಿಶ್ವವು ತನ್ನಿಂದ ತಾನೇ ಉಂಟಾಯಿತೆಂಬುದನ್ನು ಜನಪದರು ಒಪ್ಪುವುದಿಲ್ಲ. ಭಗವಂತನ ಅಸ್ತಿತ್ವಕ್ಕೆ ಈ ವಿಶ್ವವೇ ಸಾಕ್ಷಿ, ಎಂಬುದನ್ನು ನಿರೂಪಿಸುತ್ತಾರೆ. ಪ್ರಕೃತಿಯನ್ನು ಪ್ರೀತಿಸಿದವನು ದೇವರನ್ನು ಪ್ರೀತಿಸುತ್ತಾನೆ ಎಂಬುದು ಕ್ರೈಸ್ತರಲ್ಲಿ ಪ್ರಚಲಿತವಿರುವ ಮಾತು.

" ಹೂವಿನಾಗ ಹುದುಗ್ಯಾನ, ಮಾಲ್ಯಾಗ ಮಲಗ್ಯಾನ
ಮೊಗ್ಗ್ಯಾಗ ಕಣ್ಣು ತೆರೆದಾನ "

ಎಂದು ಹಾಡುತ್ತಾ ಪ್ರತಿಯೊಂದು ಜೀವ ಜಂತುವಿನಲ್ಲೂ ಕೆಲವೊಮ್ಮೆ ನಿರ್ಜೀವ ವಸ್ತುಗಳಲ್ಲೂ (ಪ್ರತಿಮೆ) ದೇವರನ್ನೇ ಕಾಣುವ ಜನಪದರು ವೈಜ್ಞಾನಿಕ ಕಾರಣಗಳನ್ನು ಸ್ವೀಕರಿಸಿಲ್ಲ. " ಮಾನವ ತನ್ನ ದೈನಂದಿನ ಬದುಕಿನಲ್ಲಿ ಸುಖ-ದುಃಖ, ಹುಟ್ಟು-ಸಾವು, ವಿವಾಹ ವಿಚ್ಛೇದನ ಮೊದಲಾದ ಸೀಮಿತ ಅನುಭವಗಳನ್ನು (Limit experiences) ಹೊಂದಿರುವಾಗ ಈ ಬದುಕಿಗೆ ಸಮಗ್ರ ಅರ್ಥಕೊಡುವ ಸತ್ಯವೊಂದಿದೆಯೇ? ಎಂದು ಪ್ರಶ್ನಿಸಿದ್ದಾನೆ. ಈ ಸತ್ಯಾನ್ವೇಷಣೆಯ ಫಲವಾಗಿ ಮಾನವ ಸಮಷ್ಟಿ ಪ್ರಜ್ಞೆಗೆ ಹೊಳೆದ ಬದುಕಿನ ಮೂಲ ಅರ್ಥ (Meaning of Meanings) ಅರ್ಥಾತ್ ಅನುಭಾವ (Depth experience) ಗಳನ್ನು (Watts, 1963:32) ಅಭಿವ್ಯಕ್ತಪಡಿಸಲು ಕೆಲವು ಭಾಷಾ ಸಂಕೇತಗಳನ್ನು ಆತ ಬಳಸಿದ್ದಾನೆ. ಇವುಗಳನ್ನೇ ಪಾರಿಭಾಷಿಕವಾಗಿ ಪುರಾಣಗಳು ಎಂದು ಕರೆಯುತ್ತಾರೆ (Mackey 78). (ಮಾಡ್ತ, 1987:190).

ಜಗತ್ತಿನ ಸೃಷ್ಟಿ ಎಂದೋ ಆಗಿ ಹೋಗಿದೆ. ಆದರೂ ಅದರ ಬಗ್ಗೆ ವಿದ್ವಾಂಸರು ಹಲವು ರೀತಿಯ ಸಮರ್ಥನೆಗಳನ್ನು ನೀಡಿದ್ದರೂ ವಿಶ್ವದ ಅಂಗವಾಗಿ ಹುಟ್ಟಿ ಬೆಳೆದ ಮಾನವ ತನ್ನ ಬದುಕಿನ ಆಗುಹೋಗುಗಳಿಂದ ತನ್ನದೇ ಆದ ಅನುಭವಗಳನ್ನು ಪಡೆಯುತ್ತಾನೆ; ಭಿನ್ನತೆ ಸಾಮ್ಯತೆ ಗಳನ್ನು ಗುರುತಿಸಿ ಕಾರಣವನ್ನು ಹುಡುಕುತ್ತಾನೆ; ವ್ಯಕ್ತಿಯ ಸಮಷ್ಟಿಪ್ರಜ್ಞೆ ಹೊಳೆದಂತೆ ಜಗತ್ತನ್ನು ಹತೋಟಿಯಲ್ಲಿ ಇಟ್ಟುಕೊಂಡಿರುವ ಒಂದು ಶಕ್ತಿ ಇದೆ. ಆ ಶಕ್ತಿಯೇ ದೇವರು. ಇಂತಹ ನಂಬಿಕೆ ಯನ್ನುಳ್ಳವರ ಗುಂಪಿಗೆ ಕ್ರೈಸ್ತರೂ ಸೇರಿದ್ದಾರೆ.

ದೇವರು ಪ್ರಕೃತಿ, ಪ್ರಾಣಿ, ಪಕ್ಷಿಗಳನ್ನು, ಜಲಚರ ಜಂತುಗಳನ್ನು ಸೃಷ್ಟಿಸಿ, ಕೊನೆಗೆ ಮಣ್ಣಿನಿಂದ ಮಾನವನನ್ನು ಸೃಷ್ಟಿಸಿದ. ಮಣ್ಣಿನ ಬೊಂಬೆಯನ್ನು ಮಾಡಿ ಅದಕ್ಕೆ ತನ್ನ ಉಸಿರನ್ನು ತುಂಬಿದಾಗ ಆತ ' ಮಾನವನೆನಿಸಿಕೊಂಡ. ದೇವರು ಅವನನ್ನು ' ಆದಾಮ್ ' ಎಂದು ಕರೆದು ಪ್ರಕೃತಿ, ಪ್ರಾಣಿ, ಪಕ್ಷಿಗಳ ಮೇಲಿನ ಹಕ್ಕನ್ನು ಅವನಿಗೆ ನೀಡಿದ. ಆದರೆ ಇದಾವುದೂ ಮನುಷ್ಯನಿಗೆ ಸಂಗಾತಿಯಾಗದ್ದನ್ನು ಕಂಡು ಮನುಷ್ಯನಿಗೆ ಗಾಢನಿದ್ರೆಯನ್ನು ಬರಮಾಡಿ ಅವನ ಪಕ್ಕೆಲಬುಗಳಲ್ಲಿ ಒಂದನ್ನು ತೆಗೆದುಕೊಂಡು ಅದನ್ನು ಸ್ತ್ರೀಯಾಗಿ ಮಾಡಿ, ಆಕೆಯನ್ನು ಆದಾಮನಿಗೆ ಸಂಗಾತಿಯಾಗಿ ನೀಡಿದ. ಅದು ಬಹು ಒಳ್ಳೆಯದಾಗಿ ಕಾಣಿಸಿತು. " A helper. The woman was made for the man yet not as his slave girl, but his queen. Fit for him, suggests primarily correspondence likeness; as man is the image and glory of God, so the woman is the glory of man" (1 cor 11:7).Bible

ಸ್ತ್ರೀಯನ್ನು ತನ್ನ ಸಂಗಾತಿಯಾಗಿ ನೀಡಿದ್ದು ಆದಾಮನಿಗೆ ಸಂತೋಷವಾಗಿತ್ತು. " ಈಗ ಸರಿ, ಈಕೆಯು ನನ್ನ ಎಲುಬುಗಳಿಂದ ಬಂದ ಎಲುಬೂ, ನನ್ನ ಮಾಂಸದಿಂದ ಬಂದ ಮಾಂಸವೂ ಆಗಿದ್ದಾಳೆ, ಈಕೆಯು ನರನಿಂದ 'ಉತ್ಪತ್ತಿಯಾದ ಕಾರಣ ನಾರಿ' ಎನಿಸಿಕೊಳ್ಳುವಳು " ಎಂದನು. ದೇವರು ' ಏದೆನ್ ' ಎಂಬ ಸುಂದರ ಉದ್ಯಾನವನವನ್ನು ರೂಪಿಸಿ ಮನುಷ್ಯರನ್ನು ಆಶೀರ್ವದಿಸುತ್ತ " ನೀವು ಬಹುಸಂತಾನವುಳ್ಳವರಾಗಿ ಹೆಚ್ಚಿರಿ. ಭೂಮಿ, ಸಮುದ್ರ, ಮೀನು, ಪಕ್ಷಿ, ಮೃಗಗಳ ಮೇಲೆ ದೊರೆತನ ಮಾಡಿರಿ. ನಿಮಗೆ ಸಮಸ್ತ ಭೂಮಿಯ ಮೇಲೆ ಬೀಜವುಳ್ಳ ಎಲ್ಲಾ ಪೈರುಗಳನ್ನೂ ಬೀಜಗಳ ಎಲ್ಲಾ ಹಣ್ಣಿನ ಮರಗಳನ್ನೂ ಆಹಾರವಾಗಿ ನೀಡಿದ್ದೇನೆ. ತೋಟದಲ್ಲಿರುವ ಎಲ್ಲಾ ಹಣ್ಣುಗಳನ್ನೂ ಯಥೇಚ್ಛವಾಗಿ ತಿನ್ನಬಹುದು. ಒಳ್ಳೆಯದರ ಕೆಟ್ಟದರ ಅರಿವನ್ನು ಹುಟ್ಟಿಸುವ ಮರದ ಹಣ್ಣನ್ನು ಮಾತ್ರ ತಿನ್ನಬಾರದು, ತಿಂದರೆ ಆ ದಿನ ಸತ್ತೆ ಹೋಗುವಿರಿ " ಎಂದು ಆಜ್ಞೆ ವಿಧಿಸಿದನು.

ದೇವರ ಆಜ್ಞೆಯನ್ನು ಪಾಲಿಸುತ್ತಾ ಪರಮಾನಂದದ ಸವಿಯನ್ನು ಮನಗಂಡು ಪ್ರಕೃತಿಯೊಳಗೊಂದಾಗಿ ಜೀವಿಸುತ್ತಿದ್ದರು. ದೇವರು ಉಂಟುಮಾಡಿದ ಎಲ್ಲಾ ಭೂಜಂತುಗಳಲ್ಲಿ ಸರ್ಪವು ಯುಕ್ತಿಯುಳ್ಳದ್ದಾಗಿತ್ತು. ಅದು ಸ್ತ್ರೀಯನ್ನು ಮರಳು

ಮಾಡುವುದು ಸುಲಭವೆಂದರಿತು " ಏನಪ್ಪಾ, ದೇವರು ಈ ಹಣ್ಣನ್ನು ತಿನ್ನಬಾರದೆಂದು ಅಪ್ಪಣೆ ವಿಧಿಸಿರುವುದು ನಿಜವೋ? " ಎನ್ನಲು ಸ್ತ್ರೀ ಹೌದೆಂದಳು " ನೀವು ಹೇಗೂ ಸಾಯುವುದಿಲ್ಲ. ಇದರ ಹಣ್ಣನ್ನು ತಿಂದಾಗಲೇ ನಿಮ್ಮ ಕಣ್ಣುಗಳು ತೆರೆಯುವುವು. ನೀವು ದೇವರಂತೆ ಆಗಿ ಒಳ್ಳೆಯದರ ಕೆಟ್ಟದರ ಭೇದವನ್ನು ಅರಿತವರಾಗುತ್ತೀರಿ. ಇದು ದೇವರಿಗೆ ಚೆನ್ನಾಗಿ ಗೊತ್ತು " ಎಂದಿತು. ಆಗ ಸ್ತ್ರೀಯು ಆ ಹಣ್ಣು ತಿನ್ನುವುದಕ್ಕೆ ಉತ್ತಮವಾಗಿಯೂ, ನೋಡುವುದಕ್ಕೆ ರಮ್ಯವಾಗಿಯೂ ಜ್ಞಾನೋದಯಕ್ಕೆ ಅಪೇಕ್ಷಿಸ ತಕ್ಕುದ್ದಾಗಿಯೂ ಇದೆ, ಎಂದು ತಿಳಿದು ಅದನ್ನು ತೆಗೆದುಕೊಂಡು ತಿಂದಳು. ಸಂಗಡ ಇದ್ದ ಸಂಗಾತಿಗೆ ಕೊಡಲು ಆತನೂ ತಿಂದನು. ಕೂಡಲೇ ಅವರಿಬ್ಬರ ಕಣ್ಣುಗಳೂ ತೆರೆದವು. ತಾವು ಬೆತ್ತಲಾಗಿದ್ದೇವೆಂದು ತಿಳಿದು ಅಂಬೂರದ ಎಲೆಗಳನ್ನು ಪೋಣಿಸಿಕೊಂಡು ಉಟ್ಟುಕೊಂಡರು.

ದೇವರು ಅವರನ್ನು ಕರೆದಾಗ ಅವರು ಮುಂದೆ ಬರಲಿಲ್ಲ. ತಾವು ಬೆತ್ತಲಾಗಿರುವುದಾಗಿ ತಿಳಿಸಿದರು. " ನೀವು ಬೆತ್ತಲಾಗಿರುವ ವಿಷಯ ನಿಮಗೆ ತಿಳಿಸಿದವರಾರು? ನಾನು ತಿನ್ನಬಾರದೆಂದು ವಿಧಿಸಿದ ಹಣ್ಣನ್ನು ತಿಂದೆಯಾ? " ಎಂದು ಕೇಳಲು ಆದಾಮನು ಸ್ತ್ರೀಯನ್ನೂ, ಸ್ತ್ರೀಯು ಸರ್ಪವನ್ನೂ ದೂರಿದರು. ಆಗ ದೇವರು ಸರ್ಪಕ್ಕೆ " ನೀನು ಈ ಕಾರ್ಯ ಮಾಡಿದ್ದರಿಂದ ಎಲ್ಲಾ ಪಶುಗಳಲ್ಲಿಯೂ, ಅಡವಿಯ ಎಲ್ಲಾ ಮರಗಳಲ್ಲಿಯೂ ಶಾಪಗ್ರಸ್ತವಾಗಿದ್ದಿ. ನೀನು ಹೊಟ್ಟೆಯಲ್ಲಿ ಹರಿದು ನಿನ್ನ ಜೀವಮಾನದ ದಿನಗಳಲ್ಲೆಲ್ಲಾ ಮಣ್ಣನ್ನೇ ತಿನ್ನುವಿ, ಅಲ್ಲದೆ ನಿನಗೂ ಈ ಸ್ತ್ರೀ ಸಂತಾನಕ್ಕೂ ಹಗೆತನವಿರುವ ಹಾಗೆ ಮಾಡುತ್ತೇನೆ. ಈಕೆಯ ಸಂತಾನವು ನಿನ್ನ ತಲೆಯನ್ನು ಜಜ್ಜುವುದು, ನೀನು ಅದರ ಹಿಮ್ಮಡಿಯನ್ನು ಕಚ್ಚುವಿ ' ಎಂದನು. ಆಮೇಲೆ ಸ್ತ್ರೀಗೆ " ನೀನು ಗರ್ಭಿಣಿಯಾಗಿರುವ ಕಾಲದಲ್ಲಿ ಬಹು ಸಂಕಟಪಡಬೇಕೆಂದು ನಾನು ನೇಮಿಸಿದ್ದೇನೆ. ಕಷ್ಟದಿಂದಲೇ ಮಗುವನ್ನು ಹೆರುವಿ, ಗಂಡನ ಮೇಲೆ ನಿನಗೆ ಆಸೆಯಿರುವುದು, ಅವನು ನಿನಗೆ ಒಡೆಯನಾಗುವನು" ಎಂದನು. ಆದಾಮನನ್ನು ಕುರಿತು " ತಿನ್ನಬಾರದೆಂದು ನಿನಗೆ ಆಜ್ಞಾಪಿಸಿದ್ದ ಮರದ ಫಲವನ್ನು ನೀನು ಹೆಂಡತಿಯ ಮಾತನ್ನು ಕೇಳಿ ತಿಂದಿರುವ ಕಾರಣ ನಿನ್ನ ಜೀವಮಾನವೆಲ್ಲಾ ದುಡಿದು ಭೂಮಿಯ ಹುಟ್ಟುವಳಿಯನ್ನು ತಿನ್ನಬೇಕು. ಆ ಭೂಮಿಯಲ್ಲೂ ಮುಳ್ಳುಗಿಡಗಳೂ ಕಳೆಗಳೂ ಬಹಳವಾಗಿ ಹುಟ್ಟುವುವು. ಹೊಲದ ಬೆಳೆಯನ್ನು ಅನುಭವಿಸುವಿ. ನೀನು ತಿರುಗಿ ಮಣ್ಣಿಗೆ ಸೇರುವ ತನಕ ಬೆವರಿಡುತ್ತಾ ಬೇಕಾದ ಆಹಾರವನ್ನು ಸಂಪಾದಿಸಬೇಕು. ನೀನು ಮಣ್ಣಿನಿಂದ ತೆಗೆಯಲ್ಪಟ್ಟವನಲ್ಲವೋ ನೀನೂ ಮಣ್ಣೇ. ಪುನಃ ಮಣ್ಣಿಗೇ ಸೇರತಕ್ಕವನಾಗಿದ್ದಿ " ಎಂದು ಹೇಳಿ ಏದೆನ್ ತೋಟದಿಂದ ಹೊರಗೆ ಹಾಕಿ ತೋಟದಲ್ಲಿ ಮತ್ತೆ ಪ್ರವೇಶಿಸದಂತೆ ಕಾವಲಿರಿಸಿದನು (ಅದಿಕಾಂಡ 1–3).

ಜಗತ್ತಿನ ಸೃಷ್ಟಿಯ ಈ ನಿರೂಪಣೆಯು ಬೈಬಲ್ಲಿನ ಹಳೆಯ ಒಡಂಬಡಿಕೆಯಲ್ಲಿ ಬಂದಿದೆ. ಜಗತ್ತಿನ ಸೃಷ್ಟಿಯ ಬಗ್ಗೆ ದೇಜಗೌ ಅವರು ಕೆಂಪು ಇಂಡಿಯನ್ನರ ಜಾನಪದ ಎಂಬ ಶೀರ್ಷಿಕೆಯಡಿಯಲ್ಲಿ ಹೀಗೆ ಬರೆದಿದ್ದಾರೆ: ಭೂದೇವಿಯನ್ನೂ ಆಕೆಯಲ್ಲಿ ಜೀವಿಸಬಹುದಾದ ಎಲ್ಲಾ ಜೀವಜಂತುಗಳನ್ನೂ, ಮರಗಿಡಗಳನ್ನೂ ಸೃಷ್ಟಿಸಿದ ಮಹಾದೇವ (Maheo) ಹೆಣ್ಣು ಒಂಟಿಯಾಗಿರಬಾರದೆಂದು ತನ್ನ ಬಲಪಕ್ಕದ ಎಲುಬೊಂದನ್ನು ಹೊರಗೆಳೆದು, ಅದರೊಳಗೆ ಉಸಿರು ತುಂಬಿ ನೆಲದಾಯಿಯ ಎದೆಯ ಮೇಲಿರಿಸಲು ಅದರಲ್ಲಿ ಪ್ರಾಣ ಸಂಚಾರವಾಗಿ ಅದು ಚಲಿಸಿತು, ಹೊರಳಾಡಿತು, ಮೇಲೆದ್ದು ನೆಟ್ಟನೆ ನಿಂತಿತು, ನಲಿದಾಡಿತು, ಹೀಗಾಗಿ ಮೊದಲ ಮಾನವ ಅವಿರ್ಭವಿಸಿದ.

'ಪಾಪ, ನೆಲದಾಯಿಯೊಡನೆ ಅವನೊಬ್ಬನೇ ಇದ್ದಾನೆ. ನಾನೊಮ್ಮೆ ಅವನಂತೆಯೇ ಶೂನ್ಯದಲ್ಲಿ ಒಬ್ಬಂಟಿಗನಾಗಿದ್ದೆ. ಒಂಟಿತನ ಒಳಿತಲ್ಲ ' ಎಂದು ಮಹಾದೇವ ಆಲೋಚಿಸಿ ತನ್ನ ಎಡಪಕ್ಕೆಲುಬಿನಿಂದ ಹೆಣ್ಣೊಂದನ್ನು ಸೃಷ್ಟಿಸಿ, ಮನುಷ್ಯನ ಜೊತೆ ಸೇರಿಸಿದೆ, ಅವರಿಬ್ಬರೂ ಸಂತೋಷವಾಗಿದ್ದುದನ್ನು ಕಂಡು ಮಹಾದೇವಾ ಆನಂದ ತುಂದಿಲನಾದ (ದೇಜಗೌ, 1986:204).

ಈ ಕತೆ ಬಹುತೇಕ ಕ್ರೈಸ್ತರ ಜಗತ್ತಿನ ಸೃಷ್ಟಿಗೆ ಸಂಬಂಧಿಸಿದ ಕತೆಯನ್ನು ಹೋಲುತ್ತದೆ. ಕ್ರೈಸ್ತಪುರಾಣದಲ್ಲಿ ದೇವರು ಮಾನವನನ್ನು ಸೃಷ್ಟಿಸಿ ಮಾನವನ ಪಕ್ಕೆಲುಬಿನಿಂದಲೇ ಸ್ತ್ರೀಯನ್ನು ಸೃಷ್ಟಿಸಿದ ಎಂದಿದೆ. ಆದರೆ ಕೆಂಪು ಇಂಡಿಯನ್ನರಲ್ಲಿ ಮಹಾದೇವ ತನ್ನದೇ ಬಲಪಕ್ಕದ ಎಲುಬಿನಿಂದ ಪುರುಷನನ್ನೂ, ಎಡಪಕ್ಕದ ಎಲುಬಿನಿಂದ ಸ್ತ್ರೀಯನ್ನೂ ಸೃಷ್ಟಿಸಿದನೆಂಬುದಾಗಿ ತಿಳಿದು ಬರುತ್ತದೆ.

**2.4.3 ಜಲ ಪ್ರಳಯ ಪುರಾಣ** ಕ್ರೈಸ್ತಧರ್ಮೀಯರಲ್ಲಿ ಪುರಾಣ ಮತ್ತು ಐತಿಹ್ಯಗಳಿಗೆ ಕೊರತೆ ಇಲ್ಲ. ಬೈಬಲ್ಲಿನ ಹೊಸ ಒಡಂಬಡಿಕೆಗಿಂತಲೂ, ಹಳೆಯ ಒಡಂಬಡಿಕೆಯಲ್ಲಿ ಪುರಾಣದ ಮೂಲಕವೇ ನೀತಿಯನ್ನು ಬೋಧಿಸಲಾಗಿದೆ. ಜಗತ್ತಿನ ಸೃಷ್ಟಿಯ ಅನಂತರ ದೇವರು ತನ್ನ ಒಪ್ಪಂದವನ್ನು ಮೀರಿದ ಮಾನವನನ್ನು ಆಗಲೇ ಅಳಿಸದೆ ಅವನ ಮೇಲೆ ಕರುಣೆತೋರಿ ಮತ್ತೆ ಉಳಿಸಿ ಬದುಕುವ ಮಾರ್ಗ ತೋರಿದ. ಬೈಬಲ್ಲಿನ ಹಳೆಯ ಒಡಂಬಡಿಕೆಯಲ್ಲಿ ದೇವರ ಶಕ್ತಿ, ಕರುಣೆ, ಪ್ರೀತಿ, ಕೋಪ, ಶಿಕ್ಷೆಗಳ ಬಗ್ಗೆ ಪುರಾಣೀಕರಿಸಿದ ಅಂಶಗಳನ್ನು ಕಾಣುತ್ತೇವೆ.

ಪ್ರವಾಹ, ಬೆಂಕಿದುರಂತ ಇತ್ಯಾದಿ ನೈಜ ಘಟನೆಗಳ ಆಧಾರದಮೇಲೆ ಜಲಪುರಾಣ, ಅಗ್ನಿ ಪುರಾಣಗಳು ಹುಟ್ಟಿಕೊಂಡಿವೆ. ಹೀಗೆ ತನ್ನ ಮನೆಮಾರು ಕೊಚ್ಚಿಕೊಂಡು ಹೋಗುವುದನ್ನು ಕಂಡಾಗ ತನ್ನನ್ನು ಮೀರಿದ ಶಕ್ತಿಯೊಂದಿದೆ ಎಂಬುದನ್ನು ಮನಗಂಡು ಕಥೆ ಕಟ್ಟಲಾರಂಭಿಸಿದ್ದರ ಫಲವಾಗಿ ಪುರಾಣಗಳು ಹುಟ್ಟಿಕೊಂಡವು. ಮನುಷ್ಯನನ್ನು ಶಿಕ್ಷಿಸುವ ಸಲುವಾಗಿ ಪ್ರಕೃತಿಯ ಈ ವಿಕೋಪಗಳು ಎಂದು ಮಾನವ ಕಲ್ಪಿಸಿದನು. ಆಗ ಒಬ್ಬ ಮಾತ್ರ ತೇಲಿಕೊಂಡೋ, ಪರ್ವತಶಿಖರವನ್ನೇರಿಯೋ ಉಳಿದುಕೊಂಡಿದ್ದನ್ನು ಪುರಾಣಗಳು ಹೇಳುತ್ತವೆ. ಬೈಬಲ್ಲಿನಲ್ಲಿ ಬರುವ ನೋಹನ ಕಥೆ, ವೇದಗಳಲ್ಲಿ ಬರುವ ಮನು ಮಹಾಮುನಿಯ ಕಥೆ ಇಂತಹುದೇ ಆಗಿದೆ (ಗೊ.ರು. ಚನ್ನಬಸಪ್ಪ–10: 99).

**2.4.3. ಜಲಪ್ರಳಯ** ಕ್ರೈಸ್ತಧರ್ಮೀಯರಲ್ಲಿ ಪುರಾಣ ಮತ್ತು ಐತಿಹ್ಯಗಳಿಗೆ ಕೊರತೆ ಇಲ್ಲ. ಬೈಬಲ್ಲಿನ ಹೊಸ ಒಡಂಬಡಿಕೆಗಿಂತಲೂ, ಹಳೆಯ ಒಡಂಬಡಿಕೆಯಲ್ಲಿ ಪುರಾಣದ ಮೂಲಕವೇ ನೀತಿಯನ್ನು ಬೋಧಿಸಲಾಗಿದೆ. ಜಗತ್ತಿನ ಸೃಷ್ಟಿಯ ಅನಂತರ ದೇವರು ತನ್ನ ಒಪ್ಪಂದವನ್ನು ಮೀರಿದ ಮಾನವನನ್ನು ಆಗಲೇ ಅಳಿಸದೆ ಅವನ ಮೇಲೆ ಕರುಣೆತೋರಿ ಮತ್ತೆ ಉಳಿಸಿ ಬದುಕುವ ಮಾರ್ಗ ತೋರಿದ. ಬೈಬಲ್ಲಿನ ಹಳೆಯ ಒಡಂಬಡಿಕೆಯಲ್ಲಿ ದೇವರ ಶಕ್ತಿ, ಕರುಣೆ, ಪ್ರೀತಿ, ಕೋಪ, ಶಿಕ್ಷೆಗಳ ಬಗ್ಗೆ ಪುರಾಣೀಕರಿಸಿದ ಅಂಶಗಳನ್ನು ಕಾಣುತ್ತೇವೆ.

ಪ್ರವಾಹ, ಬೆಂಕಿದುರಂತ ಇತ್ಯಾದಿ ನೈಜ ಘಟನೆಗಳ ಆಧಾರದಮೇಲೆ ಜಲಪುರಾಣ, ಅಗ್ನಿ ಪುರಾಣಗಳು ಹುಟ್ಟಿಕೊಂಡಿವೆ. ಹೀಗೆ ತನ್ನ ಮನೆಮಾರು ಕೊಚ್ಚಿಕೊಂಡು ಹೋಗುವುದನ್ನು ಕಂಡಾಗ ತನ್ನನ್ನು ಮೀರಿದ ಶಕ್ತಿಯೊಂದಿದೆ ಎಂಬುದನ್ನು ಮನಗಂಡು ಕಥೆ ಕಟ್ಟಲಾರಂಭಿಸಿದ್ದರ ಫಲವಾಗಿ ಪುರಾಣಗಳು ಹುಟ್ಟಿಕೊಂಡವು. ಮನುಷ್ಯನನ್ನು ಶಿಕ್ಷಿಸುವ ಸಲುವಾಗಿ ಪ್ರಕೃತಿಯ ಈ ವಿಕೋಪಗಳು ಎಂದು ಮಾನವ ಕಲ್ಪಿಸಿದನು. ಆಗ ಒಬ್ಬ ಮಾತ್ರ ತೇಲಿಕೊಂಡೋ, ಪರ್ವತಶಿಖರವನ್ನೇರಿಯೋ ಉಳಿದುಕೊಂಡಿದ್ದನ್ನು ಪುರಾಣಗಳು ಹೇಳುತ್ತವೆ. ಬೈಬಲ್ಲಿನಲ್ಲಿ ಬರುವ ನೋಹನ ಕಥೆ, ವೇದಗಳಲ್ಲಿ ಬರುವ ಮನು ಮಹಾಮುನಿಯ ಕಥೆ ಇಂತಹುದೇ ಆಗಿದೆ (ಗೊ.ರು. ಚನ್ನಬಸಪ್ಪ–10:99).

**2.4.4. ನೋಹನ ಕಥೆ** ದೇವರು ಸೃಷ್ಟಿಸಿದ ಮಾನವ ಜನಾಂಗವು ವೃದ್ಧಿಸುತ್ತಿದ್ದಂತೆ ಅಕ್ರಮವೂ ಬೆಳೆಯ ತೊಡಗಿತು. ಇದರ ಪರಿಣಾಮವಾಗಿ ದೇವರು ತನ್ನ ಸೃಷ್ಟಿಯ ಬಗ್ಗೆ ತಾನೇ ಪಶ್ಚಾತಾಪ ಪಡುವಂತಾಯಿತು. " In the strange cult of man, sinners are deified and God does the repenting' (Bible commentary:88) ಅಷ್ಟು ಮಾತ್ರವಲ್ಲ ತನ್ನ ಪ್ರೀತಿಗೆ ಪಾತ್ರನಲ್ಲದ ಮಾನವ ಶಿಕ್ಷಾರ್ಹ ಎಂದು ತೀರ್ಮಾನಿಸಿದನು.

ಆಗ ನೋಹ ಎಂಬ ವ್ಯಕ್ತಿ ತನ್ನ ಪತ್ನಿ, ಮೂವರು ಪುತ್ರರು ಸೊಸೆಯರೊಡನೆ ವಾಸಿಸುತ್ತಿದ್ದನು. ಅವನು ನೀತಿವಂತನೂ, ಧರ್ಮನಿಷ್ಠನೂ ಆಗಿದ್ದನು. ದೇವರು ಅವನನ್ನು ಕಂಡು "ಎಲ್ಲಾ ದೇಹಿಗಳನ್ನು ಅಂತ್ಯವನ್ನು ತೀರ್ಮಾನಿಸಿದ್ದೇನೆ. ಭೂಮಿಯು ಅನ್ಯಾಯದಿಂದ ತುಂಬಿ ಹೋಗಿದೆ. ನೀನು ಒಂದು ದೊಡ್ಡ ನಾವೆಯನ್ನು ಕಟ್ಟಿಕೊಂಡು ನಿನ್ನ ಪರಿವಾರದೊಡನೆ ಅದರಲ್ಲಿ ಸೇರಿಕೋ. ಅಲ್ಲದೇ ಎಲ್ಲಾ ಶುದ್ಧ ಪಶುಪಕ್ಷಿಗಳಲ್ಲಿ ಏಳೇಳು ಗಂಡು ಹೆಣ್ಣುಗಳನ್ನೂ ಶುದ್ಧವಲ್ಲದ ಪಶುಪಕ್ಷಿಗಳಲ್ಲಿ ಎರಡೆರಡು ಗಂಡುಹೆಣ್ಣುಗಳನ್ನೋ ನಿನ್ನೊಂದಿಗೆ ತೆಗೆದುಕೋ. ಹೀಗೆ ಆಯಾ ಜಾತಿಯನ್ನು ಭೂಮಿಯ ಮೇಲೆ ಉಳಿಸಿ ಕಾಪಾಡಬೇಕು. ನಿನಗೂ ಅವುಗಳಿಗೂ ಆಹಾರವನ್ನು ಕೂಡಿಸಿಡಬೇಕು: ಎಂದು ಹೇಳಿದನು. ನೋಹನು ಹಾಗೆಯೇ ಮಾಡಿದನು.

ಅಂತೆಯೇ ಜಲಪ್ರಳಯವು ಭೂಮಿಯ ಮೇಲೆ ಬಂದಿತು. ಭೂಮಿಯ ಕೆಳಗಿರುವ ಸಾಗರದ ಸೆಲೆಗಳು ಒಡೆದವು. ಆಕಾಶದ ತೂಬುಗಳು ತೆರೆದವು. ನಲ್ವತ್ತು ದಿನಗಳವರೆಗೆ ಸತತವಾಗಿ ಮಳೆ ಸುರಿಯಿತು. ನೀರು ಪ್ರಬಲವಾಗಿ ಹೆಚ್ಚಲು ನಾವೆಯು ಅದರ ಮೇಲೆ ಚಲಿಸಿತು. ನೋಹನ ಕುಟುಂಬದ ಹೊರತು ಉಳಿದೆಲ್ಲಾ ಸೃಷ್ಟಿಯ ವಸ್ತುಗಳೂ, ಮನುಷ್ಯರೂ ಲಯವಾದವು. ನೋಹನು ಅವನೊಂದಿಗಿದ್ದ ಜೀವಿಗಳು ಮಾತ್ರ ಉಳಿದುಕೊಂಡರು.

ನಲ್ವತ್ತು ದಿನಗಳಾದ ಮೇಲೆ ನೋಹನು ತನ್ನ ನಾವೆಯ ಕಿಟಕಿಯನ್ನು ತೆಗೆದು ಕಾಗೆಯನ್ನು ಹೊರಗೆ ಬಿಟ್ಟನು. ಕಾಗೆ ಹೋಗುತ್ತ ಬರುತ್ತ ಇದ್ದಿತು. ಇನ್ನೂ ಕೆಲವು ದಿನಗಳಾದ ಮೇಲೆ ಪಾರಿವಾಳವನ್ನು ಹೊರಗೆ ಬಿಟ್ಟನು. ಅದು ಎರಡನೇ ಸಲ ಹೊರಗೆ ಹೋಗಿ ನಾವೆಯೊಳಗೆ ಬರುವಾಗ ಎಣ್ಣೆಯ ಮರದ ಚಿಗುರನ್ನು ಬಾಯಲ್ಲಿ ಹಿಡಿದುಕೊಂಡಿತ್ತು. ಅದನ್ನು ನೋಡಿ ಭೂಮಿಯ ಮೇಲಿನ ನೀರು ಇಳಿದು ಹೋಯಿತೆಂದು ತಿಳಿದುಕೊಂಡನು. ಮತ್ತೆ ಏಳುದಿವಸದ ತರುವಾಯ ನೋಹನು ನಾವೆಯ ಗವಸಣಿಗೆಯನ್ನು ತೆರೆದು ನೋಡಲು ಭೂಮಿಯ ನೀರೆಲ್ಲಾ ಆರಿ ಹೋಗಿತ್ತು; ಭೂಮಿಯು ಒಣಗಿತ್ತು.

ನೋಹನು ತನ್ನ ಹೆಂಡತಿ ಮಕ್ಕಳ ಸಹಿತ ನಾವೆಯಿಂದ ಹೊರಬಂದನು. ಎಲ್ಲಾ ಜಾತಿಯ ಮೃಗ ಪಕ್ಷಿಗಳೂ ಹೊರಬಂದವು. ದೇವರು ನೋಹನನ್ನೂ ಅವನ ಮಕ್ಕಳನ್ನೂ ಆಶೀರ್ವದಿಸಿ ಅವರಿಗೆ " ನೀವು ಬಹುಸಂತಾನವುಳ್ಳವರಾಗಿ ಹೆಚ್ಚಿರಿ, ಭೂಲೋಕದಲ್ಲೆಲ್ಲ ತುಂಬಿಕೊಳ್ಳಿರಿ (Be fruitful) ಭೂಮಿಯ ಮೇಲಿರುವ ಎಲ್ಲ ಮೃಗಗಳೂ, ಆಕಾಶದ ಎಲ್ಲಾ ಪಕ್ಷಿಗಳೂ, ನೆಲದ ಮೇಲೆ ಹರಿದಾಡುವ ಕ್ರಿಮಿಕೀಟಗಳೂ, ಸಮುದ್ರದ ಮೀನುಗಳೂ ನಿಮಗೆ ಬೆದರಿ ಅಂಜಿಕೊಳ್ಳುವುವು. ನಾನು ಅವುಗಳನ್ನೆಲ್ಲಾ ನಿಮ್ಮ ಸ್ವಾಧೀನಕ್ಕೆ ಕೊಟ್ಟಿದ್ದೇನೆ " ಎಂದನು.

ಅಲ್ಲದೆ ಇನ್ನೊಂದು ಇಂಥ ಜಲಪ್ರಳಯವು ಸಂಭವಿಸುವುದಿಲ್ಲವೆಂದು ಸ್ಥಿರಪ್ರತಿಜ್ಞೆ ಮಾಡಿರುವುದಾಗಿ ದೇವರು ಹೇಳಿದನು. ಈ ಪ್ರತಿಜ್ಞೆಗೆ ಗುರುತಾಗಿ ಮೇಘಗಳಲ್ಲಿ

ನಾಟಿಕೊಂಡಿರುವ ಮುಗಿಲಬಿಲ್ಲೇ ಸಾಕ್ಷಿ ಎಂದೂ ಹೇಳಿದನು (ಸತ್ಯವೇದ: 88:9). ಇದು ಮಾನವ ಹಾಗೂ ದೇವರ ನಡುವೆ ಆದ ಒಡಂಬಡಿಕೆಯಾಗಿತ್ತು. ನೋಹನ ಮೂವರು ಮಕ್ಕಳಿಂದಲೇ ಭೂಮಿಯಲ್ಲಿ ಹರಡಿಕೊಂಡಿರುವ ಮನುಷ್ಯರು ಉತ್ಪತಿಯಾದದ್ದು.

ಈ ಪುರಾಣಗಳು ಕ್ರೈಸ್ತರಲ್ಲಿ ದೇವರ ಬಗೆಗೆ ಭಯವನ್ನು ಹುಟ್ಟಿಸಿವೆ. ದೇವರು ಸರ್ವಶಕ್ತಿ, ಸೃಷ್ಟಿಸಿದ ಅನಂತರ ಯಾವ ರೀತಿಯಲ್ಲಾದರೂ ಅದನ್ನು ನಾಶಮಾಡಬಲ್ಲ. ಇಚ್ಛಿಸಿದರೆ ರಕ್ಷಣೆಯನ್ನೂ ಮಾಡಬಲ್ಲ. ದೇವರ ಕರುಣೆಯಿಂದಲೇ ಬದುಕಬೇಕು. ಕೋಪ ಮಾಡಿಕೊಳ್ಳ ದಂತೆ, ಅವನಿಚ್ಛೆಯಂತೆಯೇ ಪೂಜೆ-ಪುನಸ್ಕಾರಾದಿಗಳನ್ನು ಮಾಡುತ್ತ ಅವನ ಆಜ್ಞೆಗಳಿಗೆ ತಲೆಬಾಗಿ ನಡೆದುಕೊಳ್ಳಬೇಕು ಎಂಬ ತತ್ವಗಳನ್ನು ಅಳವಡಿಸಿಕೊಂಡಿರುವುದನ್ನು ಕಾಣುತ್ತೇವೆ.

ಸೃಷ್ಟಿ ಜನಪದರ ದೃಷ್ಟಿಯಲ್ಲಿ ಒಂದು ನಿರಂತರ ಪ್ರಕ್ರಿಯೆ ಅದು ತಮ್ಮ ಜೀವನದ ಆಗುಹೋಗುಗಳು ನಡೆಯುತ್ತಲೇ ಇರುತ್ತದೆ. 'ಹುಟ್ಟಿಸಿದವನು ಹುಲ್ಲು ಮೇಯಿಸುತ್ತಾನೆಯೇ ' ಎಂಬ ನಂಬಿಕೆಯೊಡನೆ, ಮಕ್ಕಳು ದೇವರ ಕೊಡುಗೆ, ಅವನ ಇಚ್ಛೆಯಂತೆ ಎಷ್ಟು ಮಕ್ಕಳಾದರೂ ಅವನ ಅನುಗ್ರಹವೆಂದು ಸ್ವೀಕರಿಸಬೇಕು, ಎಂಬ ಮನೋಭಾವ ಹೊಂದಿರುತ್ತಾರೆ. ಆದಿಮಾನವನನ್ನು ಸೃಷ್ಟಿಸಿದಾಗಲೂ, ನೋಹನನ್ನು ರಕ್ಷಿಸಿದಾಗಲೂ ದೇವರು ವಿಧಿಸಿದ್ದು 'ನೀವು ಬಹುಸಂತಾನವುಳ್ಳವರಾಗಿ ಹೆಚ್ಚಿರಿ, ಭೂಲೋಕದಲ್ಲೆಲ್ಲಾ ಹರಡಿಕೊಳ್ಳಿರಿ ' ಎಂದು. ಈ ಮಾತುಗಳ ಆಧಾರದ ಮೇಲೆಯೇ ಕ್ರೈಸ್ತರಲ್ಲಿ ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳುವುದು ನಿಷಿದ್ಧವಾಗಿದೆ. ಬಹುತೇಕ ಕ್ರೈಸ್ತರು ಶಸ್ತ್ರ ಚಿಕಿತ್ಸೆ ಮಾಡಿಸಿಕೊಳ್ಳದಿರುವುದನ್ನು ರಾಜ್ಯದ ಎಲ್ಲೆಡೆ ಕಾಣಬಹುದಾಗಿದೆ.

ದೇವರು ನೋಹನನ್ನು ರಕ್ಷಿಸಿದಾಗ ಆತನ ಹೆಂಡತಿ, ಗಂಡು ಮಕ್ಕಳು ಸೊಸೆಯರೊಂದಿಗೆ ರಕ್ಷಿಸಿದನು. ಮಾತ್ರವಲ್ಲ ಎಲ್ಲಾ ಪಶುಪಕ್ಷಿಗಳನ್ನು ಗಂಡು-ಹೆಣ್ಣುಗಳ ಜೊತೆಜೊತೆಯಾಗಿ ತೆಗೆದುಕೊಳ್ಳುವಂತೆ ಆಜ್ಞಾಪಿಸಿದನು - ಎಂದು ಪುರಾಣಗಳು ನಿರೂಪಿಸುತ್ತವೆ. ಇದರಿಂದ ಲೈಂಗಿಕ ಪ್ರವೃತ್ತಿಯಲ್ಲಿ ಸ್ವಾತಂತ್ರ್ಯ ನೀಡಿರುವುದು ಕಂಡುಬರುತ್ತದೆ. ಮಾನವನ ಮೊದಲ ಪಾಪ ಲೈಂಗಿಕ ಕ್ರಿಯೆಯಲ್ಲ ಎಂಬುದನ್ನು ಇದು ಸ್ಪಷ್ಟೀಕರಿಸುತ್ತದೆ.

ಕ್ರೈಸ್ತರ ಜೀವನದಲ್ಲಿ ಪಾರಿವಾಳಕ್ಕೆ ಮಹತ್ವದ ಸ್ಥಾನ ದೊರೆತಿದೆ. ಜಲಪ್ರಳಯದ ಸಮಯದಲ್ಲಿ ರಕ್ಷಣೆಯಾದ ಪಕ್ಷಿಗಳಲ್ಲಿ ಇತರ ಪಕ್ಷಿಗಳಿಗಿಂತ ಇದು ಉನ್ನತ ಸ್ಥಾನ ಪಡೆದಿದೆ. ಕ್ರೈಸ್ತ ಧಾರ್ಮಿಕ ತತ್ವದಂತೆ 'ತ್ರಿತ್ವ' (ಪಿತ, ಸುತ ಮತ್ತು ಪವಿತ್ರಾತ್ಮ)ಗಳಲ್ಲಿ ಮೂರನೇ ವ್ಯಕ್ತಿಗೆ ಸಂಕೇತವಾಗಿ ಪಾರಿವಾಳವನ್ನು ಬಳಸಿರುವರು. ಭೂಮಿಯ ಮೇಲೆ ನೀರು ಕಡಿಮೆಯಾಗಿರುವುದೋ ಇಲ್ಲವೋ ಎಂದು ತಿಳಿಯಲು ನೋಹನು ಕಾಗೆಯನ್ನು ಹೊರಗೆ ಬಿಟ್ಟಾಗ ಅದು ಮರಳಿ ಬರಲಿಲ್ಲ. ಪಾರಿವಾಳ ಎಣ್ಣೆ ಮರದ ಚಿಗುರನ್ನು ಹೊತ್ತು ಸಂದೇಶ ನೀಡಲು ಮರಳಿ ಬಂದಿತು. ಪಾರಿವಾಳದ ಪಾದಗಳು ಕೆಂಪಗೆ ಇರುವುದಕ್ಕೆ ಅಂದು ಭೂಮಿಯ ಮೇಲಿದ್ದ ನೀರಿನ ಮಟ್ಟವೇ ಕಾರಣ ಎಂದು ಕ್ರೈಸ್ತರು ಭಾವಿಸುವರು. ಪಾರಿವಾಳ ಪರಿಶುದ್ಧತೆಯ ಗುರುತು, ಪವಿತ್ರಾತ್ಮರು ಪಾರಿವಾಳದ ಹಾಗೆ ಜನರ ಮೇಲೆ ಇಳಿದು ಬಂದರು ಎಂಬುದಾಗಿ ನಂಬುತ್ತಾರೆ.

ರಾಜ್ಯದ ಚರ್ಚುಗಳಲ್ಲಿ ಪೀಠದ ಮೇಲೆ ಪಾರಿವಾಳದ ಚಿತ್ರವನ್ನು ಮೂಡಿಸಿರುವುದು ಕಂಡು ಬರುತ್ತದೆ. ಚರ್ಚುಗಳ ಬಾಗಿಲ ಹತ್ತಿರ ಒಳಭಾಗದಲ್ಲಿ ಹಣೆಗೆ ಹಚ್ಚಿಕೊಳ್ಳಲು ತೀರ್ಥವನ್ನು ಇಟ್ಟಿರುತ್ತಾರೆ. ಅದನ್ನು ಗೋಡೆಯಲ್ಲಿಯೇ ಸಣ್ಣದಾಗಿ ಸಿಮೆಂಟಿನಲ್ಲಿ ಕಟ್ಟಿಸಿರುತ್ತಾರೆ. ಅದರ ಮೇಲೆಯೂ ಪಾರಿವಾಳದ ಚಿತ್ರವನ್ನು ಮೂಡಿಸಿರುವುದನ್ನು ಕಾಣುತ್ತೇವೆ. ಹೀಗೆ ಕ್ರೈಸ್ತ ಪುರಾಣಗಳು ಕ್ರೈಸ್ತರ ಜೀವನದುದ್ದಕ್ಕೂ ಎಲ್ಲಾ ಸಂಸ್ಕಾರಗಳ ಮೇಲೆಯೂ ಪ್ರಭಾವವನ್ನು ಬೀರುತ್ತವೆ.

## 2.2 ಕರ್ನಾಟಕದ ಕ್ರೈಸ್ತ ಬುಡಕಟ್ಟುಗಳು

### 2.2.1 ಒಳಪಂಗಡಗಳು




ಕ್ರೈಸ್ತರಲ್ಲಿ ಪ್ರಧಾನವಾಗಿ ಎರಡು ಪಂಗಡಗಳು; ಕಥೋಲಿಕರು ಮತ್ತು ಪ್ರೊಟೆಸ್ಟೆಂಟರು. ಮೂಲ ಕ್ರೈಸ್ತಮತದಲ್ಲಿ ಕೆಲವು ನ್ಯೂನತೆಗಳನ್ನು ಕಂಡ ಮಾರ್ಟಿನ್ ಲೂಥರ್ 1517ರಲ್ಲಿ ಪೋಪ್ ಜಗದ್ಗುರುವಿನ ಏಕಸ್ವಾಮ್ಯತೆಯನ್ನು ಪ್ರಶ್ನಿಸಿ ಪ್ರೊಟೆಸ್ಟೆಂಟ್ ಪಂಥಕ್ಕೆ ನಾಂದಿ ಹಾಡಿದ. ಈತನ ಅನುಯಾಯಿಗಳೇ ಮುಂದೆ ಪ್ರೊಟೆಸ್ಟೆಂಟರಾದರು. ಉಳಿದವರು ರೋಮನ್ ಕಥೋಲಿಕರಾಗಿಯೇ ಉಳಿದು ಮುಂದುವರೆದರು.

**2.2.1.1 ಕಥೋಲಿಕರು** ಇವರಲ್ಲಿ ಒಳಪಂಗಡಗಳು ಇಲ್ಲವಾದರೂ ಭಾಷೆಯನ್ನಾಧರಿಸಿ ಕರ್ನಾಟಕದಲ್ಲಿ ಕನ್ನಡ ಕ್ರೈಸ್ತರು, ತಮಿಳು ಕ್ರೈಸ್ತರು, ಮತ್ತು ಕೊಂಕಣಿ ಕ್ರೈಸ್ತರೆಂದು ಭಾಷಾ ಪಂಗಡಗಳಾಗಿ ಮಾಡಿಕೊಳ್ಳಬಹುದು. ಆದರೆ ಧಾರ್ಮಿಕ ರೀತಿ ನೀತಿಗಳಲ್ಲಿ ಇವರೆಲ್ಲರೂ ಒಬ್ಬರೇ ಜಗದ್ಗುರುವಿನ ಅಧಿಕಾರಕ್ಕೊಳಪಟ್ಟಿದ್ದಾರೆ.

ಕ್ರೈಸ್ತಧರ್ಮದ ಸಂದೇಶ ಪ್ರೀತಿ, ತ್ಯಾಗ ಮತ್ತು ಸೇವೆ, ಇವುಗಳನ್ನು ಆಧರಿಸಿ ಕ್ರೈಸ್ತ ಧರ್ಮಸಭೆ ಕಟ್ಟು ಕಟ್ಟಳೆಗಳನ್ನು ಮಾಡಿಕೊಂಡಿದೆ. ಧರ್ಮಸಭೆ (Church) ಕಥೋಲಿಕರ ಸಾರ್ವತ್ರಿಕ ಮಹಾಸಭೆಯಾಗಿದೆ. ' ಯೇಸುಕ್ರಿಸ್ತನ ಶಿಷ್ಯರಲ್ಲಿ ಒಬ್ಬನಾದ 'ಪೀಟರ್' ಈ ಮಹಾಸಭೆಯ ಪ್ರಥಮ ಮಹಾಗುರುವಾಗಿದ್ದನು ಎಂಬುದನ್ನು ಕ್ರೈಸ್ತ ಸಮುದಾಯ ಒಪ್ಪಿಕೊಂಡಿದೆ. ಅಂದಿನಿಂದ ಇಂದಿನವರೆಗೂ ಇನ್ನೂರ ಅರವತ್ತೆರಡು ಜನ ಪೋಪ್ ಜಗದ್ಗುರುಗಳಾಗಿ, ಕಥೋಲಿಕ ಕ್ರೈಸ್ತರ ತಂದೆಯಾಗಿ ಇಡೀ ಪ್ರಪಂಚ ಕಥೋಲಿಕ ಕ್ರೈಸ್ತರ ಕಣ್ಣಾಗಿ ಕೆಲಸಮಾಡಿ ಹೋಗಿದ್ದಾರೆ (ತಲ್ವಾಡಿ 1991: vii). ಪೋಪ್ ಜಗದ್ಗುರು ಕಥೋಲಿಕ ಕ್ರೈಸ್ತರ ಸರ್ವೋಚ್ಛ ವಿಶ್ವಗುರುವಾಗಿದ್ದಾರೆ.

ಧರ್ಮಸಭೆಯು ಕ್ರೈಸ್ತರಿಗೆ ತಾಯಿ ಇದ್ದಂತೆ. ಇದೊಂದು ದೇಹವಾದರೆ ಇದರ ಶಿರಸ್ಸು ಯೇಸುಕ್ರಿಸ್ತ. ಆದ್ದರಿಂದ ಕಥೋಲಿಕ ಧರ್ಮಸಭೆಯು ಪವಿತ್ರವಾದದ್ದು. ಕ್ರಿಸ್ತನ ಮಾರ್ಗದರ್ಶನದಲ್ಲಿ ಧರ್ಮಪ್ರಚಾರ ಮಾಡುವುದು, ಕ್ರೈಸ್ತರ ಆಧ್ಯಾತ್ಮಿಕ ಜೀವನವು ಸುಗಮವಾಗುವಂತೆ ನೋಡಿಕೊಳ್ಳುವುದು, ಧರ್ಮಸಭೆಯ ಕರ್ತವ್ಯ. ಯೇಸುಕ್ರಿಸ್ತನು ಸ್ಥಾಪಿಸಿದ ಈ ಮಹಾಸಭೆಗೆ ಪೂರ್ಣ ಅಧಿಕಾರವಿದೆ He gave the power of Governing

his church under the figure of binding and losing (Fr. Vassall 1916:328) ಇಂಥ ಪರಿಪೂರ್ಣ ಅಧಿಕಾರವನ್ನು ಹೊಂದಿರುವ ಇದರ ಪರಿಪಾಲನೆಗೆ ಸರ್ವರೂ ಪಾಲಿಸಲು ಸಾಧ್ಯವಾಗುವಂತಹ ಕೆಲವು ನಿಯಮಗಳನ್ನು ಜಾರಿಗೆ ತರಲಾಗಿದೆ. ಇಡೀ ಪ್ರಪಂಚದಲ್ಲಿರುವ ಕಥೋಲಿಕರಿಗೆಲ್ಲ ಮೂಲತಃ ಒಂದೇ ಕಾನೂನು ಒಬ್ಬರೇ ಅಧಿಕಾರಿ ಇದ್ದರೂ ಕಾರಣಾಂತರಗಳಿಂದ ಆಯಾ ರಾಷ್ಟ್ರದ ಭೌಗೋಳಿಕ, ಪ್ರಾದೇಶಿಕ, ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ವಾಯುಗುಣಗಳಿಗನುಸಾರ ಅನಿವಾರ್ಯ ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡಿರುವುದನ್ನು ಕಾಣುತ್ತೇವೆ.

ಕಥೋಲಿಕರು ಹುಟ್ಟಿನಿಂದ ಸಾವಿನವರೆಗೆ ಜೀವನದ ಬೇರೆ ಬೇರೆ ಹಂತಗಳಲ್ಲಿ ಪಾಲಿಸಬೇಕಾದ ಸಂಸ್ಕಾರಗಳು " ಏಳು ದಿವ್ಯ ಸಂಸ್ಕಾರಗಳು " ಅವು ಇಂತಿವೆ;

1. ದೀಕ್ಷಾಸ್ನಾನ (Baptism)
2. ದೃಢೀಕರಣ (Confirmation)
3. ಪರಮಪ್ರಸಾದ (Eucharist, Commission)
4. ಪಶ್ಚಾತ್ತಾಪ (Confession, Penance)
5. ಅವಧಿ ಅಭ್ಯಂಗ(Extrane unction)
6. ಯಾಜಕಾಭಿಷೇಕ (Holy order)
7. ವಿವಾಹ (Matrimony)

ಮೊದಲ ಐದು ಸಂಸ್ಕಾರಗಳು ಕ್ರೈಸ್ತ ಆಧ್ಯಾತ್ಮಿಕ ಜೀವನವನ್ನು ರೂಪಿಸುತ್ತವೆ. ಆರನೆಯ ಮತ್ತು ಏಳನೆಯ ಸಂಸ್ಕಾರಗಳನ್ನು ಸಾಮಾಜಿಕ ಸಂಸ್ಕಾರಗಳೆಂದು ಹೇಳುವರು. ವಿದ್ವಾಂಸರೊಬ್ಬರು ಇದಕ್ಕೆ ಕಾರಣವನ್ನು ಕೊಡುತ್ತಾ "These two sacraments are sometimes called social sacraments, for the very reason that the grace which the convey is given to its recipient not only for his own spiritual well being whole Christian society (Fr. Vassall. 1916:454) ಎಂದು ಬರೆದಿದ್ದಾರೆ. ಯಾಕರು ಬಲಿಪೂಜೆಯನ್ನು ಅರ್ಪಿಸುವ ಮೂಲಕ ಜೀವಿಸುತ್ತಿರುವ ಹಾಗೂ ಮೃತರ ಆತ್ಮೋನ್ನತಿಗೆ ಕಾರಣಕರ್ತರಾಗುತ್ತಾರೆ. ಪ್ರಸಾದ ವಿನಿಯೋಗ, ಸುಸಂದೇಶ (Holy Bible) ವನ್ನು ಸಾರುವುದು, ಅಸ್ವಸ್ಥರ ಆಧ್ಯಾತ್ಮಿಕ ಅವಶ್ಯಕತೆಗಳನ್ನು ಪೂರೈಸುವುದು, ಮಕ್ಕಳಿಗೆ ಧರ್ಮೋಪದೇಶ ಕಲಿಸುವುದು, ವಿವಾಹ, ಅಂತ್ಯ ಸಂಸ್ಕಾರಗಳನ್ನು ನಡೆಸಿಕೊಡುವುದು, ಇತ್ಯಾದಿ ಕಾರ್ಯಗಳ ಮೂಲಕ ಸಮಾಜ ಸೇವೆಯನ್ನು ಮಾಡುತ್ತಾರೆ. ಕ್ರೈಸ್ತ ಧರ್ಮಗುರು ಯೇಸುಕ್ರಿಸ್ತನನ್ನು ಅನುಸರಿಸಿ ಬ್ರಹ್ಮಚಾರಿಯಾಗಿಯೇ ಉಳಿಯುತ್ತಾರೆ. ಗುರುಮಠಗಳಲ್ಲಿ ಯಾಜಕ ತರಬೇತಿಯನ್ನು ಪಡೆಯಬೇಕಾಗುತ್ತದೆ. ಅಭ್ಯರ್ಥಿಗಳಿಗೆ ಆಧ್ಯಾತ್ಮಿಕ, ನೈತಿಕ ಹಾಗೂ ಬೌದ್ಧಿಕ ಶಕ್ತಿಯನ್ನು ಒದಗಿಸುವ ಈ ಮಠಗಳು ಅವರಿಗೆ ಧರ್ಮಸಹಿಷ್ಣುತೆ, ದೇಶ, ಭಾಷೆ, ಸಂಸ್ಕೃತಿಯ ಜ್ಞಾನವನ್ನು ವೃದ್ಧಿಸಿಕೊಳ್ಳಲು ಸಹಾಯ ಮಾಡುತ್ತವೆ. ಕ್ರಿಸ್ತನ ಉಪದೇಶದನ್ವಯ ಬಾಳಲು ಶಾಂತಿ, ಪ್ರೀತಿ, ದಯೆ ಇತ್ಯಾದಿಗಳನ್ನು ಮನುಕುಲಕ್ಕೆ ಬೋಧಿಸಲು ಇವರು ಸಿದ್ಧರಾಗಿ ಬರುತ್ತಾರೆ. ತರಬೇತಿಯ ಅವಧಿಯಲ್ಲಿ ಅಯೋಗ್ಯರೆಂದು ಕಂಡುಬಂದಲ್ಲಿ ಸೆಮಿನರಿ (ಗುರುಮಠ)ಯಿಂದ ಹೊರಗೆ ಹಾಕುತ್ತಾರೆ. ಸುಮಾರು ಹತ್ತು ವರ್ಷಗಳ ಕಾಲ ನಿಯಮಬದ್ಧ ಅಧ್ಯಯನ ನಡೆಸಿ, ಹಿರಿಯ ಗುರುಗಳ ಮೆಚ್ಚುಗೆ ಗಳಿಸಿದ ಮೇಲೆ ಧರ್ಮಾಧ್ಯಕ್ಷರಿಂದ ಗುರುದೀಕ್ಷೆ ನೀಡಲಾಗುತ್ತದೆ. ಕ್ರೈಸ್ತಗುರುಗಳು ವಿಧೇಯತೆ, ಬಡತನ ಮತ್ತು ಬ್ರಹ್ಮಚರ್ಯೆ ಎಂಬ ಮೂರು ಪ್ರತಿಭೆಗಳನ್ನು ಕೈಗೊಂಡು ತಮ್ಮ ಕಾರ್ಯದಲ್ಲಿ ತೊಡಗುತ್ತಾರೆ.

ಇದೇ ರೀತಿ ದೇವಕಾರ್ಯ ನಿಮಿತ್ತವಾಗಿ ಯುವತಿಯರೂ ತಂದೆತಾಯಿ, ಬಂಧು-ಬಳಗದವರನ್ನು ತೊರೆದು ಬರುತ್ತಾರೆ. ಇವರಿಗೆ ಸೂಕ್ತ ಶಿಕ್ಷಣ ನೀಡಿ, ಮಠದ ಜೀವನ ನಡೆಸುವ ಕ್ರಮವನ್ನು ಕಲಿಸಿ ದೀಕ್ಷೆಕೊಟ್ಟು ಕನ್ಯಾಸ್ತ್ರೀಯರನ್ನಾಗಿ ಮಾಡಲಾಗುತ್ತದೆ. ಈ ಒಂದು ಸಂಸ್ಕಾರವನ್ನು ಧರ್ಮಾಧ್ಯಕ್ಷರೇ ನಡೆಸಿಕೊಡುತ್ತಾರೆ. ಪೂಜಾ ವಿಧಿಗಳನ್ನು ಅರ್ಪಿಸುವ ಕಾರ್ಯವೊಂದನ್ನು ಬಿಟ್ಟು ಉಳಿದೆಲ್ಲಾ ಕೆಲಸಗಳನ್ನು ಗುರುಪ್ರಸಾದಿಗಳಿಗಿಂತಲೂ ಅಚ್ಚುಕಟ್ಟಾಗಿ ಮಾಡುತ್ತಾರೆ. ಶಾಲಾ ಕಾಲೇಜುಗಳು, ಆಸ್ಪತ್ರೆ, ವೃದ್ಧಾಶ್ರಮಗಳು, ಅನಾಥಾಶ್ರಮಗಳು, ತರಬೇತಿ ಕೇಂದ್ರಗಳು ಇತ್ಯಾದಿಗಳನ್ನು ನಡೆಸುವ ಕೆಲಸಗಳನ್ನು ಅರ್ಪಣಾಭಾವದಿಂದ ಮಾಡುತ್ತಾರೆ. ಹೀಗೆ ಕನ್ಯಾಸ್ತ್ರೀಯರು ಪ್ರಾರ್ಥನೆ, ಧ್ಯಾನ, ಚಿಂತನೆಗಳಿಗೆ ತಮ್ಮ ಜೀವನವನ್ನು ಅಳವಡಿಸಿಕೊಂಡು ಜನಸೇವೆಯ ಮೂಲಕ ಕ್ರಿಸ್ತನ ಸೇವೆಯನ್ನು ಮಾಡುತ್ತಿದ್ದಾರೆ.

ಸಾಮಾಜಿಕ ಸಂಸ್ಕಾರಗಳಲ್ಲಿ ವಿವಾಹ ಸಂಸ್ಕಾರದ ಬಗ್ಗೆ ನಾಲ್ಕನೆಯ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಈ ಏಳು ದಿವ್ಯ ಸಂಸ್ಕಾರಗಳು (Sacraments) ಕಥೋಲಿಕರ ಜೀವನವನ್ನು ರೂಪಿಸುತ್ತದೆ.

ಯೇಸುಕ್ರಿಸ್ತನ ಅನಂತರ ಮಾತೆಮೇರಿಗೆ (ಮರಿಯಮ್ಮ) ಕಥೋಲಿಕರು ಅಗ್ರಸ್ಥಾನ ನೀಡಿದ್ದಾರೆ. ಇವರು ತಮ್ಮ ಕುಟುಂಬಗಳಲ್ಲಿ ಅನುದಿನ ಮಾತೆಗೆ ಮೀಸಲಾದ ಜಪಸರವನ್ನು ಭಜಿಸುತ್ತಾರೆ. ಮಾತ್ರವಲ್ಲ ಸಕಲ ಸಂತರಿಗೂ ವೈಯಕ್ತಿಕವಾದ ‘ ಮನವಿಮಾಲೆ ’ ಎಂಬ ಪ್ರಾರ್ಥನಾ ಸರಣಿ ಇದೆ. ಸಂತರನ್ನು ಗೌರವಿಸಿ, ಅವರ ಸ್ಮರಣಾರ್ಥವಾಗಿ ಅವರ ಪ್ರತಿಮೆಗಳನ್ನು ಪ್ರತಿಷ್ಠಾಪಿಸುತ್ತಾರೆ. ಧರ್ಮಸಭೆ ಇದನ್ನು ಅನುಮೋದಿಸುತ್ತದೆ. ಅನಂತರ ರಾಣಿಯಾಗಿ ಮರಿಯಮ್ಮನನ್ನು ಪೂಜಿಸಿ, ತಮಗೆ ಬೇಕಾದ ವರದಾನಗಳನ್ನು ಪಡೆದುಕೊಡುವಂತೆ ಪ್ರಾರ್ಥಿಸುವರು. ಮರಿಯಮ್ಮ ಮತ್ತು ಸಂತರನ್ನು ಕಥೋಲಿಕರು ತಮ್ಮ ಮತ್ತು ದೇವರ ನಡುವಿನ ಮಧ್ಯವರ್ತಿಗಳಾಗಿ ಪರಿಗಣಿಸುವರು.

ಅಮ್ಮಾ ನೀವೇ ಮೋಕ್ಷಕೆ ಏಣಿ
ಇಹಪರ ಲೋಕಕೆ ನೀ ಮಹಾರಾಣಿ
ನಿರ್ಬಲ ಪಾಪಿಗೆ ಮುಕ್ತಿಯ ಶ್ರೇಣಿ
ಹೆಮ್ಮೆಯ ಏಕೈಕ ರಕ್ಷಾಪಾಣಿ

- ಎಂದು ಹಾಡಿ ಹೊಗಳುವರು. ಮಾತೆ ಮೇರಿ ಮತ್ತು ಸಂತರ ಗೌರವಾರ್ಥವಾಗಿ ಅನೇಕ ದೇವಾಲಯಗಳು ಕೂಡ ನಿರ್ಮಿತವಾಗಿವೆ. ಭಕ್ತರ ಸಂಖ್ಯೆ ಹೆಚ್ಚಾದಂತೆ ಪುಣ್ಯಕ್ಷೇತ್ರಗಳಾಗಿ ಮಾರ್ಪಡಿಸಿ ಜಾತ್ರೆ ಉತ್ಸವಗಳನ್ನು ನಡೆಸಲಾಗುತ್ತಿದೆ. ಈ ಜಾತ್ರೆ ಉತ್ಸವಗಳು ಕರ್ನಾಟಕದಲ್ಲಿ ನಡೆಯುವ ಅನ್ಯಧರ್ಮೀಯರ ಜಾತ್ರೆಯೋಪಾದಿಯಲ್ಲಿಯೇ ಜರುಗುತ್ತವೆ. ಮಾತೆಮೇರಿಯ, ಸಂತರ, ಪವಿತ್ರ ಹೃದಯದ ಯೇಸುವಿನ ಪ್ರತಿಮೆಗಳು, ಯೇಸುಬಾಲನ ಪ್ರತಿಮೆ, ಶಿಲುಬೆಯ ಮೇಲೆ ತೂಗುತ್ತಿರುವ ಯೇಸುವಿನ ಪ್ರತಿಮೆಗಳು ಕಥೋಲಿಕರಲ್ಲಿ ಮಾತ್ರ ಕಂಡುಬರುತ್ತವೆ.ಇದಕ್ಕೆ ಪೂರಕವಾಗಿ "It is chiefly in this way that catholics have adopted the use or crosses, medals posaries (beads) and other insignia of confrantnities or brotherhoods and often carry than about themselves". (H.V. Nanjundaiah & L.K. Ananthakrishna Iyar 1969:27 ಅವರ ಮಾತುಗಳನ್ನು ಉಲ್ಲೇಖಿಸಬಹುದು.

ಚರ್ಚಿನಲ್ಲಿ ಪ್ರಥಮ ಸ್ಥಾನ ಶಿಲುಬೆಗೆ ಮೀಸಲು ಚರ್ಚಿನ ಇಕ್ಕೆಲಗಳಲ್ಲಿ ಅನೇಕ ಸಂತರ ಪ್ರತಿಮೆಗಳನ್ನು ಇಟ್ಟಿರುತ್ತಾರೆ. ಹಾಗೂ ಆ ಚರ್ಚು ಯಾವ ಸಂತರಿಗೆ

ಅರ್ಪಿತವಾಗಿದೆಯೋ ಆ ಪ್ರತಿಮೆಯನ್ನು ಪೂಜಾ ಪೀಠದ ಮೇಲ್ಭಾಗದಲ್ಲಿ ಪ್ರತಿಷ್ಠಾಪಿಸಿರುತ್ತಾರೆ ಉದಾಹರಣೆಗೆ ಸಂತ ಫಿಲೋಮಿನ ಪ್ರಧಾನ ದೇವಾಲಯದಲ್ಲಿ ಸಂತ ಫಿಲೋಮಿನ ಅವರ ಪ್ರತಿಮೆಯನ್ನು ಪೀಠದ ಮೇಲ್ಭಾಗದಲ್ಲಿ ಇಟ್ಟಿರುವುದನ್ನು ಕಾಣಬಹುದಾಗಿದೆ.

ತಪಸ್ಸು ಕಾಲದಲ್ಲಿ (Lenten season) ಶಿಲುಬೆಯ ಹಾದಿ ಎಂಬ ವಿಶೇಷ ಜಪವನ್ನು ಮಾಡುತ್ತಾರೆ. ಇದು ಕ್ರಿಸ್ತನ ಶಿಲುಬೆ ಮರಣದ ಬಗೆಗೆ ಚಿಂತನ ಮಾಡುವ ಒಂದು ಬಗೆಯ ಧ್ಯಾನ. ಯೇಸು ಕ್ರಿಸ್ತನು ಪಟ್ಟ ಪಾಡುಗಳನ್ನೂ, ಮರಣವನ್ನೂ ಕುರಿತು ಹದಿನಾಲ್ಕು ಸ್ಥಳಗಳಲ್ಲಿ ಶಿಲುಬೆ ಹೊತ್ತ ಕ್ರಿಸ್ತನ ಪಾಡುಗಳ ಭಾವಚಿತ್ರವನ್ನು ತೂಗುಹಾಕಿರುತ್ತಾರೆ. ಒಂದೊಂದು ಸ್ಥಳದಲ್ಲಿಯೂ ಪ್ರಾರ್ಥನೆ, ಧ್ಯಾನ ನಿರಂತರ ನಡೆಯುತ್ತದೆ.

ಕಥೋಲಿಕರಲ್ಲಿ ‘ ಪಾಪನಿವೇದನೆ ’ ಎಂಬ ಸಂಸ್ಕಾರವಿದೆ. ಕ್ರೈಸ್ತರು ವಾರಕ್ಕೊಮ್ಮೆ, ಸಾಮಾನ್ಯವಾಗಿ ಶನಿವಾರದಂದು ಗುರುಗಳ ಬಳಿ ಪಾಪನಿವೇದನೆ ಮಾಡುತ್ತಾರೆ. ಏಕೆಂದರೆ ಭಾನುವಾರದ ಪೂಜೆ ಕಡ್ಡಾಯ. ಪರಮಪ್ರಸಾದವನ್ನು ಸ್ವೀಕರಿಸುವ ಮುನ್ನ ಪಾಪನಿವೇದನೆ ಮಾಡಿ ಮನಶುದ್ಧಿಯಾಗಬೇಕು. ಇದು ಕಥೋಲಿಕರಲ್ಲಿ ಮಾತ್ರ ರೂಢಿಯಲ್ಲಿದೆ. ಪಾಪಗಳನ್ನು ಕ್ಷಮಿಸುವ ಹಕ್ಕು ಗುರುಗಳಿಗಿದೆ. ಯೇಸುವಿನ ಹಾಗೂ ಆತನ ಅನುಯಾಯಿಗಳ ಮಧ್ಯವರ್ತಿಗಳಾಗಿ ಗುರುಗಳು ಕಥೋಲಿಕರ ಪಾಪಗಳನ್ನು ಕ್ಷಮಿಸುತ್ತಾರೆ. ಆದರೆ ಮಾಡಿದ ತಪ್ಪಿಗೆ ಪ್ರಾಯಶ್ಚಿತ ಹಾಗೆಯೇ ಉಳಿಯುತ್ತದೆ. ತಪ್ಪು ಎಸಗಿದವನು ಕ್ಷಮಿಸಲ್ಪಟ್ಟರೂ ಪ್ರಾಯಶ್ಚಿತ್ತ ಮಾಡಲೇಬೇಕು.

ಪೂಜಾವಿಧಿ ಯೇಸುಕ್ರಿಸ್ತನ ಅಂತಿಮ ಭೋಜನ, ಮರಣ ಮತ್ತು ಪುನರುತ್ಥಾನದ ಸ್ಮರಣಾರ್ಥವಾಗಿ ನಡೆಸುವ ವಿಧಿಯಾಗಿದೆ. ಇದನ್ನು "The Holy sacrifice of the Mass". ಎನ್ನುತ್ತಾರೆ. ತನ್ನ ಶರೀರ ಹಾಗೂ ರಕ್ತವನ್ನು ಸಮರ್ಪಿಸಿ ಮಾನವನನ್ನು ರಕ್ಷಣೆ ಮಾಡಿದ ಕಾರಣ ಇದನ್ನು Holy sacrifice ಎಂದು ಕರೆಯಲಾಗಿದೆ.

ಪ್ರತಿದಿನ ಗುರುಗಳು ಪೂಜೆಯನ್ನು ನಿರ್ವಹಿಸಲೇಬೇಕೆಂಬ ನಿಯಮವಿದೆ. ಪೂಜಾವಿಧಿಯಲ್ಲಿ ಪ್ರಸಾದ ವಿನಿಯೋಗವಿರುತ್ತದೆ. ಪೂಜಾವಿಧಿಯನ್ನು ಅರ್ಪಿಸುವಾಗ ಗುರು ಸಾಮಾನ್ಯ ವ್ಯಕ್ತಿಯಾಗಿರುವುದಿಲ್ಲ, ಆ ಸ್ಥಾನದಲ್ಲಿ ಯೇಸುಕ್ರಿಸ್ತನೇ ಇರುವನೆಂಬ ನಂಬಿಕೆ ಕ್ರೈಸ್ತರಿಗಿರುತ್ತದೆ. ಆದ್ದರಿಂದಲೇ ಕಥೋಲಿಕ ಕ್ರೈಸ್ತರಲ್ಲಿ ಗುರುವಿಗೆ ಪ್ರಮುಖ ಸ್ಥಾನವಿದೆ. ಜೀವನದಲ್ಲಿ ಯಾವುದೇ ಸಂಸ್ಕಾರವು ನೆರವೇರಬೇಕಾದಲ್ಲಿ ಗುರುವಿನ ಅಗತ್ಯವಿದ್ದೇ ಇರುತ್ತದೆ. ಧರ್ಮಸಭೆಯ ಚಟುವಟಿಕೆಗಳನ್ನು ನಡೆಸಿಕೊಡುವಾತ ಗುರು ಎಂಬ ಮನೋಭಾವವು ಎಲ್ಲಾ ಕಥೋಲಿಕರಲ್ಲಿಯೂ ಇದೆ. ಇವರಿಗೆ ಧರ್ಮಸಭೆ ಪ್ರತ್ಯಕ್ಷ ಸಾಕ್ಷಿ ಎಂಬುದನ್ನು ಕೆಳಗಿನ ಸಾಲುಗಳು ಸಾಬೀತು ಪಡಿಸುತ್ತವೆ:

> ಗುರುಸ್ವಾಮಿ ಬತ್ತಾರೆಂದು ಗುಡಿಗೆ ಸುಣ್ಣ ಊದೆ,
> ಗುರುಸ್ವಾಮಿಯಿಂದ ತಿರುಸಭೆ ಬತ್ತಾರೆಂದು
> ಗುಡಿಗೆ ಚಿತ್ತಾರ ಬರೆದೀನಿ ॥ (ತಲ್ವಾಡಿ; 1983:59)

ಕ್ರಿಸ್ತನ ಬೆಳಕಿನಲ್ಲಿ ಸತ್ಯದ ಮಾರ್ಗದರ್ಶನ ಮಾಡಿ ಕ್ರಿಸ್ತನ ಮುಖೇನ ದೇವರ ಬಳಿಗೆ ಕೊಂಡೊಯ್ಯುವ ಮಹತ್ತರ ಉದ್ದೇಶ ಧರ್ಮಸಭೆಯದು. ಧರ್ಮಸಭೆಯು ತನ್ನ ಕಾರ್ಯಗಳನ್ನು ಸುಗಮವಾಗಿ ನಡೆಸಬೇಕಾದರೆ ಇದಕ್ಕೊಂದು ನಿಯಮದ ಅಗತ್ಯವಿತ್ತು. ಅದಕ್ಕಾಗಿ ಧರ್ಮಸಭೆಯ ವಿದ್ವಾಂಸರೂ ಮುಖಂಡರೂ ಸೇರಿ ಅದು ಪ್ರಮುಖ ಕಟ್ಟಳೆಗಳನ್ನು

ರಚಿಸಿದರು. ದೇವರ ಹತ್ತು ಕಟ್ಟಳೆಗಳಷ್ಟೇ (Ten commandments) ಪ್ರಾಮುಖ್ಯತೆಯನ್ನು ಕಥೋಲಿಕ ಧರ್ಮಸಭೆಯಲ್ಲಿ ಇದಕ್ಕೆ ಕೊಡಲಾಗಿದೆ. ಅವುಗಳು ಇಂತಿವೆ.

1. ಆದಿತ್ಯವಾರಗಳಲ್ಲಿಯೂ ಕಟ್ಟಳೆಯ ಹಬ್ಬಗಳಲ್ಲಿಯೂ ಪೂರ್ಣ ಬಲಿಪೂಜೆಯಲ್ಲಿ ಪಾಲ್ಗೊಳ್ಳುವುದು.
2. ವರ್ಷಕ್ಕೊಮ್ಮೆಯಾದರೂ ಪಾಪನಿವೇದನೆ ಮಾಡುವುದು.
3. ಪಾಸ್ಖಕಾಲದಲ್ಲಿ (Lenten season) ಪರಮ ಪ್ರಸಾದ ಸ್ವೀಕರಿಸುವುದು.
4. ಉಪವಾಸ ಮತ್ತು ಮಾಂಸನಿರೋಧನೆಯ ದಿನಗಳನ್ನು ಆಚರಿಸುವುದು.
5. ವಿಘ್ನವಿರುವಾಗ ಮದುವೆಯಾಗದಿರುವುದು.
6. ಧರ್ಮಸಭೆಗೆ ತಮ್ಮ ಕೈಲಾದಷ್ಟು ಸಹಾಯ ಮಾಡುವುದು.

ಈ ಆರು ಕಟ್ಟಳೆಗಳನ್ನು ಪಾಲಿಸದಿದ್ದಲ್ಲಿ ನರಕಕ್ಕೆ ಹೋಗುವುದು ನಿಶ್ಚಯ ಎಂಬ ನಂಬಿಕೆಯಿದೆ. ಅದನ್ನು ಜನಪದ ಕವಿ ಹೀಗೆ ಹಾಡಿದ್ದಾನೆ.

ಆರು ಕಲ್ಪನೆಗಿಂತ ಬೇರೆ ಕಲ್ಪನೆ ಇಲ್ಲ
ಬೇರೆ ಕಲ್ಪನೆ ಅರಿಯದ ಅಜ್ಞಾನಿಯ
ಎತ್ತಿ ಹಾಕವರೆ ನರಕಕ್ಕೆ॥

ಭಾರತೀಯ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿರುವ ಕರ್ನಾಟಕದ ಕ್ರೈಸ್ತರು 'ಪರಧರ್ಮ'ವನ್ನು ತಮ್ಮದಾಗಿಸಿಕೊಂಡರು. ಅದನ್ನು ನಿಷ್ಠೆಯಿಂದ ಪಾಲಿಸುತ್ತಿದ್ದರೂ, ಪರಂಪರಾಗತವಾಗಿ ನಡೆದುಕೊಂಡು ಬಂದಿರುವ ಸಂಪ್ರದಾಯ ಪದ್ಧತಿಗಳನ್ನು ಕೈಬಿಟ್ಟಿಲ್ಲ. ಮದುವೆಯ ಸಮಯದಲ್ಲಿ ಹಸಿರು ಚಪ್ಪರ, ಮಾವಿನತೋರಣ, ಬಾಳೆಕಂಬ, ಮುಹೂರ್ತಕಂಬ, ಮಂಗಳಸ್ನಾನ, ಧಾರೆಎರೆಯುವುದು, ಕನ್ಯಾದಾನ ಮಾಡುವುದು, ಎಲ್ಲವೂ ಹಿಂದೂ ಸಂಪ್ರದಾಯದಂತೆಯೇ ಜರುಗುತ್ತದೆ. ಅರಿಶಿನ ಕುಂಕುಮದ ಬಳಕೆ ಇದೆ. ಮಂಗಳಸೂತ್ರವಿದೆ. ತಾಳಿಗೆ ಪೋಣಿಸುವ ಗುಂಡು ಕರಿಮಣಿಗಳಿವೆ. ಬಾಸಿಂಗ, ಕಂಕಣ, ಕಾಲುಂಗುರ, ಧರಿಸುವ ಪದ್ಧತಿ. ಅಕ್ಷತೆ, ಆರತಿ, ಹಸೆಬರೆಯುವ ಪದ್ಧತಿಗಳಿವೆ. ಸೋಬಾನ, ಬೀಗರೂಟ, ಹೆಣ್ಣು ಕಳುಹಿಸುವುದು ಮನೆ ತುಂಬಿಸಿಕೊಳ್ಳುವುದು, ಬಸಿರೊಸಗೆ ಇವೆಲ್ಲವೂ ಕ್ರಮಬದ್ಧವಾಗಿ ನಡೆಯುತ್ತದೆ. ಕರ್ನಾಟಕ ಕ್ರೈಸ್ತರಲ್ಲಿ ಕಥೋಲಿಕ ಪಂಗಡದಲ್ಲಿ ಮಾತ್ರ ಈ ಸಂಪ್ರದಾಯಗಳು ಉಳಿದುಕೊಂಡಿರುವುದು ಕಂಡು ಬರುತ್ತದೆ.

**2.2.1.2 ಪ್ರೊಟೆಸ್ಟಂಟರು** ಸಾಮಾನ್ಯವಾಗಿ ಇತರ ಧರ್ಮಗಳಲ್ಲಿ ಕಾಣುವ ಕವಲುಗಳು ಕ್ರೈಸ್ತಮತದಲ್ಲಿ ಕಂಡು ಬಂದಿದೆ. ಇಸ್ಲಾಮರಲ್ಲಿ ಷಿಯಾ ಮತ್ತು ಸುನ್ನಿ, ಬೌದ್ಧರಲ್ಲಿ ಮಾಹಾಯಾನ – ಹೀನಾಯಾನ, ಜೈನರಲ್ಲಿ ದಿಗಂಬರ – ಶ್ವೇತಾಂಬರ, ಹಿಂದುಗಳಲ್ಲಿ ವೈದಿಕ ಮತ್ತು ಅವೈದಿಕ, ವೈದಿಕರಲ್ಲಿಯೂ ವಿಷ್ಣುಭಕ್ತರು ಮತ್ತು ಶಿವಭಕ್ತರು– ಹೀಗೆ ಸಂಪ್ರದಾಯ ಮತ್ತು ಪ್ರತಿಭಟನೆಯಿಂದ ಜಗತ್ತಿನಲ್ಲಿ ಹಲವಾರು ಪಂಥಗಳು ತಲೆಎತ್ತಿದವು ಎಂಬುದು ಇಂದು ಇತಿಹಾಸವಾಗಿದೆ.

ಮೊದಲೇ ಪ್ರಸ್ತಾಪಿಸಿರುವಂತೆ ಜಗದ್ಗುರುವಿನ ಏಕಸ್ವಾಮ್ಯತೆಯನ್ನು ಪ್ರಶ್ನಿಸಿ, ಕ್ರೈಸ್ತರಲ್ಲಿ ಪ್ರೊಟೆಸ್ಟೆಂಟ್ ಪಂಥವನ್ನು ಹುಟ್ಟು ಹಾಕಿದವನು ಮಾರ್ಟಿನ್ ಲೂಥರ್, ಈತನ ಅನುಯಾಯಿಗಳೇ ಪ್ರೊಟೆಸ್ಟೆಂಟರಾದರು. ಕ್ರಿಸ್ತನನ್ನು ತಮ್ಮ ಆರಾಧ್ಯ ದೈವವನ್ನಾಗಿ ಸ್ವೀಕರಿಸಿದರೂ, ಮೂಲಭೂತವಾಗಿ ಕೆಲವು ತತ್ವಗಳನ್ನು ಒಪ್ಪಿಕೊಳ್ಳದ ಇವರು ತಮ್ಮೊಳಗೇ ಭಿನ್ನವಾಗಿ, ಬೇರೆ ಬೇರೆ ಸಂಘಗಳನ್ನು ಕಟ್ಟಿಕೊಂಡರು. ಅವುಗಳಲ್ಲಿ ಕರ್ನಾಟಕದಲ್ಲಿ ಪ್ರಮುಖಪಾತ್ರ ವಹಿಸಿದ ಮೂರು ಪಂಗಡಗಳನ್ನು ಇಲ್ಲಿ ಸಮಾಲೋಚನೆಗೆ ಎತ್ತಿಕೊಳ್ಳಲಾಗಿದೆ.

ಅವುಗಳು ಯಾವುವೆಂದರೆ ಸೆವೆಂತ್ ಡೇ ಅಡ್ವೆಂಟಿಸ್(SDA), ಬಾಸೆಲ್ ಮಿಶನ್, ಕ್ರಿಶ್ಚನ್ಸ್ ಆಫ್ ಸೌತ್ ಇಂಡಿಯಾ(CSI).

ಹೀಗೆ ಕ್ರೈಸ್ತರಲ್ಲಿನ ಪ್ರಧಾನವಾದ ಎರಡು ಪಂಗಡಗಳು ತಮ್ಮದೇ ಆದ ಸಂಘಗಳನ್ನು ಕಟ್ಟಿಕೊಂಡು, ರೀತಿ ನಿಯಮಗಳನ್ನು ರಚಿಸಿಕೊಂಡು ಅವುಗಳ ಸೀಮಿತ ವೃತ್ತದಲ್ಲಿಯೇ ಕರ್ನಾಟಕದಲ್ಲಿ ಧರ್ಮಪ್ರಚಾರ ಮಾಡತೊಡಗಿದವು. ಈ ಎರಡು ಪ್ರಧಾನ ಪಂಗಡಗಳ ನಡುವೆ ಸಾದೃಶ್ಯ – ವೈದೃಶ್ಯಗಳು ಸಾಕಷ್ಟಿವೆ.

ಕಥೋಲಿಕರು ಏಳು ದಿವ್ಯ ಸಂಸ್ಕಾರಗಳ ಜೊತೆಗೇ ಸಂಪ್ರದಾಯಗಳನ್ನೂ ಉಳಿಸಿಕೊಂಡಿದ್ದಾರೆ. ಆದರೆ ಪ್ರೊಟೆಸ್ಟೆಂಟರಲ್ಲಿ ಏಳು ಸಂಸ್ಕಾರಗಳಿಗೆ ಪ್ರಾಶಸ್ತ್ಯವಿಲ್ಲ. ದೀಕ್ಷಾಸ್ನಾನ ಹಾಗೂ ಪರಮಪ್ರಸಾದ ಇವೆರಡನ್ನು ಹೊರತು ಉಳಿದೆಲ್ಲಾ ಸಂಸ್ಕಾರಗಳೂ ಮಾನವ ನಿರೂಪಿತ, ಬೈಬಲ್ ಗ್ರಂಥವನ್ನು ಮಾತ್ರ ಆಧಾರವಾಗಿಟ್ಟುಕೊಂಡು ಉಳಿದೆಲ್ಲಾ ಸಂಪ್ರದಾಯಗಳೂ, ಆಚರಣೆಗಳೂ ಅಸಂಬದ್ಧ, ಅನಾದರ್ಶ, ಅಸಂಸ್ಕೃತವೆಂದು ಮಾರ್ಟಿನ್ ಲೂಥರ್ ಸ್ಪಷ್ಟಪಡಿಸಿದ್ದಾನೆ. ಯಾಜಕರು ಬ್ರಹ್ಮಚಾರಿಗಳಾಗಿರಬೇಕಾಗಿಲ್ಲ; ಸ್ವಯಿಚ್ಛೆಯಿಂದ ಮದುವೆ ಮಾಡಿಕೊಳ್ಳಬಹುದು. ಯಾರೂ ಯಾವುದೇ ಕಾರಣಕ್ಕೂ ಪೋಪ್ ಜಗದ್ಗುರುವಿನ ಆಜ್ಞೆಯನ್ನು ಪಾಲಿಸಕೂಡದು. ವಿಗ್ರಹಾರಾಧನೆ ಕ್ರೈಸ್ತರಿಕೆ ಸಲ್ಲದು ಎಂದು ಘಂಟಾಘೋಷವಾಗಿ ಸಾರಿದನು. ಕಥೋಲಿಕರು ಮೇರಿ ಮಾತೆಯನ್ನು ಸಂತರರಾಣಿ, ದೇವರಮಾತೆ, ತಮ್ಮೆಲ್ಲರ ತಾಯಿ ಎಂದು ಸ್ವೀಕರಿಸುತ್ತಾರೆ. ತಾಯಿಯ ಮೂಲಕ ವರದಾನಗಳನ್ನು ಪಡೆಯುವುದು ಸುಲಭ ಎಂದು ಮನೋಭಾವ ಹೊಂದಿರುವರು. ಅದನ್ನು ವಿರೋಧಿಸುತ್ತಾ ಪ್ರಾಟೆಸ್ಟೆಂಟರು ಎಂದು "That we have no creativity that the saints in heaven hear our prayers on earth, that Catholics makes the blessed virgin and the saints very great which belongs to God above" ಎಂದು ಸ್ಪಷ್ಟಪಡಿಸಿದ್ದಾರೆ.

ಕಥೋಲಿಕರು ಮಾತೆಯ ಹಾಗೂ ಇತರ ಸಂತರ ಪ್ರತಿಮೆಗಳನ್ನು ಪ್ರತಿಷ್ಠಾಪಿಸಿ ಅದಕ್ಕೆ ಗೌರವ ಪ್ರಾರ್ಥನೆಗಳನ್ನು ಸಲ್ಲಿಸುತ್ತಾರೆ. ಪ್ರೊಟೆಸ್ಟೆಂಟರು ಅವುಗಳನ್ನು ವಿಗ್ರಹಾರಾಧನೆ ಎಂದು ಖಂಡಿಸುತ್ತಾರೆ. ದೇವರು ಎಲ್ಲರ ತಂದೆ; ಕ್ರಿಸ್ತನ ಸಂದೇಶದ ಅನುಸಾರ ವರದಾನಗಳನ್ನು ಪಡೆಯಬಹುದು, ಮಧ್ಯವರ್ತಿಗಳ ಅಗತ್ಯವಿಲ್ಲ, ಏಕೆಂದರೆ ಅವರೂ ತಮ್ಮಂತೆಯೇ ಸಾಮಾನ್ಯ ಮಾನವರು ಎಂಬುದು ಪ್ರೊಟೆಸ್ಟೆಂಟರ ಅಭಿಪ್ರಾಯ ಅಷ್ಟೇ ಅಲ್ಲ, ಪ್ರೊಟೆಸ್ಟೆಂಟರು ಕೂಡ ಕಥೋಲಿಕರಂತೆಯೇ ಮಗು ಹುಟ್ಟಿದ ಮೂರು ತಿಂಗಳಿಗೆ ದೀಕ್ಷಾಸ್ನಾನ ಮಾಡಿಸುತ್ತಾರೆ. ಆದರೆ ಕ್ರಮದಲ್ಲಿ ವ್ಯತ್ಯಾಸವಿರುತ್ತದೆ. ದೀಕ್ಷಾಸ್ನಾನ ನೀಡುವಾಗ ಪವಿತ್ರ ಎಣ್ಣೆ, ಮೇಣದಬತ್ತಿಗಳನ್ನು ಸಾಂಕೇತಿಕವಾಗಿ ಬಳಸುವುದಿಲ್ಲ, ತಲೆಯ ಮೇಲೆ ಸ್ವಲ್ಪ ನೀರನ್ನು ಚಿಮುಕಿಸುವುದು ಮಾತ್ರ ರೂಢಿಯಲ್ಲುಂಟು.

ಪರಮಪ್ರಸಾದ ಮತ್ತು ದೃಢೀಕರಣ ಸಂಸ್ಕಾರಗಳನ್ನು ವ್ಯಕ್ತಿಗೆ ಹದಿನೆಂಟು ವರ್ಷ ತುಂಬಿದ ಮೇಲೆಯೇ ಮಾಡಿಸುವುದು ವಿಶೇಷ. ಅದಕ್ಕೆ ಕಾರಣವನ್ನು ನೀಡುತ್ತ 'ಪರಮಪ್ರಸಾದದ ಪಾವಿತ್ರ್ಯತೆಯು ಅರ್ಥಪೂರ್ಣವಾದುದು. ಚಿಕ್ಕಮಕ್ಕಳಿಗೆ ಅದರ ಪಾವಿತ್ರ್ಯತೆಯು ತಿಳಿಯುವುದಿಲ್ಲ, ದುರುಪಯೋಗವಾಗಬಹುದು, ಇದರಿಂದ ಪ್ರಾಪ್ತ ವಯಸ್ಸಿಗೆ ಬಂದ ಮೇಲೆ ಈ ಸಂಸ್ಕಾರಗಳನ್ನು ಕೊಡುತ್ತಾರೆ ಎಂದು ಹೇಳುತ್ತಾರೆ.

ಪಾಪನಿವೇದನೆ ಪ್ರೊಟೆಸ್ಟೆಂಟರಲ್ಲಿ ಇಲ್ಲ. ಕಥೋಲಿಕರು ತಾವು ಮಾಡಿದ ತಪ್ಪುಗಳನ್ನು ಗುರುಗಳ ಬಳಿ ನಿವೇದಿಸುತ್ತಾರೆ. ಪಾಪ ಕ್ಷಮೆಯನ್ನು ಪಡೆದು ತೃಪ್ತರಾಗುತ್ತಾರೆ. ಆದರೆ ಪ್ರೊಟೆಸ್ಟೆಂಟರು ತಮ್ಮೆಲ್ಲಾ ತಪ್ಪುಗಳನ್ನು ದೇವರೊಬ್ಬರ ಬಳಿ ಮಾತ್ರ ನಿವೇದಿಸುವುದು (Fr. Vassal 1916:400) ಎನ್ನುತ್ತಾರೆ. ಕಥೋಲಿಕರಿಗೆ ಇದೊಂದು

ಕಾರ್ಯಾಚರಣೆ, ಪ್ರೊಟೆಸ್ಟೆಂಟರಿಗೆ ಇದು ವಿಶ್ವಾಸ ಮಾತ್ರವಾಗಿದೆ. "As such it was opposed to the Lutharan doctrine of Justification not by the work, but by the faith" (Fr. Vassal 1916:400)ಎಲ್ಲರೂ ಕ್ಷಮಾರ್ಹರು. ಇದಕ್ಕೆ ಯಾಜಕರ ಮಧ್ಯಸ್ಥಿಕೆ ಬೇಕಾಗಿಲ್ಲ. ದೇವರು ಎಲ್ಲರನ್ನೂ ಕ್ಷಮಿಸುತ್ತಾನೆ ಎಂಬ ಭರವಸೆಯನ್ನು ಪ್ರೊಟೆಸ್ಟೆಂಟರು ಪ್ರಕಟಿಸುತ್ತಾರೆ.

ಕಥೋಲಿಕರಲ್ಲಿ ಪೂಜಾವಿಧಿಗಳು ನಿಯಮಬದ್ಧವಾಗಿ ನಡೆಯುತ್ತವೆ. ಪ್ರೊಟೆಸ್ಟೆಂಟರಲ್ಲಿ ಪೂಜಾವಿಧಿಗಳಿರುವುದಿಲ್ಲ. ಬೈಬಲ್ ವಾಚನಕ್ಕೆ, ಗಾಯನಗಳಿಗೆ ಪ್ರಾಶಸ್ತ್ಯವಿರುತ್ತದೆ. ಪ್ರತಿ ಭಾನುವಾರ ಅವರ ಚರ್ಚುಗಳಲ್ಲಿ ಪ್ರೊಟೆಸ್ಟೆಂಟರೆಲ್ಲಾ ಒಟ್ಟುಗೂಡಿ ಪ್ರಾರ್ಥನಾಕೂಟಗಳನ್ನು ನಡೆಸುತ್ತಾರೆ. ಹದಿನೆಂಟು ವರ್ಷ ವಯಸ್ಸು ಮೇಲ್ಪಟ್ಟವರಿಗೆ ಮಾತ್ರ ಪ್ರಸಾದ ವಿನಿಯೋಗವಿರುತ್ತದೆ. ಪ್ರಸಾದಕ್ಕೆ ಕಥೋಲಿಕರಂತೆಯೇ, ಗೋಧಿಯ ಹಾಲಿನಿಂದ ರೊಟ್ಟಿಯನ್ನು ತಯಾರಿಸಲಾಗುತ್ತದೆ. ರೊಟ್ಟಿಯೊಂದಿಗೆ ಸಣ್ಣ ಸಣ್ಣ ಪಾನಪಾತ್ರೆಗಳಲ್ಲಿ ದ್ರಾಕ್ಷಾರಸವನ್ನೂ ಇಟ್ಟಿರುತ್ತಾರೆ. ಪ್ರಾರ್ಥನಾಕೂಟದ ಮುಕ್ತಾಯದಲ್ಲಿ ಅದನ್ನು ಸ್ವೀಕರಿಸುತ್ತಾರೆ. ಆದರೆ ಕ್ರೈಸ್ತರು ಪೂಜಾವೇಳೆಯಲ್ಲಯೇ ಪ್ರಸಾದ ನೀಡುತ್ತಾರೆ. ಕಥೋಲಿಕರು ಪ್ರಸಾದವನ್ನು ಕೈಯಲ್ಲಿ ಮುಟ್ಟುವಂತಿಲ್ಲ. ಸಾಲಾಗಿ ಬಂದು ಯಾಜಕರ ಮುಂದೆನಿಂತು ನಾಲಿಗೆ ಚಾಚುತ್ತಾರೆ. ಯಾಜಕರು ನಾಲಿಗೆಯ ಮೇಲೆ ಪ್ರಸಾದವನ್ನು ಇಡುತ್ತಾರೆ, ವಿಶೇಷ ಸಂದರ್ಭಗಳಲ್ಲಿ ಮಾತ್ರ ಪ್ರಸಾದವನ್ನು ದ್ರಾಕ್ಷಾರಸದಲ್ಲಿ ಅದ್ದಿ ನೀಡಲಾಗುತ್ತದೆ.

ಪ್ರೊಟೆಸ್ಟೆಂಟರು ಯಾಜಕರನ್ನು 'ಪಾಸ್ಟರ್' ಎಂದು ಕರೆಯುತ್ತಾರೆ. ಪಾಸ್ಟರ್‌ಗಳು ವಿವಾಹಿತರಾಗಿರಬಹುದು. ಎಲ್ಲವನ್ನೂ ತೊರೆದು ಬಂದ ಸನ್ಯಾಸಿಗಳಲ್ಲ. ತಮ್ಮದೇ ಆದ ಕುಟುಂಬ, ಆಸ್ತಿಯನ್ನು ಹೊಂದಿರಬಹುದು. ಚರ್ಚಿನೊಳಗಿನ ಚಟುವಟಿಕೆಗಳಲ್ಲಿ ಮಾತ್ರ ಪಾಸ್ಟರ್ ಯಾಜಕರ ಉಡುಪನ್ನು ಧರಿಸುತ್ತಾರೆ. ಬೇರೆ ಸಮಯದಲ್ಲಿ ಇತರರಂತೆಯೇ ಉಡುಗೆ-ತೊಡುಗೆಗಳನ್ನು ಧರಿಸುತ್ತಾರೆ. ಇವರ ಪ್ರಮುಖವಾದ ಕರ್ತವ್ಯ "ಸುಸಂದೇಶ (Bible) ಸಾರುವುದು". ಕಥೋಲಿಕರಂತೆ ಪ್ರತಿದಿನ ಪೂಜಾವಿಧಿಗಳನ್ನು ಅರ್ಪಿಸಲೇಬೇಕಂಬ ನಿಯಮವಿಲ್ಲ. ವಾರಕ್ಕೊಮ್ಮೆ, ಭಾನುವಾರಗಳಲ್ಲಿ ಮಾತ್ರ ಚರ್ಚಿನಲ್ಲಿ ಪೂಜಾ ಕಾರ್ಯಕ್ರಮವಿರುತ್ತದೆ. ಸಾಯುವ ಸ್ಥಿತಿಯಲ್ಲಿರುವವರನ್ನು ಸಂಧಿಸಿ ಪ್ರಸಾದ ಕೊಡುತ್ತಾರೆ. ಸತ್ತಮೇಲೆ ನೆಂಟರಿಷ್ಟರೆಲ್ಲರೂ ಸಮಾಧಿಯಲ್ಲಿ ಒಂದುಗೂಡಿ ಪಾಸ್ಟರ್ ಸಮ್ಮುಖದಲ್ಲಿ ಬೈಬಲ್ ಗ್ರಂಥವಾಚನ ಮಾಡಿ ಗಾಯನಗಳೊಂದಿಗೆ ಅಂತ್ಯಕ್ರಿಯೆ ಮುಗಿಸುತ್ತಾರೆ. ಮೂರನೇ ದಿನದ ವಿಧಿಗಳು ಇವರಲ್ಲಿ ರೂಢಿಯಲ್ಲಿಲ್ಲ. ಹನ್ನೊಂದನೆಯ ದಿನ ಮತ್ತು ನಲವತ್ತನೆಯ ದಿನದಂದು ಪ್ರಾರ್ಥನಾಕೂಟವನ್ನು ಏರ್ಪಡಿಸುತ್ತಾರೆ.

ಕ್ರಿಸ್ಮಸ್, ಈಸ್ಟರ್ ಹಬ್ಬಗಳನ್ನು ಮಾತ್ರ ಇವರು ಆಚರಿಸುತ್ತಾರೆ. ದೇವಮಾತೆ ಅಥವಾ ಇತರ ಯಾವುದೇ ಸಂತರ ಹಬ್ಬಗಳನ್ನೂ ಆಚರಿಸುವುದಿಲ್ಲ. ಪ್ರೊಟೆಸ್ಟೆಂಟರಿಗೆ ಧರ್ಮಸಭೆ ಇಲ್ಲ, ಜಗದ್ಗುರುಗಳೂ ಇಲ್ಲ. ಬೈಬಲ್ ಪರಿಪಾಲನೆ ಮಾಡುವುದರ ಹೊರತು ಮತ್ತಾವ ಕಟ್ಟುಕಟ್ಟಳೆಗಳೂ ಇರುವುದಿಲ್ಲ. ಹೀಗೆ ಕ್ರೈಸ್ತರಲ್ಲಿರುವ ಪ್ರಧಾನವಾದ ಎರಡು ಪಂಗಡಗಳ ಆಚಾರ-ವಿಚಾರಗಳು ಭಿನ್ನವಾಗಿದ್ದು, ಜನಪದ ಸಂಸ್ಕೃತಿಯ ಮೇಲೆ ಪ್ರಭಾವವನ್ನು ಬೀರಿವೆ. ಕಥೋಲಿಕ ಮತ್ತು ಪ್ರೊಟೆಸ್ಟೆಂಟ್ ಪಂಗಡಗಳ ನಡುವಿನ ಭಿನ್ನತೆಗಳನ್ನು ಈ ರೀತಿಯಾಗಿ ಪಟ್ಟಿಮಾಡಬಹುದು.

| ಕಥೋಲಿಕರು | ಪ್ರೊಟೆಸ್ಟೆಂಟರು |
| --- | --- |
| 1. ದೀಕ್ಷಾಸ್ನಾನದಲ್ಲಿ ಜ್ಞಾನ ತಂದೆ–ತಾಯಿಗಳ (God parents) ಪಾತ್ರ ಮಹತ್ತರವಾದುದು. | 1. ಜ್ಞಾನ ತಂದೆ–ತಾಯಿಗಳು ಇರುವುದಿಲ್ಲ. |
| 2. ದೀಕ್ಷಾಸ್ನಾನ ನೀಡುವಾಗ ಮಗುವಿನ ಹಣೆಗೆ, ಎದೆಗೆ ಪವಿತ್ರ ಎಣ್ಣೆ ಹಚ್ಚಿ, ಬಾಯಿಯಲ್ಲಿ ಉಪ್ಪು ಇಟ್ಟು, ಬಿಳಿಯ ವಸ್ತ್ರವನ್ನು ಮಗುವಿನ ಮೇಲೆ ಹೊದಿಸಿ, ತಂದೆ–ತಾಯಿ ಮೇಣದ ಬತ್ತಿಯನ್ನು ಹತ್ತಿಸಿ ಹಿಡಿದುಕೊಂಡಿರುತ್ತಾರೆ. | 2. ಮಗುವಿನ ಅಥವಾ ದೀಕ್ಷಾಸ್ನಾನ ಪಡೆಯುತ್ತಿರುವವರ ತಲೆಯ ಮೇಲೆ ನೀರು ಹಾಕುತ್ತಾರೆ. ಗಾಯನ ಕಾರ್ಯಕ್ರಮಗಳಿರುತ್ತವೆ. |
| 3. ಪರಮಪ್ರಸಾದ ಮತ್ತು ದೃಢೀಕರಣವನ್ನು ಹತ್ತು ವರ್ಷ ವಯಸ್ಸಾದ ಕೂಡಲೇ ಕೊಡಲಾಗುತ್ತದೆ. | 3. ಈ ಎರಡು ಸಂಸ್ಕಾರಗಳನ್ನು ಹದಿನೆಂಟು ವರ್ಷ ತುಂಬಿದ ಮೇಲೆಯೇ ಕೊಡಲಾಗುತ್ತದೆ. |
| 4. ಧೂಪಾರತಿಗಳಿವೆ. | 4. ಧೂಪಾರತಿಗಳಿಲ್ಲ. |
| 5. ಯೇಸುಕ್ರಿಸ್ತನ ತಾಯಿ ಮರಿಯಮ್ಮನವರಿಗೆ ಮಹತ್ವಪೂರ್ಣವಾದ ಸ್ಥಾನವಿದೆ. ಪ್ರತ್ಯೇಕ ಸಭಾಕೂಟಗಳು, ಮೆರವಣಿಗೆ ಉತ್ಸವ, ಜಪಸರ ಪ್ರಾರ್ಥನೆ ಇತ್ಯಾದಿಗಳು ಮಾತೆಯ ಮೇಲಿನ ಭಕ್ತಿಯ ಪ್ರಕಟಣೆಗಳಾಗಿವೆ. | 5. ಯೇಸುವಿನ ತಾಯಿ ಎಂಬ ಗೌರವವಿದೆ. ಈಕೆಗೆ ಪ್ರತ್ಯೇಕ ಪ್ರಾರ್ಥನೆ, ಜಪಸರ ಇತ್ಯಾದಿಗಳು ಇಲ್ಲ. |
| 6. ಸ್ತ್ರೀಯರ ಹಣೆಗೆ ಕುಂಕುಮದ ಬೊಟ್ಟು ಹಚ್ಚುತ್ತಾರೆ. | 6. ಸ್ತ್ರೀಯರು ಬರೀ ಹಣೆಯಲ್ಲಿಯೇ ಇರುತ್ತಾರೆ. |
| 7. ಪ್ರತಿಮೆ (Statue) ಗಳ ಬಳಕೆ ಇದೆ. | 7. ಪ್ರತಿಮೆಗಳು ನಿಷಿದ್ಧ. |
| 8. ಹರಕೆಗಳು ರೂಢಿಯಲ್ಲಿವೆ | 8. ಹರಕೆ ಹೊರುವ ಪದ್ಧತಿ ಇಲ್ಲ. |
| 9. ಕೆಲವರಲ್ಲಿ ಮಾತ್ರ ಮದುವೆಯಲ್ಲಿ ತಾಳಿ ಕಟ್ಟುವ ಸಮಯದಲ್ಲಿ ಬಿಳಿಸೀರೆ ಉಡಿಸುವ ಪದ್ಧತಿ ಇದೆ. | 9. ಮಾಂಗಲ್ಯ ಧಾರಣೆಯ ಸಂದರ್ಭದಲ್ಲಿ ಬಿಳಿಸೀರೆ ಕಡ್ಡಾಯ. |
| 10. ಪ್ರತಿದಿನ ಚರ್ಚ್ ಬಾಗಿಲು ತೆರೆದು ಪೂಜೆ ಸಲ್ಲಿಸುವುದು ಗುರುಗಳ ಆದ್ಯ ಕರ್ತವ್ಯ. | 10. ವಾರಕ್ಕೊಮ್ಮೆ ಮಾತ್ರ ಭಾನುವಾರಗಳಲ್ಲಿ ಪ್ರಾರ್ಥನಾಕೂಟವಿರುತ್ತದೆ. |
| 11. ಪ್ರತಿದಿನ ಪೂಜಾವೇಳೆಯಲ್ಲಿ ಪ್ರಸಾದ ವಿನಿಯೋಗವಿರುತ್ತದೆ. | 11. ತಿಂಗಳಿಗೊಮ್ಮೆ ಮಾತ್ರ ಪ್ರಸಾದ, ದ್ರಾಕ್ಷಾರಸದ ವಿತರಣೆ ಇರುತ್ತದೆ. |
| 12. ಗುರುಗಳ ಬಳಿ ಪಾಪನಿವೇದನೆ ಕಡ್ಡಾಯ. | 12. ಗುರುಗಳ ಬಳಿ ಪಾಪನಿವೇದನೆಯ ಅಗತ್ಯವಿಲ್ಲ. |
| 13. ಗುರು ಯೇಸುಕ್ರಿಸ್ತನ ಸ್ಥಾನದಲ್ಲಿರುವನು. | 13. ಗುರು ಸಾಮಾನ್ಯ ವ್ಯಕ್ತಿಯಾಗಿಯೇ ಇರುವನು. |
| 14. ಗುರುಗಳು ಬ್ರಹ್ಮಚರ್ಯ ವ್ರತವನ್ನು ಕೊನೆಯವರೆಗೆ ಪಾಲಿಸುವರು. | 14. ಗುರು ಸಂಸಾರಿಯಾಗಿರುವನು. |
| 15. ಗುರುಮಠಗಳು, ಕನ್ಯಾಸ್ತ್ರೀ ಸನ್ಯಾಸಿನೀ ಮಠಗಳು ಸಾವಿರಾರು ಸಂಖ್ಯೆಯಲ್ಲಿರುವವು. | 15. ಗುರುಮಠಗಳಿಲ್ಲ. ಸ್ತ್ರೀಯರಿಗೆ ಸನ್ಯಾಸಿನಿಯಾಗುವ ಅವಕಾಶವೇ ಇಲ್ಲ. |
| 16. ತಪಸ್ಸು ಕಾಲದಲ್ಲಿ (Lent season) 'ಶಿಲುಬೆಯ ಹಾದಿ' ಎಂಬ ಧ್ಯಾನ ಪದ್ಧತಿ ರೂಢಿಯಲ್ಲಿದೆ. | 16. ಶಿಲುಬೆಯ ಹಾದಿ ಇರುವುದಿಲ್ಲ. |
| 17. ಸಂತರಿಗೆ ಮಹತ್ವದ ಸ್ಥಾನವಿದೆ. ಸಂತರ ಹಬ್ಬಗಳನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ. | 17. ಸಂತರು ಸಾಮಾನ್ಯ ವ್ಯಕ್ತಿಗಳು, ಗೌರವವಿದೆ. ಸಂತರ ಹಬ್ಬ ಆಚರಣೆಗಳು ಇರುವುದಿಲ್ಲ. |
| 18. ಚರ್ಚುಗಳಿಗೆ ಸಂತರ ಹೆಸರಿಡುವ ಪದ್ಧತಿಯಿದೆ. | 18. ಚರ್ಚುಗಳಿಗೆ ಸಂತರ ಹೆಸರು ಇಡುವ ಕ್ರಮವಿಲ್ಲ. |

ಕ್ರೈಸ್ತರಲ್ಲಿ ಕಥೋಲಿಕ ಹಾಗೂ ಪ್ರೊಟೆಸ್ಟೆಂಟ್ ಪಂಗಡಗಳಲ್ಲಿ ಕೇವಲ ಭಿನ್ನತೆಗಳು ಮಾತ್ರವಿಲ್ಲ; ಕೆಲವು ಹೋಲಿಕೆಗಳನ್ನೂ ಕಾಣಬಹುದು. ಈ ಎರಡೂ ಪಂಗಡಗಳಲ್ಲಿ ಮದುವೆಯಲ್ಲಿ ತಾಳಿ ಅಥವಾ ಉಂಗುರ ತೊಡಿಸುವರು. ಆಹಾರ, ಉಡುಗೆ-ತೊಡುಗೆಗಳಲ್ಲಿ (ಕುಂಕುಮದ ಬಳಕೆಯನ್ನು ಹೊರತುಪಡಿಸಿ) ಯಾವ ವ್ಯತ್ಯಾಸವೂ ಕಂಡು ಬರುವುದಿಲ್ಲ. ವಿಧವಾ ಸ್ತ್ರೀಯರು ಹೂ, ಬಳೆ, ತಾಳಿಯನ್ನು ವಿಸರ್ಜಿಸುವ ಪದ್ಧತಿ ಎರಡೂ ಪಂಗಡಗಳಲ್ಲಿ ಇದೆ. ವಿವಾಹ ವಿಚ್ಛೇದನ ಎರಡೂ ಪಂಗಡಗಳಲ್ಲಿಯೂ ಇರುವುದಿಲ್ಲ. ಪರಮ ಪ್ರಸಾದದಲ್ಲಿ ದೇವರಿದ್ದಾನೆಂಬ ನಂಬಿಕೆಯಿದೆ. ದೀಕ್ಷಾಸ್ನಾನ ಹೊಂದದವನಿಗೆ ಮೋಕ್ಷವಿಲ್ಲ, ಸ್ವರ್ಗ ನರಕದ ಅಸ್ತಿತ್ವದ ಬಗ್ಗೆ ನಂಬಿಕೆಯಿದೆ. ಎರಡೂ ಪಂಗಡಗಳಲ್ಲಿಯೂ ಸಾಮೂಹಿಕ ಪ್ರಾರ್ಥನೆಗೆ ಪ್ರಾಮುಖ್ಯತೆ ಇದೆ, ಹಾಡುಗಳ ಮೂಲಕ ದೇವರನ್ನು ಸ್ತುತಿಸುತ್ತಾರೆ.

ಹೀಗೆ ಕ್ರೈಸ್ತಧರ್ಮ ಒಂದೇ ಆದರೂ ಒಳಪಂಗಡಗಳಲ್ಲಿರುವ ಪದ್ಧತಿಗಳಲ್ಲಿ ವ್ಯತ್ಯಾಸಗಳೇ ಹೆಚ್ಚು ಕಂಡುಬರುತ್ತವೆ. ಕಥೋಲಿಕರು ಹಾಗೂ ಪ್ರೊಟೆಸ್ಟೆಂಟರಲ್ಲಿ ಕೊಳು-ಕೊಡುಗೆಗಳಿಲ್ಲ. ಹಾಗೆ ಮದುವೆ ಮಾಡಿಕೊಳ್ಳಬೇಕಾದ ಸಂದರ್ಭವಿದ್ದಲ್ಲಿ ಕಥೋಲಿಕನಾದರೆ ಪ್ರೊಟೆಸ್ಟೆಂಟರ ಚರ್ಚಿನಲ್ಲಿ, ಪ್ರೊಟೆಸ್ಟೆಂಟನಾದರೆ ಕಥೋಲಿಕರ ಚರ್ಚಿನಲ್ಲಿ ಮತ್ತೊಮ್ಮೆ ದೀಕ್ಷಾಸ್ನಾನ ಪಡೆಯಬೇಕಾಗುತ್ತದೆ. ದೀಕ್ಷಾಸ್ನಾನ ಪಡೆದ ಮೇಲೆ ಅವರ ಚರ್ಚಿಗೇ ಹೋಗುವುದು, ಅದೇ ಪದ್ಧತಿಗಳನ್ನು ಆಚರಿಸುವುದು ಅನಿವಾರ್ಯವಾಗುತ್ತದೆ.

ಕ್ರೈಸ್ತರ ಸಂಪ್ರದಾಯಗಳ ವೈಶಿಷ್ಟ್ಯವನ್ನು ಮನಗಾಣಲು ಈ ಒಳಪಂಗಡಗಳ ಅರಿವು ಇರುವುದು ಯುಕ್ತವೆಂದು ಭಾವಿಸಿ ಸಾಕಷ್ಟು ವಿಸ್ತಾರವಾಗಿಯೇ ಇಲ್ಲಿ ಒಳಪಂಗಡಗಳ ಬಗೆಗೆ ಪ್ರಸ್ತಾಪಿಸಲಾಗಿದೆ.

**2.3 ಇತರೆ ಧರ್ಮೀಯರು** ಕರ್ನಾಟಕದ ಬುಡಕಟ್ಟು ಕ್ರೈಸ್ತರು ತಮ್ಮ ಬದುಕಿನ ಅನುಭವಗಳನ್ನು ತಮ್ಮ ಪೂರ್ವಜರ ಸಂಸ್ಕೃತಿ-ಪರಂಪರೆಯ ಪರಿಧಿಯೊಳಗಿದ್ದುಕೊಂಡು ಕ್ರೈಸ್ತಧರ್ಮದ ಪ್ರಬಲ ನಂಬಿಕೆಯ ಹಿನ್ನೆಲೆಯಲ್ಲಿ ಸರಳವಾದ ರೀತಿಯಲ್ಲಿ ಬದುಕಿ ಬಂದವರು. ತಮ್ಮ ನೆರೆಹೊರೆಯ ಇತರ ಮತಧರ್ಮಗಳ ಜನರ ಜೊತೆ ಬೆರೆತು ಮಿಳಿತವಾಗಿದ್ದರೂ ತಮ್ಮ ಧರ್ಮದ ಮೂಲಭೂತ ನಂಬಿಕೆಗಳನ್ನು ಸದಾ ಜಾಗ್ರತರಾಗಿ ಉಳಿಸಿಕೊಂಡಿದ್ದಾರೆ.

ಪ್ರಸ್ತುತ ಅಧ್ಯಯದ ಪ್ರಾರಂಭದಲ್ಲಿ ಕಥೋಲಿಕ ಕ್ರೈಸ್ತರನ್ನು ಭಾಷಿಕ ವರ್ಗವಾಗಿ ಗುರುತಿಸಲಾಗಿತ್ತು. ಆದರೆ ಕ್ರೈಸ್ತ ಸಿದ್ದಿಗಳು ಹೊರಗಿನಿಂದ ಬಂದು ನೆಲೆಸಿದವರು. ಇವರ ವಂಶದ ಬಳ್ಳಿಗಳು ಮೂಲತಃ ಸ್ಥಳೀಯವೇ ಆಗಿವೆ. ಕ್ರೈಸ್ತಧರ್ಮದ ಪ್ರಚಾರ ಪ್ರಭಾವಕ್ಕೊಳಪಟ್ಟು ಇವರು ಕ್ರೈಸ್ತರಾದವರು. ಇವರ ರಕ್ತ ಸಂಬಂಧಿಗಳು ಮತಾಂತರ ಪೂರ್ವದ ಧರ್ಮದವರೇ ಆಗಿರುವುದು ಇಂದಿಗೂ ಕಂಡು ಬರುತ್ತದೆ.

ಬುಡಕಟ್ಟುಕ್ರೈಸ್ತರು ಇತರ ಧರ್ಮೀಯರೊಡನೆ ಹೊಂದಿರುವ ಸಂಬಂಧಕ್ಕಿಂತ ಸಿದ್ದಿ ಕ್ರೈಸ್ತರು ಹೊಂದಿರುವ ಸಂಬಂಧ ಭಿನ್ನವಾಗಿದೆ. ಸಿದ್ದಿಕ್ರೈಸ್ತರು ಬಹುತೇಕ ಎಲ್ಲಾ ಆಚರಣೆಗಳನ್ನೂ ಹಿಂದೂ ಧರ್ಮ ಬಂಧುಗಳೊಡನೆ ಸೇರಿಯೇ ಮಾಡುತ್ತಾರೆ. ಊಟೋಪಚಾರ ಉಡುಗೆ-ತೊಡುಗೆಗಳಲ್ಲಿ ಕಿಂಚಿತ್ತೂ ಭೇದವಿಲ್ಲದೆ ಸಾಮ್ಯತೆಯನ್ನೇ ಕಾಣುತ್ತೇವೆ. ಆದರೆ ಆಚರಣೆಗಳು ಕ್ರೈಸ್ತಧರ್ಮಕ್ಕೆ ಅನುಸಾರವಾಗಿರುತ್ತವೆ. ಇವರು ಹೊರಗಿನಿಂದ ಬಂದವರಲ್ಲದ ಕಾರಣ ಇವರಲ್ಲಿ ವಿಭಿನ್ನ ಸಂಸ್ಕೃತಿಯನ್ನು ಗುರುತಿಸಲಾಗುವುದಿಲ್ಲ.

ಮಾನವ ಆದಿಯಿಂದಲೂ ಸಮಾಜಜೀವಿ. " ಸಮಾಜದಲ್ಲಿ ಸಂಪ್ರದಾಯ, ಪರಂಪರೆ, ರೂಢಿ, ನಡೆವಳಿ, ಧರ್ಮ, ನೀತಿ ಮುಂತಾದವು ಜನರ ಅವಿಭಾಜ್ಯ ಅಂಗಗಳಾಗಿ ಬೆಳೆದು ನಿಲ್ಲುತ್ತವೆ. ಇದರ ಮೂಲಕವೇ ಗುಂಪಿನಲ್ಲಿ ಒಗ್ಗಟ್ಟನ್ನೂ ಅಭ್ಯುದಯಾಕಾಂಕ್ಷೆಯನ್ನೂ ಆಳವಾಗಿ ಮೂಡಿಸುತ್ತದೆ " (ಪೈ; 1978:112) ಒಂದು ಸಮಾಜಕ್ಕೆ ಸೇರಿದ ಜನರಲ್ಲಿ ನಮ್ಮವರು, ನಮ್ಮ ಜನ ಎಂಬ ಭಾವನೆ ಇರುತ್ತದೆ. ನೆರೆಹೊರೆಯವರು ತಮ್ಮ ಜಾತಿ ಅಥವಾ ವಂಶಕ್ಕೆ ಸೇರಿರಲಿ, ಸೇರದಿರಲಿ ತಮಗೆ ಬೇಕಾದ ಅಲ್ಪಸ್ವಲ್ಪ ಸಹಾಯವನ್ನು ಅವರಲ್ಲಿಯೇ ಪಡೆದುಕೊಳ್ಳುವರು. ಸಾವು-ನೋವುಗಳಾದಾಗ, ಕಾಯ್ದೆ-ಕಟ್ಟಳೆಗಳಿದ್ದಾಗ ಅದು ತಮ್ಮ ಕರ್ತವ್ಯವೆಂದೇ ಭಾವಿಸಿ ನೆರೆಹೊರೆಯವರ ಸಹಾಯಕ್ಕೆ ಧಾವಿಸುತ್ತಾರೆ.

ಕರ್ನಾಟಕದ ಕ್ರೈಸ್ತರೂ ಇತರ ಧರ್ಮೀಯರೊಡನೆ ಇಂತಹ ಸಂಬಂಧವನ್ನೇ ಹೊಂದಿದ್ದಾರೆ. ಪ್ರಧಾನವಾಗಿ ಹೆಚ್ಚಿನ ಸಂಖ್ಯೆಯಲ್ಲಿರುವ ಹಿಂದೂಗಳೊಡನೆಯೂ, ತಮ್ಮಂತೆಯೇ ಅಲ್ಪ ಸಂಖ್ಯಾತರಾಗಿರುವ ಮುಸ್ಲಿಮರೊಡನೆಯೂ ಕ್ರೈಸ್ತರ ಸಂಬಂಧ ಹೇಗೆ ಸ್ಥಾಪಿತವಾಗಿದೆ ಎಂಬುದನ್ನು ಮುಂದೆ ಪ್ರಸ್ತಾಪಿಸಲಾಗಿದೆ.

**2.3.1 ಹಿಂದೂಗಳೊಡನೆ ಕ್ರೈಸ್ತರ ಸಂಬಂಧ** ಕರ್ನಾಟಕದಲ್ಲಿ ನೆಲಸಿರುವ ಕ್ರೈಸ್ತರಲ್ಲಿ ಹೆಚ್ಚಿನವರು ಮತಾಂತರ ಪೂರ್ವದಲ್ಲಿ ಹಿಂದೂ ಗಳಾಗಿದ್ದವರೇ. ಇಂದಿಗೂ ಕ್ರೈಸ್ತರ ಮನೆಗಳಲ್ಲಿ ಮದುವೆ ಮುಂತಾದ ವಿಶೇಷ ದಿನಗಳಲ್ಲಿ ಹಿಂದೂ ಮುತ್ತೈದೆ ಸ್ತ್ರೀಯರು ತಮ್ಮ ಸೌಭಾಗ್ಯವೆಂಬಂತೆ ಮೊರೆ ಹಿಡಿದು 'ಅಕ್ಕಿ ಮಾಡುವರ' ಕೆಲಸದಲ್ಲಿ ತೊಡಗುತ್ತಾರೆ. ಹಪ್ಪಳ, ಶ್ಯಾವಿಗೆ ಒತ್ತುವ ಕೆಲಸಕ್ಕೂ ಕೈ ಹಾಕಿ, ಮನೆಯವರ ಕೆಲಸವನ್ನು ಹಗುರ ಮಾಡುತ್ತಾರೆ. ಮಂಗಳಸ್ನಾನ ಮಾಡಿಸುವಾಗಲೂ ಕ್ರೈಸ್ತರು ತಮ್ಮೂರಿನ ಎಲ್ಲಾ ಮುತ್ತೈದೆ ಸ್ತ್ರೀಯರನ್ನು ಆಹ್ವಾನಿಸುತ್ತಾರೆ. ಚಪ್ಪರಕ್ಕೆ ಗರಿ ಹೆಣೆಯುವುದು, ಚಪ್ಪರ ಹಾಕುವುದು ಇತ್ಯಾದಿ ಕೆಲಸಗಳನ್ನು ಊರಿನ ಯುವಕರೆಲ್ಲ ಸೇರಿ ಮಾಡುತ್ತಾರೆ. ಮದುವೆಯ ಮನರಂಜನಾ ಕಾರ್ಯಕ್ರಮಗಳಲ್ಲಿ ಸಕ್ರಿಯ ಪಾತ್ರ ವಹಿಸುತ್ತಾರೆ.

ಕ್ರೈಸ್ತ ಹೆಣ್ಣುಮಗಳು ಮೈನೆರೆದಾಗ, ಹಿಂದೂಸಂಬಂಧಿಗಳು ಕೊಬ್ಬರಿ, ಬೆಲ್ಲ ತಂದು ಕೊಡುವುದನ್ನು ಮರೆಯುವುದಿಲ್ಲ. ನೀರು ಹಾಕುವ ಶಾಸ್ತ್ರಕ್ಕೂ ಹಾಜರಿದ್ದು ಆ ಕಾರ್ಯವನ್ನು ನಡೆಸಿಕೊಡುತ್ತಾರೆ. ಬರೀ ಸಂಭ್ರಮದ ಕಾರ್ಯಗಳಲ್ಲಿ ಮಾತ್ರವಲ್ಲ ಸಾವು-ನೋವುಗಳಲ್ಲೂ ಬೆರೆಯುತ್ತಾರೆ. ಕ್ರೈಸ್ತರ ಮನೆಗಳಲ್ಲಿ ಸಾವು ಸಂಭವಿಸಿದಾಗ ಶವವನ್ನು ರಾತ್ರಿಯಿಡೀ ಮನೆಯಲ್ಲಿಡಬೇಕಾದ ಸಂದರ್ಭವಿದ್ದಲ್ಲಿ ಹಿಂದೂ ಯುವಕರು ಭಜನೆ ಕಾರ್ಯಕ್ರಮವನ್ನು ಏರ್ಪಡಿಸುತ್ತಾರೆ. ಇದರಿಂದ ಮನೆಮಂದಿಯೆಲ್ಲಾ ಎಚ್ಚರವಾಗಿರಲು ಸಹಾಯಕವಾಗುತ್ತದೆ. ಈ ಭಜನೆಯಲ್ಲಿ ಕ್ರೈಸ್ತರಿಗೆ ಸಂಬಂಧಿಸಿದ ಹಾಡುಗಳನ್ನೇ ಹಾಡಬೇಕೆಂದಿಲ್ಲ. ಹಿಂದೂ ಸಂಪ್ರದಾಯದ ಹಾಡುಗಳನ್ನೂ ಹಾಡುವುದುಂಟು. ಸಾವಿನ ಮನೆಯವರಿಗೆ ಹಾಗೂ ಸಂದರ್ಶಕರಿಗೆ ಇತರರು ಕಾಫಿ ಸರಬರಾಜು ಮಾಡುತ್ತಾರೆ. ಇಂತಹ ಸಂದರ್ಭಗಳಲ್ಲಿ ಖರ್ಚು-ವೆಚ್ಚವನ್ನು ಯಾರೂ ಚಿಂತಿಸುವುದಿಲ್ಲ.

ಕಾಡುಗಳಲ್ಲಿ ನೆಲಸಿರುವ ಬುಡಕಟ್ಟು ಕ್ರೈಸ್ತರಲ್ಲಿ ಪಂಚಾಯಿತಿ ವ್ಯವಸ್ಥೆ ರೂಢಿಯಲ್ಲಿರುತ್ತದೆ. ಕ್ರೈಸ್ತರೇ ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುವ ಕಡೆಗಳಲ್ಲಿ ಅವರೇ ಪಂಚಾಯಿತಿಯ ಮುಖ್ಯಸ್ಥರಾಗಿ ಆಯ್ಕೆಯಾಗುವುದು ಅನಿವಾರ್ಯ. ಕೆಲವು ಕಡೆಗಳಲ್ಲಿ ಪಂಚಾಯಿತಿ ಮುಖ್ಯಸ್ಥನ ಸ್ಥಾನ ವಂಶಪಾರಂಪರ್ಯವಾಗಿಯೂ ಬಂದಿರುತ್ತದೆ. ಇಂಥ ಕಡೆಗಳಲ್ಲಿ ಇತರ ಧರ್ಮೀಯರೂ ಅದೇ ಪಂಚಾಯಿತಿಗೆ ಒಳಪಡುತ್ತಾರೆ.

ಕ್ರೈಸ್ತ ನಂಬಿಕೆಗೆ ಧಕ್ಕೆ ಬರದಂತೆ ಇತರ ಎಲ್ಲ ಕಾರ್ಯಗಳನ್ನೂ ತಮ್ಮ ಹಿಂದೂ ಬಂಧುಗಳಂತೆಯೇ ನಿರ್ವಹಿಸುತ್ತಾರೆ. ಇದು ಕೆಳಸ್ತರದ ಕ್ರೈಸ್ತರ ಮನಸ್ಸಿನ ಮೇಲೆ ಯಾವ ದುಷ್ಪರಿಣಾಮವನ್ನೂ ಬೀರುವುದಿಲ್ಲ. ಅದು ಪೂರ್ವಜರಿಂದಲೂ ನಡೆದು ಬಂದಿರುವ ಸಂಪ್ರದಾಯವಾಗಿರುವುದರಿಂದ ಯಾರೂ ಅದನ್ನು ಪ್ರಶ್ನಿಸುವುದಿಲ್ಲ.

ತಮ್ಮ ಗುಂಪು ಅಥವಾ ವಂಶದವರೇ ಆಗಿದ್ದರೂ ಕ್ರೈಸ್ತರು ತಮ್ಮ ಹಿಂದೂ ಬಂಧುಗಳೊಡನೆ ವೈವಾಹಿಕ ಸಂಬಂಧ ಬೆಳೆಸುವಂತಿಲ್ಲ. ಇದನ್ನು ಬಹಳ ಕಟ್ಟುನಿಟ್ಟಿನಿಂದ ಕಾಪಾಡಿಕೊಂಡು ಬಂದಿದ್ದಾರೆ. ಹಾಗೇನಾದರೂ ಹುಡುಗ-ಹುಡುಗಿ ಪ್ರೀತಿಸಿ ಮದುವೆ ಆಗುವುದಿದ್ದರೆ, ಅನ್ಯಜಾತಿಯವರು ಕ್ರೈಸ್ತಧರ್ಮವನ್ನು ಸ್ವೀಕಾರ ಮಾಡಿದ ಬಳಿಕ, ಅಂದರೆ ದೀಕ್ಷಾಸ್ನಾನದ ಮೂಲಕ ಮತಾಂತರ ಹೊಂದಿದ ಮೇಲೆಯೇ ಮದುವೆಗೆ ಅವಕಾಶವಿದೆ. ಇತ್ತೀಚೆಗೆ ಮದುವೆಯ ವಿಷಯದಲ್ಲಿ ಧರ್ಮಸಭೆ (Church) ಕೆಲವು ಬದಲಾವಣೆಗಳನ್ನು ತಂದು ನಿಯಮಗಳನ್ನು ಸ್ವಲ್ಪ ಸಡಿಲಿಸಿದೆ. ಆದರೂ ಹಳ್ಳಿಗಳಲ್ಲಿ ಹಿಂದಿನಂತೆಯೇ ಇಂದಿಗೂ ಈ ನಿಯಮಗಳನ್ನು ಪಾಲಿಸಿಕೊಂಡು ಬರುತ್ತಿದ್ದಾರೆ.

ಕರ್ನಾಟಕದ ಜನತೆಯ ಮೇಲೆ ಕ್ರೈಸ್ತರ ಪ್ರಭಾವ ಆಳವಾಗಿ ಆಗಿದೆಯಾದರೂ ಕ್ರೈಸ್ತರ ಮತ್ತು ಕ್ರೈಸ್ತೇತರರ ನಡುವಿನ ಸಂಪರ್ಕ ಸಾಧ್ಯತೆಗಳು ಇತಿಮಿತಿಯಿಂದ ಕೂಡಿದ್ದವು. ಕ್ರೈಸ್ತಧರ್ಮವನ್ನು ಸ್ವೀಕರಿಸಿದ್ದರೂ ಹಿಂದೂ ಜೀವನ ಕ್ರಮಗಳ ಒತ್ತಡಕ್ಕೆ ಸಿಕ್ಕಿ ಅದರಿಂದ ಪ್ರಭಾವಿತರಾಗದವರೂ ಇದ್ದರು. ಕ್ರೈಸ್ತಧರ್ಮವನ್ನು ಸ್ವೀಕರಿಸದೆ ಉಳಿದು, ಅದಕ್ಕೆ ಪ್ರಭಾವಿತರಾಗದವರು ಮತಾಂತರಗೊಂಡ ಕ್ರೈಸ್ತರ ಮೇಲೂ ಕ್ರೈಸ್ತ ಯೋಧಕರ ಮೇಲೂ ರೋಷಗೊಂಡು ಕೆರಳಿಬಿದ್ದರು. ಬೋಅಂತಪ್ಪನವರು ತಮ್ಮ ಕಿರುಹೊತ್ತಗೆಗಳಲ್ಲಿ ಈ ವಿಷಯವನ್ನು ವಿಶದವಾಗಿ ಬರೆದಿರುವರು. ಈ ವಿಷಯ ಬುಡಕಟ್ಟು ಕ್ರೈಸ್ತರಿಗೆ ಸಂಬಂಧಪಡದಿದ್ದರೂ ನಿದರ್ಶನಕ್ಕಾಗಿ ಇಲ್ಲಿ ಪ್ರಸ್ತಾಪಿಸಿದ್ದೇನೆ.

ಆನೆಕಲ್ಲಿನ ಹತ್ತಿರದ ಕೆಂಪಟ್ಟಿ (ಕೆಂಗಟ್ಟಿ) ಎಂಬಲ್ಲಿ ದಾಸರದೇ ಮೇಲುಗೈಯಾಗಿದ್ದು. ನೆರೆಯ ಮೈಸೂರು ಮಿಷನ್ನಿಗೆ ಸೇರಿದ ಸ್ವಾಮಿ ಮಾನುವೆಲ್ ಡಿಕುನ್ನ (MANUEL DECUNNA SJ) ಅವರಿಗೂ ದಾಸರುಗಳಿಗೂ "ದೇವರು ಆತ್ಮಸ್ವರೂಪಿ, ಆತನಿಗೆ ಶರೀರವಿಲ್ಲ ಹಾಗೂ ವಿಧವೆಯರು ಮರುಮದುವೆಯಾಗುವಿಕೆ"ಎಂಬ ವಿಷಯಗಳನ್ನು ಕುರಿತು ದೀರ್ಘ ಚರ್ಚೆ ನಡೆದಿತ್ತು. ದಿನಾಂಕ: 14/05/1711 ರಂದು ಕ್ರೈಸ್ತರಿಗೆ ಯೇಸುಸ್ವಾಮಿ ಸ್ವರ್ಗಾರೋಹಣವಾದ ಹಬ್ಬದ (ASCENSION) ದಿನವಾಗಿತ್ತು. ದೆಕೂನ ಅವರು ಕೆಂಬಟ್ಟಿಯಲ್ಲಿ ಕಟ್ಟಿಸಿದ್ದ ಹೊಸ ದೇವಾಲಯದಲ್ಲಿ ಮೊತ್ತಮೊದಲ ಬಾರಿಗೆ ಪೂಜೆಯನ್ನು ಮುಗಿಸುತ್ತಿದ್ದಂತೆ ಸುಮಾರು ನಲವತ್ತು ಮಂದಿ ದಾಸರು ಅವರನ್ನು ತಡೆದು ದೊಣ್ಣೆಗಳಿಂದ ಹೊಡೆದರು. ಇದರ ಪರಿಣಾಮವಾಗಿ ಸ್ವಾಮಿ ದೆಕೂನ ಅವರು ಕಪ್ಪಿನಗಟ್ಟಿ (CAPINAGATI) ಎಂಬ ಊರಲ್ಲಿ ದಿನಾಂಕ: 01/09/1711 ರಂದು ಹುತಾತ್ಮರಾಗಿ ಪ್ರಾಣಬಿಟ್ಟಿದ್ದರು (ಅಂತಪ್ಪ 1990:25).

ಹೀಗೆ ಒಂದು ಕಾಲದಲ್ಲಿ ಮುಸಲ್ಮಾನರಿಂದ ಮಾತ್ರವಲ್ಲ. ಹಿಂದೂಗಳಿಂದಲೂ ಹಿಂಸೆಗಳನ್ನು ಅನುಭವಿಸಿ ಕ್ರೈಸ್ತರು ಕರ್ನಾಟಕದಲ್ಲಿ ನೆಲೆಯೂರಿದ್ದಾರೆ, ಎಂಬುದು ಸ್ಪಷ್ಟ. ಇದರ ನಡುವೆ ಹಿಂದೂಗಳ ಔದಾರ್ಯವೂ ಗುರುತಿಸುವಂಥದೇ ಆಗಿದೆ.

ಮಂಗಳೂರಿನ ಬಂಟರೊಬ್ಬರು ನೆರೆಮನೆಯ ಕ್ರೈಸ್ತ ಬಾಲಕನಿಗೆ ಕಿವಿಗೆ ಚಿನ್ನದ ಮೇಟಿಹಾಕಿ ತಮ್ಮ ಮಗನೆಂದು ಸುಳ್ಳು ಹೇಳಿ ಆತನನ್ನು ತಮ್ಮಲ್ಲೇ ಇರಿಸಿಕೊಂಡು, ಆತನ

ಸಂಬಂಧಿಕರು ಸೆರೆವಾಸದಿಂದ ಬಿಡುಗಡೆಯಾಗಿ ಬಂದಮೇಲೆ ಆ ಬಾಲಕನನ್ನು ಅವರ ಮನೆಗೆ ಕಳುಹಿಸಿಕೊಟ್ಟರು. ಆ ಒಂದು ಮನೆತನದ ಹೆಸರು ಇಂದಿಗೂ ಶೆಟ್ಟಿ ಎಂದೇ ಮುಂದುವರೆದಿದೆ (ತಲ್ವಾಡಿ 1989:92)

ಕ್ರೈಸ್ತಧರ್ಮ ಮತ್ತು ಲಿಂಗಾಯಿತ ಪಂಥಗಳ ನಡುವೆ ಇರುವ ಹೋಲಿಕೆಗಳನ್ನು ಉತ್ತಂಗಿಯವರ ಪುಸ್ತಕದಲ್ಲಿ ಗುರುತಿಸಬಹುದು. " ಮೊದಲು ನಡೆ, ಅನಂತರ ನುಡಿ, ಕ್ರಿಯೆಯೇ ಜ್ಞಾನ; ಜ್ಞಾನವೇ ಕ್ರಿಯೆ ಎಂಬುದು ವೀರಶೈವ ಧರ್ಮತತ್ವ. ಕ್ರಿಸ್ತನಲ್ಲಿಯ ಪ್ರೀತಿಗಳನ್ನು ಕ್ರಿಯೆಯಲ್ಲಿ ತೋರ್ಪಡಿಸುವುದೇ ಕ್ರೈಸ್ತಧರ್ಮ ತತ್ವ ಈ ಬಗೆಯ ಕ್ರಿಯಾಜ್ಞಾನಗಳ ಸುಂದರ ಸಮ್ಮಿಲನವೇ ಎರಡೂ ಧರ್ಮಗಳ ಜೀವಾಳವೆಂಬುದು ಉತ್ತಂಗಿಯವರ ಸಿದ್ಧಾಂತ (ಗುಂಜಾಳ 1982:238). ಈ ಕಾರಣದಿಂದಲೋ ಅಥವಾ ಎರಡೂ ಧರ್ಮಗಳು ಇತರ ಧರ್ಮೀಯರನ್ನು ತಮ್ಮ ಮತಕ್ಕೆ ಮತಾಂತರಗೊಳ್ಳಲು ಮುಕ್ತ ಅವಕಾಶ ನೀಡುವ ಕಾರಣದಿಂದಲೋ ಚರ್ಚು ಇರುವ ಕಡೆಗಳಲ್ಲಿ ಈಶ್ವರ ದೇವಾಲಯವನ್ನೂ ಕಾಣಬಹುದಾಗಿದೆ. ಚಾಮರಾಜನಗರದ ನಾಗವಳ್ಳಿ ಎಂಬ ಗ್ರಾಮದಲ್ಲಿ ಕ್ರೈಸ್ತರೂ ಮತ್ತು ಲಿಂಗಾಯಿತರೂ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಲಿಂಗಾಯಿತರ ಬೀದಿಗಳಲ್ಲಿ ಕ್ರೈಸ್ತರ ಮನೆಗಳೂ ಇವೆ. ಅಲ್ಲಿ ಸ್ವಲ್ಪ ಎತ್ತರವಾದ ಗುಡ್ಡದ ಮೇಲೆ ಬಿಳಿ ಕಲ್ಲಿನಿಂದಾದ ದೊಡ್ಡ ಲಿಂಗವೊಂದಿದೆ. ಆ ಲಿಂಗ ಒಂದು ಕಾಲಕ್ಕೆ ಪೂಜೆಗೊಳ್ಳುತ್ತಿದ್ದಿರಬಹುದು. ಆದರೆ ಈಗ ಅಲ್ಲಿ ಯಾರೂ ಪೂಜೆ ಮಾಡುತ್ತಿಲ್ಲವಾದ ಕಾರಣ ಪಾಳುಬಿದ್ದಿದೆ. ಆ ಲಿಂಗದ ಮುಂಭಾಗದ ಬಯಲಿನಲ್ಲಿ ಭವ್ಯವಾದ ಚರ್ಚು ಮತ್ತು ಶಾಲೆಗಳು ನಿರ್ಮಿತವಾಗಿವೆ. ಬಹುಶಃ ಕ್ರೈಸ್ತರ ಸಂಖ್ಯೆ ಬೆಳೆಯುತ್ತಿದ್ದಂತೆ ಈ ಕಟ್ಟಡಗಳು ಎದ್ದಿರಬಹುದಾಗಿದೆ. 1944ರಲ್ಲಿ ಫಾ॥ ಸಿಕ್ವೇರಾ ಅವರು ಈ ದೇವಾಲಯವನ್ನು ನಿರ್ಮಿಸಿದರೆಂದು ತಿಳಿದುಬರುತ್ತದೆ.

**2.3.2 ಮುಸ್ಲಿಂರರೊಂದಿಗೆ ಸಂಬಂಧ** ಕ್ರೈಸ್ತರು ಹಿಂದೂ ಧರ್ಮೀಯರೊಡನೆ ಬೆರೆಯುವಷ್ಟು ಸಹಜ ಮತ್ತು ಸರಾಗವಾಗಿ ಮುಸ್ಲಿಮರೊಡನೆ ಬೆರೆಯುವುದಿಲ್ಲ. ಇಷ್ಟಕ್ಕೂ ಕ್ರೈಸ್ತ-ಮುಸಲ್ಮಾನರ ಮತಾಚರಣೆಗಳಲ್ಲಿ ಅನೇಕ ಸಾದೃಶ್ಯಗಳು ಕಂಡುಬರುತ್ತವೆ. ಎರಡೂ ಸಮುದಾಯ ಒಂದೊಂದು ದಿನವನ್ನು ನಿಗದಿಪಡಿಸಿ, ಅಂದು ಸಾಮೂಹಿಕ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ. ಮುಸಲ್ಮಾನರು ಶುಕ್ರವಾರವನ್ನು ಪವಿತ್ರದಿನವೆಂದು ಪರಿಗಣಿಸಿದರೆ ಕ್ರೈಸ್ತರು ಭಾನುವಾರವನ್ನು ಪವಿತ್ರ ದಿನವೆಂದು ಪರಿಗಣಿಸುತ್ತಾರೆ. ಮುಸಲ್ಮಾನರಲ್ಲಿ ಒಂದು ತಿಂಗಳ ಉಪವಾಸ ರೂಡಿಯಲ್ಲಿದ್ದರೆ ಕ್ರೈಸ್ತರಲ್ಲಿ ನಲವತ್ತು ದಿನಗಳ ಕಾಲ ಉಪವಾಸ ರೂಢಿಯಲ್ಲಿದೆ. ಕ್ರೈಸ್ತರ ಪವಿತ್ರಗ್ರಂಥ ಬೈಬಲ್ಲಿನ ಹಳೆಯ ಒಡಂಬಡಿಕೆಯು ಮುಸ್ಲಿಮರ ಪವಿತ್ರ ಗ್ರಂಥ ಖುರಾನಿನ ಅನೇಕ ವಿಷಯಗಳನ್ನೊಳಗೊಂಡಿದೆ. ಮಾತ್ರವಲ್ಲ ಎರಡು ಸಮುದಾಯಗಳಲ್ಲಿಡುವ ಹೆಸರುಗಳಲ್ಲೂ ಹೋಲಿಕೆ ಕಂಡು ಬರುತ್ತದೆ. ಇದೇನೇ ಇದ್ದರೂ, ಕ್ರೈಸ್ತರು ಹಿಂದುಗಳೊಡನೆ ಹೊಂದಿರುವ ಸಂಬಂಧವು ಮುಸ್ಲಿಮರೊಂದಿಗೆ ಕಂಡುಬರುವುದಿಲ್ಲ. ಇದಕ್ಕೆ ಹಿಂದೆ ತಾವೂ ಹಿಂದುಗಳಾಗಿದ್ದುದೇ ಕಾರಣವಿರಬಹುದು. ಆದರೆ ನೆರೆಹೊರೆಯ ಮುಸ್ಲಿಮರಲ್ಲಿ ಸ್ನೇಹ ಸಂಬಂಧಕ್ಕೇನೂ ಅಡ್ಡಿ ಇಲ್ಲ. ಕ್ರೈಸ್ತರ ಮಕ್ಕಳು ಗಾಳಿಸೋಂಕು ತಗುಲಿದಾಗ, ಭೀತಿ ಬಿದ್ದಾಗ, ' ಪೀರ್ ಮಕಾನ್ ' ಗಳಿಗೆ ಹೋಗಿ ತಾವೀಜು ಕಟ್ಟಿಸುವ ಪದ್ಧತಿ ಹಳ್ಳಿಗಳಲ್ಲಿ ಇಂದಿಗೂ ಉಳಿದುಕೊಂಡಿದೆ. ಕೋಮು ಕಲಹಗಳು ಕ್ರೈಸ್ತ-ಮುಸಲ್ಮಾನರಲ್ಲಿ ಕಂಡು ಬರುವುದಿಲ್ಲ. ಕ್ರಿಸ್ತನ ಅನುಯಾಯಿಗಳಾದ ಕ್ರೈಸ್ತರು ಶಾಂತಿ ಪ್ರಿಯರು ಎಂಬ ಮಾತಿಗೆ ಆದರ್ಶವಾಗಿ, ಕರ್ನಾಟಕ ಕ್ರೈಸ್ತರು ಇತರರೊಡನೆ ಅನ್ಯೂನ್ಯ ಸಂಬಂಧವನ್ನಿಟ್ಟುಕೊಂಡಿರುವುದನ್ನು ಕಾಣುತ್ತೇವೆ.

ಕರ್ನಾಟಕದ ಬುಡಕಟ್ಟುಕ್ರೈಸ್ತರು ಇತರ ಧರ್ಮೀಯರೊಡನೆ ಅನ್ಯೂನ್ಯ ಸಂಬಂಧ, ಹೊಂದಾಣಿಕೆ ಜೀವನವನ್ನು ನಡೆಸುತ್ತಿದ್ದಾರೆ ಎಂಬುದನ್ನು ಸಂಕ್ಷಿಪ್ತವಾಗಿ ಇಲ್ಲಿ ತಿಳಿಸಲಾಗಿದೆ.

ಆದರೂ ಬುಡಕಟ್ಟು ಕ್ರೈಸ್ತರು ಸಾಮಾಜಿಕ ಜೀವನದಲ್ಲಿ, ಆಚಾರ-ವಿಚಾರಗಳಲ್ಲಿ, ವೈದ್ಯೋಪಚಾರ ನಂಬಿಕೆಗಳಲ್ಲಿ ತಮ್ಮದೇ ಆದ ವೈಶಿಷ್ಟ್ಯಗಳನ್ನು ಹೊಂದಿರುತ್ತಾರೆ ಎಂಬುದು ಅವರ ಭೌತಿಕ ಜನಪದ ಅಧ್ಯಯನದಿಂದ ತಿಳಿದು ಬರುತ್ತದೆ.

### ಅಡಿಟಿಪ್ಪಣಿಗಳು

1. ವಕ್ತೃ : ನಾಗವಳ್ಳಿ, ನಾಗನಹಳ್ಳಿಯ ಜನರ ಹೇಳಿಕೆಗಳು.

2. (ANET) Ancient near Eastern myth in the Bible
   a) The story of the dragon
   b) Creation and Paradise
   c) The deluge

3. Norse - ನಾರ್ವೆ ದೇಶದ ಭಾಷೆ

4. ವಕ್ತೃ : ಪಾಸ್ಟರ್; ಸಾಲೋಮನ್ -೫೨ ಗಾಂಧಿನಗರ, ಮೈಸೂರು.

## ಅಧ್ಯಾಯ – ಮೂರು

## ಕ್ರೈಸ್ತ ಬುಡಕಟ್ಟು ಸಂಸ್ಕೃತಿ

ನಿಕಟ ನಾಗರಿಕ ಸಂಪರ್ಕ ಹೊಂದಿರುವ ಕರ್ನಾಟಕದ ಬುಡಕಟ್ಟುಕ್ರೈಸ್ತರು ನಯನಾಜೂಕಿನ ಬದುಕಿಗೆ ಮನಸೋತಿದ್ದರೂ ಪರಂಪರಾನುಗತವಾದ ಬದುಕು ಮತ್ತು ಸಂಸ್ಕೃತಿಯನ್ನು ಕಳಚಿಕೊಂಡಿಲ್ಲ. ಅಂತೆಯೇ, ಅವರ ಜೀವನದಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿದೆ. ಈ ಅಧ್ಯಾಯದಲ್ಲಿ ಕ್ರೈಸ್ತ ಬುಡಕಟ್ಟು ಸಂಸ್ಕೃತಿಯನ್ನು ಕುರಿತು ವಿವೇಚಿಸಲಾಗಿದೆ.

ಸಾಮಾನ್ಯವಾಗಿ ಇಂದಿನ ಸಮಾಜದಲ್ಲಿ ನಾಗರಿಕರೆನಿಸಿಕೊಳ್ಳಲು ಜನರು ಸಾಕಷ್ಟು ನವೀನ ರೀತಿಯ ಉಡುಪುಗಳನ್ನು ಧರಿಸುವುದು ವಾಡಿಕೆ. ಬುಡಕಟ್ಟು ಕ್ರೈಸ್ತರು ಇದರಿಂದ ಹೊರತಾಗಿಲ್ಲ. ಆದರೆ ಹೆಚ್ಚು ಪರಿಶ್ರಮದ ಜೀವನ ಸಾಗಿಸುತ್ತಿರುವ ಕ್ರೈಸ್ತರು ತಮ್ಮ ಉಡುಗೆ–ತೊಡುಗೆಗಳಿಗೆ ಪ್ರಾಧಾನ್ಯತೆ ನೀಡಿದರೂ, ಕೆಲವು ಸಂದರ್ಭಗಳಲ್ಲಿ ಮಾತ್ರ ತಮ್ಮ ಮನೋಕಾಂಕ್ಷೆಗಳನ್ನು ಪೂರೈಸಿಕೊಳ್ಳುತ್ತಾರೆ. " ಉಡುಗೆ–ತೊಡುಗೆಗಳಲ್ಲಿ ನಾಜೂಕು ನಾವೀನ್ಯತೆ ಪ್ರಕಟಗೊಳ್ಳುವುದು ಸಾಮಾಜಿಕ ಅಂತಸ್ತಿನ ಪ್ರಭಾವದಿಂದ. ವ್ಯಕ್ತಿ ಸಮಾಜದಲ್ಲೇ ಪ್ರತಿಷ್ಠಿತಸ್ಥಾನ ಅಲಂಕರಿಸಿದರೆ ವೇಷ ಭೂಷಣಗಳಲ್ಲಿ ಅದನ್ನು ಪ್ರದರ್ಶಿಸುತ್ತಾನೆ. " (ಹಿರಿಯಣ್ಣ : 1982:154).

**3.1 ಉಡುಗೆ-ತೊಡುಗೆ** ಕರ್ನಾಟಕದ ಕ್ರೈಸ್ತ ಬುಡಕಟ್ಟುಗಳ ಉಡುಗೆ–ತೊಡುಗೆಗಳನ್ನು ಅಧ್ಯಯನಕ್ಕೆ ಅನುಕೂಲ–ವಾಗುವಂತೆ ಕೆಳಗಿನಂತೆ ವರ್ಗೀಕರಿಸಿಕೊಳ್ಳಲಾಗಿದೆ.

1. ದೀಕ್ಷಾಸ್ನಾನದ ಉಡುಪು.
2. ಚರ್ಚಿಗೆ ಹೋಗುವಾಗ ಧರಿಸುವ ಉಡುಪು.
3. ಪರಮ ಪ್ರಸಾದ ಸ್ವೀಕರಿಸುವಾಗಿನ ಉಡುಪು.
4. ವಿವಾಹದ ಉಡುಗೆ–ತೊಡುಗೆ.
5. ಹರಕೆಯ ಉಡುಪು.
6. ಕೆಲಸಕ್ಕೆ ಹೋಗುವಾಗ ಧರಿಸುವ ಉಡುಪು.
7. ಹಬ್ಬ ಹರಿದಿನಗಳಲ್ಲಿ ಧರಿಸುವ ಉಡುಪು.
8. ಅಂತಿಮ ಸಂಸ್ಕಾರದ ಉಡುಪು
9. ಇತರೆ ಸಂದರ್ಭಗಳಲ್ಲಿ ಧರಿಸುವ ಉಡುಪು.

**3.2 ದೀಕ್ಷಾಸ್ನಾನದ ಉಡುಪು** ಬಿಳಿಯಬಣ್ಣ ಪರಿಶುದ್ಧತೆಯ ಸಂಕೇತ. ಹುಟ್ಟಿದ ಮಗುವಿಗೆ ಬಿಳಿಯಅಂಗಿ, ಬಿಳಿಯ ಕಾಲುಚೀಲ, ಬಿಳಿಯ ಟೋಪಿಯನ್ನು ಹಾಕುತ್ತಾರೆ.ವಯಸ್ಕರು ದೀಕ್ಷಾಸ್ನಾನ ಪಡೆಯಬೇಕಾದರೂ ಬಿಳಿಯ ಸೀರೆ ಕುಪ್ಪಸ, ಗಂಡಸಾದರೆ ಬಿಳಿಯ ಪ್ಯಾಂಟು, ಷರಟುಗಳನ್ನು ಧರಿಸುತ್ತಾರೆ. ಅಂದು ದೀಕ್ಷಾಸ್ನಾನದ ಮೂಲಕ ಜನ್ಮಪಾಪವನ್ನು ಕಳೆದುಕೊಂಡು ಪರಿಶುದ್ಧರಾಗುವರೆಂಬ ನಂಬಿಕೆ ಇರುವುದರಿಂದ ಬಾಹ್ಯ ನೋಟಕ್ಕೂ ಪರಿಶುದ್ಧತೆಯ ಕುರುಹಾಗಿ ಬಿಳಿಯ ಉಡುಪನ್ನು ಧರಿಸುತ್ತಾರೆ.

**3.3 ದೇವಾಲಯಕ್ಕೆ ಹೋಗುವಾಗ ಧರಿಸುವ ಉಡುಪುಗಳು** ಭಾನುವಾರ ಪ್ರತಿಯೊಬ್ಬ ಕ್ರೈಸ್ತನೂ ಚರ್ಚಿಗೆ ಹೋಗಿ ಪೂಜಾವಿಧಿಗಳಲ್ಲಿ ಭಾಗವಹಿಸುವುದು ಪದ್ಧತಿ ಆದ್ದರಿಂದ ಹೆಚ್ಚಿನ ಸಂಖ್ಯೆಯಲ್ಲಿ ಮಕ್ಕಳು, ಗಂಡಸರು, ಹೆಂಗಸರು ಪೂಜಾ ವಿಧಿಯಲ್ಲಿ

ಪಾಲ್ಗೊಳ್ಳಲು ಆಗಮಿಸುತ್ತಾರೆ. ಅಂದು ಬಡಾವಣೆಯ ಕ್ರೈಸ್ತರೆಲ್ಲರೂ ಚರ್ಚಿನಲ್ಲಿ ಒಂದುಗೂಡುವುದರಿಂದ ತಮ್ಮ ಪ್ರತಿಷ್ಠೆಯನ್ನು ಮೆರೆಯಲು ಒಡವೆಗಳನ್ನೂ ಧರಿಸಿಕೊಂಡು ಬರುತ್ತಾರೆ. ಭಾನುವಾರದ ಪೂಜೆಗೆಂದೇ ಕೆಲವು ಉಡುಪುಗಳನ್ನು ಮೀಸಲಾಗಿಟ್ಟಿರುತ್ತಾರೆ. ಸ್ತ್ರೀಯರು ಚರ್ಚಿನೊಳಗೆ ಹೋಗುವಾಗ ತಲೆಯ ಮೇಲೆ ಮುಸುಕು ಹಾಕಿಕೊಳ್ಳುವುದು ಪದ್ಧತಿ. ಸೀರೆ ಉಡದೆ ಇತರ ಉಡುಪುಗಳನ್ನು ಧರಿಸಿಕೊಂಡು ಬರುವ ಹುಡುಗಿಯರು ತೆಳ್ಳನೆಯ ಬಟ್ಟೆಯನ್ನು ತಲೆಯ ಮೇಲೆ ಹಾಕಿಕೊಂಡು ಬರುತ್ತಾರೆ. ತಲೆಯ ಮೇಲೆ ಮುಸುಕಿಲ್ಲದ ಸ್ತ್ರೀಯರನ್ನು ಹಿಂದೆ ಬಹು ಕೀಳಾಗಿ ಕಾಣುತ್ತಿದ್ದರು. ಗುರುಗಳು ಅವರಿಗೆ ಪ್ರಸಾದ ಕೊಡುತ್ತಿರಲಿಲ್ಲ. ಆಕೆ ಭಕ್ತಿಭಾವದಿಂದ ಚರ್ಚಿನೊಳಗೆ ಬರಬೇಕೇ ವಿನಃ ಸೌಂದರ್ಯ ಪ್ರದರ್ಶನಕ್ಕಲ್ಲ ಎಂದು ಹಿರಿಯರು ನೇರವಾಗಿ ಹೇಳಿಬಿಡುತ್ತಿದ್ದರು. ಆದರೆ ಇಂದು ಈ ಪದ್ಧತಿ ಕಡ್ಡಾಯವಿಲ್ಲ.

ಚರ್ಚಿನೊಳಗೆ ಹೋಗುವಾಗ ಚರ್ಚಿನ ಪವಿತ್ರತೆಗೆ ಭಂಗವಾಗದಂತೆ ಪಾದರಕ್ಷೆಗಳನ್ನು ಹೊರಗೆ ಬಿಟ್ಟು ದೇವರ ಸಾನಿಧ್ಯ ಸೇರಬೇಕೆಂಬುದು ನಿಯಮ. ಇದು ಕಡ್ಡಾಯವೆಂದೂ ಬೈಬಲ್ಲಿನ ಹಳೆಯ ಒಡಂಬಡಿಕೆಯಲ್ಲಿ ಬರೆದಿದೆ (ಸತ್ಯವೇದ: 88:86).ಆದರೆ ಇತ್ತೀಚೆಗೆ ಚರ್ಚಿಗೆ ಪಾದರಕ್ಷೆಗಳನ್ನು ಧರಿಸಿಕೊಂಡು ಹೋಗುವುದು ಎಲ್ಲ ಕಡೆಯು ಸಾಮಾನ್ಯವಾಗಿದೆ.

ಹಳ್ಳಿಗಳಲ್ಲಿ ನೆಲೆಸಿರುವ ಬುಡಕಟ್ಟುಕ್ರೈಸ್ತರ ಪೈಕಿ ಗಂಡಸರು ಬಿಳಿಯ ಪಂಚೆ, ಷರಟು ಧರಿಸಿ ಚರ್ಚಿಗೆ ಬರುತ್ತಾರೆ. ಉಳಿದ ಕಡೆಗಳಲ್ಲಿ ವಿಶೇಷವಾಗಿ ನಗರ ಪ್ರದೇಶಗಳಲ್ಲಿ ನವೀನ ಮಾದರಿಯ ಉಡುಪುಗಳನ್ನು ಧರಿಸುತ್ತಾರೆ. ಸ್ತ್ರೀಯರು ಸಾಮಾನ್ಯವಾಗಿ ಸೀರೆ, ರವಿಕೆ ತೊಡುತ್ತಾರೆ. ಇರುವುದರಲ್ಲಿ ಉತ್ತಮವಾದದ್ದು ಭಾನುವಾರ ಚರ್ಚಿಗೆ ಹೋಗುವಾಗ ಉಡುವ ಸೀರೆಗಳಾಗಿರುತ್ತವೆ. ವಿವಾಹಿತ ಸ್ತ್ರೀಯರು ಸೀರೆಗಳನ್ನೇ ಉಡಬೇಕೆಂಬ ನಿಯಮವೇನೂ ಇಲ್ಲ. ಆದರೆ ಸ್ತ್ರೀಯರ ಉಡುಪುಗಳ ಪೈಕಿ ಸೀರೆಗೆ ಹೆಚ್ಚು ಆದ್ಯತೆ ಇರುತ್ತದೆ. ಹಳ್ಳಿಗಳಲ್ಲಿ ಇಂದಿಗೂ ಹಳೆಯ ಸಂಪ್ರದಾಯಗಳೇ ಉಳಿದಿವೆ. ಮೈನೆರೆದ ಹೆಣ್ಣು ಮಕ್ಕಳು ಲಂಗ-ದಾವಣಿ ಅಥವಾ ಸೀರೆಯನ್ನು ಉಡುತ್ತಾರೆ. ಚಿಕ್ಕಮಕ್ಕಳಿಗೆ ನವೀನ ಮಾದರಿಯ ಉಡುಪುಗಳನ್ನು ಕೊಡಿಸಿದರೂ ತಲೆಯ ಮೇಲಿನ ಮುಸುಕು (ವೇಯಿಲ್) ಕಡ್ಡಾಯವಾಗಿರುತ್ತದೆ.

ಗಂಡಸರ ಉಡುಗೆ ಪದ್ಧತಿ ಇದಕ್ಕೆ ತದ್ವಿರುದ್ಧ. ತಲೆಯ ಮೇಲೆ ಟೋಪಿ ಅಥವಾ ರುಮಾಲನ್ನಿಟ್ಟುಕೊಂಡು ಅವರು ಚರ್ಚಿನೊಳಗೆ ಬರಬಾರದು. ತಲೆಯ ಮೇಲಿನ ಟೋಪಿಯನ್ನು ತೆಗೆಯುವುದು ಗೌರವ ಸೂಚಕ. ಸತ್ತವರನ್ನು ನೋಡಲು ಬಂದಾಗ ತಲೆಯ ಮೇಲಿನ ಟೋಪಿಯನ್ನು ತೆಗೆದು ಗೌರವ ಸೂಚಿಸುವುದನ್ನು ಇಲ್ಲಿ ಸ್ಮರಿಸಬಹುದು. ಸಿದ್ದಿ ಮತ್ತು ಕೊರಗ ಕ್ರೈಸ್ತರು ಈ ಪದ್ಧತಿಯನ್ನು ಅನುಸರಿಸಿಕೊಂಡು ಬಂದಿದ್ದಾರೆ.

**3.4 ಪರಮ ಪ್ರಸಾದ ಸ್ವೀಕರಿಸುವಾಗಿನ ಉಡುಪು** ಮಕ್ಕಳಿಗೆ ಹತ್ತುವರ್ಷ ವಯಸ್ಸಾದಾಗ ಸಾಮಾನ್ಯವಾಗಿ ಈ ಸಂಸ್ಕಾರವನ್ನು ಮಾಡುತ್ತಾರೆ. ಈ ಸಂದರ್ಭದಲ್ಲಿ ಬಿಳಿಯ ಬಣ್ಣದ ಉಡುಪನ್ನೇ ಹೊಲಿಸುತ್ತಾರೆ. ಗಂಡು ಮಕ್ಕಳಿಗೆ ಚಡ್ಡಿ, ಅಂಗಿ ಅಥವಾ ಪ್ಯಾಂಟ್ ಅಂಗಿಯಾದರೆ, ಹೆಣ್ಣು ಮಕ್ಕಳಿಗೆ ಪೂರ್ಣತೋಳಿನ ಪೂರ್ಣಲಂಗ (ಮ್ಯಾಕ್ಸಿ), ಹೆಚ್ಚು ನೆರಿಗೆ ಇಟ್ಟ ಫ್ರಾಕ್, ಲಂಗ ರವಿಕೆ ಮುಂತಾದ ರೀತಿಗಳಲ್ಲಿ ಒಂದನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ತಲೆಯ ಮೇಲೆ ಬಿಳಿಯ ತೆಳ್ಳನೆಯ ಮುಸುಕು ವಸ್ತ್ರ (ವೇಯಿಲ್) ಬಿಳಿಯಸರ, ಬಿಳಿಯ ಕಿವಿಯೋಲೆ, ಬಿಳಿಯ ಬಳೆಗಳು, ಬಿಳಿಯ ಪಾದರಕ್ಷೆಗಳು ಇತ್ಯಾದಿ ಎಲ್ಲಾ ವಸ್ತುಗಳೂ

ಬಿಳಿಯ ಬಣ್ಣದ್ದೇ ಆಗಿರುವುದು ವಿಶೇಷ. ಬಿಳಿಯ ಬಣ್ಣದ ಮೇಣದ ಬತ್ತಿಯನ್ನು ಕೈಯಲ್ಲಿ ಹಿಡಿದು ಕೊಂಡಿರುತ್ತಾರೆ. ಮೇಣದ ಬತ್ತಿಯನ್ನು ಬಿಳಿಯ ಕಾಗದ ಅಥವಾ ಬಿಳಿಯ ಮುತ್ತುಗಳಿಂದ ಅಲಂಕರಿಸಿ, ಹೊಳೆಯುವ ಬಿಳಿಯ ಟೇಪನ್ನು ಕಟ್ಟಿರುತ್ತಾರೆ. ಇನ್ನೊಂದು ಆಕರ್ಷಕ ತೊಡುಗೆಯೆಂದರೆ ಹೆಣ್ಣು ಮಕ್ಕಳಿಗೆ ತಲೆಯ ಮೇಲಿಡುವ ಬಿಳಿಯ ಕಿರೀಟ (ರೀತ್). ಇದು ಉತ್ತಮವಾದ ಬಿಳಿಯ ಬಟ್ಟೆಯಿಂದ ಕತ್ತರಿಸಿ ಮಾಡಿದ ಹೂಗಳಿಂದಲೋ ಅಥವಾ ಬಿಳಿಯ ಮುತ್ತುಗಳಿಂದಲೋ ತಯಾರಾಗಿರುತ್ತದೆ. ತಲೆಯ ಮೇಲೆ ಮುಸುಕು ವಸ್ತ್ರ ಹೊದಿಸಿ ಅದರ ಮೇಲೆ ಕಿರೀಟವಿಡುತ್ತಾರೆ.

**3.5 ವಿವಾಹ ಸಂಸ್ಕಾರದ ಉಡುಗೆ-ತೊಡುಗೆಗಳು** ಮದುವೆಹೆಣ್ಣು(ವಧು) ಎಂದಾಕ್ಷಣ ಅಲಂಕಾರಭೂಷಿತಳಾಗಿಯೇ ಇರುತ್ತಾಳೆಂಬ ಭಾವನೆ ನಮ್ಮಲ್ಲಿದೆ. ಆದರೆ ಕ್ರೈಸ್ತರ ಮದುವೆಯೆಂದರೆ ಮದುವೆಹೆಣ್ಣು ಬಿಳಿಯ ಉಡುಗೆ ಧರಿಸುವ ಪದ್ಧತಿ ಆಂಗ್ಲೋ-ಇಂಡಿಯನ್ನರಲ್ಲಿ ಮಾತ್ರ ಇದೆ. ಸಿದ್ಧಿ ಮತ್ತು ಕೊರಗ ಕ್ರೈಸ್ತರು ಹಿಂದೂ ಸಂಪ್ರದಾಯದಂತೆಯೇ ಮದುವೆಹೆಣ್ಣನ್ನು ಅಲಂಕರಿಸುತ್ತಾರೆ. ಆಕರ್ಷಕ ಬಣ್ಣದ ಜರತಾರಿ ಸೀರೆ, ರವಿಕೆ ತೊಡಿಸಿ, ಸರ ಅಡ್ಡಿಗೆ, ನೆತ್ತಿಸರ, ಕೆನ್ನೆಸರ, ಕಾಲಿಗೆ ಚೈನು, ಕಾಲುಂಗುರ, ಕೈತುಂಬಾ ಬಳೆಗಳು, ಮುಂತಾದವನ್ನು ಅಲಂಕಾರದ ಒಡವೆಗಳನ್ನಾಗಿ ಬಳಸುತ್ತಾರೆ. ಹಳ್ಳಿಗಳ ಕಡೆ ಬೆಳ್ಳಿಡಾಬನ್ನೂ, ಮೂಗುತಿಯನ್ನೂ ಕಡ್ಡಾಯವಾಗಿ ಧರಿಸುತ್ತಾರೆ. ವಾಡಿಕೆಯಂತೆ ಗಂಡಿನ ಕಡೆಯವರು ತಾಳಿ ಮಾಡಿಸುತ್ತಾರೆ. ಕ್ರೈಸ್ತರ ಪದ್ಧತಿಯಂತೆ ಚರ್ಚಿನಲ್ಲಿ ಗುರುಹಿರಿಯರ ಸಮ್ಮುಖದಲ್ಲಿ ಒಂದೇ ಒಂದು ತಾಳಿಯನ್ನು ಶಾಸ್ತ್ರೋಕ್ತವಾಗಿ ಕಟ್ಟುವುದುಂಟು. ಆದರೆ ಅನುಕೂಲವಿರುವವರು ಹಿಂದೂಗಳಂತೆ ತಾಯಿ ಮನೆಯಿಂದಲೂ ಒಂದು ತಾಳಿಯನ್ನು ಮಾಡಿಸುತ್ತಾರೆ. ಮಂಗಳ ಸೂತ್ರದಲ್ಲಿ ಗುಂಡು, ಕರಿಮಣಿ ಹವಳ ಪೋಣಿಸುವಂತೆಯೇ ಇದನ್ನೂ ಸೇರಿಸಿಕೊಳ್ಳಬಹುದು. ವರನಿಗೆ ಹೆಣ್ಣಿನ ಮನೆಯವರು ಸೂಟಿನ ಬಟ್ಟೆ, ಹೊಲಿಗೆ ಕೂಲಿ, ಉಂಗುರ, ಪಾದರಕ್ಷೆಯನ್ನು ಕೊಡಿಸುವುದು ವಾಡಿಕೆ.

ಕೊರಗ ಮತ್ತು ಸಿದ್ದಿ ಕ್ರೈಸ್ತರಲ್ಲಿ ವಧುವಿಗೆ ಬಿಳಿಯಸೀರೆ, ಬಿಳಿಯರವಿಕೆ, ಬಿಳಿಯಸರ, ಬಿಳಿಯಬಳೆಗಳು, ಬಿಳಿಯಮುತ್ತಿನ ಅಥವಾ ಹರಳಿನ ಕಿವಿಯ ಆಭರಣಗಳು, ಬಿಳಿಯ ಪಾದರಕ್ಷೆಗಳನ್ನು ತಾಯಿಯ ಮನೆಯವರೇ ತರುವರು. ಆರತಕ್ಷತೆಗೆ ದುಭಾರಿ ಸೀರೆ ಉಡಿಸುತ್ತಾರೆ. ಇದನ್ನು ವರನ ಕಡೆಯವರು ತಂದಿರುತ್ತಾರೆ. ಚರ್ಚಿನಲ್ಲಾಗುವ ಕಾರ್ಯಕ್ರಮಗಳಲ್ಲಿ ವಧು ಬಿಳಿಯ ಉಡುಗೆಯಲ್ಲಿಯೇ ಇರುತ್ತಾಳೆ. ತಲೆಯ ಮೇಲೆ ಬಿಳಿಯ ಉದ್ದನೆಯ ಮುಸುಕು ವಸ್ತ್ರ ಹೊದಿಸಿ ಅದರ ಮೇಲೆ ಬಿಳಿಯ ಕಿರೀಟವಿಡುತ್ತಾರೆ. ಮುಸುಕು ವಸ್ತ್ರದ ಕೆಳತುದಿಯನ್ನು ಹುಡುಗಿಯೊಬ್ಬಳು ಹಿಡಿದುಕೊಂಡಿರುತ್ತಾಳೆ. ಅವಳೂ ಆಕರ್ಷಕವಾಗಿ ಅಲಂಕಾರ ಮಾಡಿಕೊಂಡಿರುತ್ತಾಳೆ. ಅಂದಿನ ಕಾರ್ಯಕ್ರಮಗಳಲ್ಲಿ ಆಕೆಯ ವಿಶೇಷ ಪಾತ್ರವಿರುತ್ತದೆ.

ವಧುವಿನ ಕೇಶಾಲಂಕಾರ ಎಂದಿಗಿಂತಲೂ ವಿಶೇಷವಾಗಿರುತ್ತದೆ. ಕೂದಲನ್ನು ಮೇಲೆತ್ತಿಕಟ್ಟಿ ಅದನ್ನು ಬಿಡಿ ಹೂ ಅಥವಾ ಮುತ್ತಿನಿಂದ ಅಲಂಕರಿಸಿರುತ್ತಾರೆ. ಇದರಿಂದ ಮುಸುಕನ್ನು ತಲೆಯ ಮೇಲೆ ಅಂದವಾಗಿ ಹೊದಿಸಲು ಸಾಧ್ಯವಾಗುತ್ತದೆ. ಸಿದ್ಧಿ ಮತ್ತು ಕೊರಗ ಕ್ರೈಸ್ತರು ಆರತಕ್ಷತೆಗೆ ಮುನ್ನ ಹೆಣ್ಣಿಗೆ ಹೂ ಮುಡಿಸುವುದನ್ನೇ ಒಂದು ಸಂಪ್ರದಾಯವಾಗಿ ರೂಢಿಸಿಕೊಂಡಿದ್ದಾರೆ. ಸಾಮಾನ್ಯವಾಗಿ ಕನಕಾಂಬರ ಹೂವನ್ನೇ ಉಪಯೋಗಿಸುತ್ತಾರೆ. ಈ ಸಮಯದಲ್ಲಿ ಹಿರಿಯರು ಸಂಪ್ರದಾಯದ ಹಾಡುಗಳನ್ನು ಹಾಡುತ್ತಾರೆ. ನಗರಗಳಲ್ಲಿ ವಾಸಿಸುವ ಕೊಂಕಣಿ ಕ್ರೈಸ್ತರೂ ಈ ಪದ್ಧತಿಯನ್ನು ಉಳಿಸಿಕೊಂಡಿದ್ದಾರೆ. ಉದಾಹರಣೆಗೆ ಒಂದೆರಡು ಹಾಡುಗಳನ್ನು ಇಲ್ಲಿ ಉದಾಹರಿಸಲಾಗಿದೆ.

1. ಘುಲ್ ಬಂಗಾರ್ ಮಾಳ್ನಿ
ವ್ಹೊ ಕಾಲ್ ಸೊಬಿಲಿ ತಾಳ್ವಿರ್ ಅಬೊಲಿಂ
ಘುಲಾ ಬಾಂಗಾರಾಚಿಂ॥[1]

ಬಂಗಾರದ ಜಡೆಬಿಲ್ಲೆಗಳಿಂದ ತೂಗುತ್ತಿರೊ ಜಡೆಗಳಿಂದ ಅಲಂಕೃತಳಾಗಿ ಶೋಭಿಸುವವಳೇ.

2. ಸೊಡು ಸೊಡು ತುಜೆ ನೆಸಾಣಿ
ಅಂಕ್ವಾರ್ ಪೊಣಾಚೆಂ ಸೆಸ್ ಅಡ್ಲಾ ಹಮೀ

ಬಿಡುಬಿಡು ನಿನ್ನಯ ಕನ್ಯತ್ವದ ಉಡುಪು ಈಗ ನಾವು ನಿನಗೆ ಬಂಗಾರದ ಮಾಂಗಲ್ಯ ಮತ್ತು ಹೂಗಳನ್ನು ತಂದಿದ್ದೇವೆ.

ಘುಲ್ ಬಾಂಗಾರಾಚ.[2]

ಮದುವೆ ಗಂಡು ಮತ್ತು ಹೆಣ್ಣಿನ ಸಂಭ್ರಮಕ್ಕೆ ಮಾತ್ರ ಸೀಮಿತವಲ್ಲ. ಮನೆಯವರೆಲ್ಲರಿಗೂ ಸಂಭ್ರಮವನ್ನು ತರುವ ಸಂದರ್ಭವಾಗಿದೆ. ಎಲ್ಲರೂ ಹೊಸಬಟ್ಟೆಗಳನ್ನು ಧರಿಸುವರು. ಸ್ತ್ರೀಯರು ಅಂದು ವಿಶೇಷವಾದ ಸೀರೆಗಳನ್ನು ಉಟ್ಟು ಸಂಭ್ರಮದಿಂದ ಪಾಲ್ಗೊಳ್ಳುವರು.

3.6 **ಹರಕೆಯ ಉಡುಪುಗಳು** ರೋಗ ರುಜಿನಗಳಿಗೆ ತುತ್ತಾದಾಗ ಸಾಮಾನ್ಯವಾಗಿ ಹರಕೆಕಟ್ಟಿಕೊಳ್ಳುವುದು ವಾಡಿಕೆ. ವಸ್ತುಗಳು ಕಳುವಾದಾಗ ಅಥವ ಕಾಣದಾದಾಗ ಕೂಡ ಹರಕೆ ಕಟ್ಟಿಕೊಳ್ಳುವುದುಂಟು. ಇದನ್ನು ' 'ಕಾಣಿಕೆ ಕಟ್ಟುವುದು ' ಎಂದೂ ಹೇಳುತ್ತಾರೆ. ಹರಕೆ ಉಡುಪುಗಳು ಕಾವಿ, ಕಂದು ಮತ್ತು ಕಪ್ಪು ಬಣ್ಣದ ಬಟ್ಟೆಗಳಾಗಿರುತ್ತವೆ. ಸಿದ್ದಿ ಕ್ರೈಸ್ತರು ಹರಿಹರದ ಆರೋಗ್ಯ ಮಾತೆಗೆ ಹರಕೆ ಹೋಗುವಾಗ ಕಾವಿ ಅಥವಾ ಕಂದು ಬಣ್ಣದ ಉಡುಪನ್ನು ಮೂರು ವರ್ಷಗಳು ಧರಿಸುವುದಾಗಿ ಬೇಡಿಕೊಳ್ಳುತ್ತಾರೆ. ಅಂದರೆ ಮೂರುವರ್ಷ ಹಬ್ಬದ ದಿನದಂದು ಮಾತ್ರ. ಇದು ಮಂಡಿಯ ಕೆಳಗಿನವರೆಗಿನ ಅಂಗಿ. ಅರೆತೋಳು ಅಥವಾ ಪೂರ್ಣ ತೋಳನ್ನು ಇಡಿಸುತ್ತಾರೆ. ಅಂಗಿಯ ಎದೆಯ ಭಾಗದ ಮೇಲೆ ಬಿಳಿಯ ಬಟ್ಟೆಯಿಂದ ಶಿಲುಬೆಯ ಗುರುತನ್ನು ಹೊಲಿಸುತ್ತಾರೆ. ಇದನ್ನು ತಾವು ಧರಿಸಿರುವ ಉಡುಪಿನ ಮೇಲೆಯೇ ಧರಿಸಿ ಚರ್ಚಿಗೆ ಹೋಗುತ್ತಾರೆ. ಸ್ತ್ರೀಯರಾದರೆ ಕಾವಿ ಅಥವಾ ಕಪ್ಪುಬಣ್ಣದ ಸೀರೆಯನ್ನುಟ್ಟು ಅದೇ ಬಣ್ಣದ ರವಿಕೆಯನ್ನು ತೊಡುತ್ತಾರೆ. ಹಿಂದೆ ಹರಕೆ ಹೊತ್ತವರು ಚರ್ಚಿಗೆ ಹೋಗುವಾಗಲೇ ಹರಕೆ ಉಡುಪನ್ನು ಧರಿಸಿ ಪ್ರಯಾಣ ಮಾಡುತ್ತಿದ್ದರು. ಚರ್ಚಿನ ಹೊಸ್ತಿಲಿನ ಬಳಿಯಿಂದ ಪೀಠದತನಕ ಕೈಯಲ್ಲಿ ಉರಿಯುವ ಮೇಣದ ಬತ್ತಿಯನ್ನು ಹಿಡಿದು, ಮೊಣಕಾಲಿನಲ್ಲಿ ನಡೆದುಕೊಂಡು ಹೋಗಿ ಹರಕೆ ಸಲ್ಲಿಸುತ್ತಿದ್ದರು. ಈಗ ಈ ಪದ್ಧತಿ ಸಡಿಲಗೊಂಡಿದೆ. ಚರ್ಚಿನ ಬಳಿ ತಲುಪಿದ ಮೇಲೆ ಹರಕೆ ಉಡುಪನ್ನು ಧರಿಸಿ ಎಲ್ಲರಂತೆ ನಡೆದುಕೊಂಡೇ ಹೋಗಿ ಹರಕೆ ಸಲ್ಲಿಸುತ್ತಿದ್ದರು. ಹೊರಗೆ ಬಂದ ಮೇಲೆ ಅದನ್ನು ಬಿಚ್ಚಿಡುತ್ತಾರೆ

ಹೀಗೆ ತಾವು ಹರಕೆಮಾಡಿಕೊಂಡಂತೆ ಮೂರು ವರ್ಷವೋ, ಅಥವಾ ಏಳು ವರ್ಷವೋ ಹರಕೆಯ ಉಡುಪನ್ನು ಧರಿಸಿದ ಮೇಲೆ ಹರಕೆಯ ಉಡುಪಿನೊಂದಿಗೆ ಕಾಣಿಕೆ[1] ಇಟ್ಟು ಭಿಕ್ಷುಕರಿಗೆ ದಾನ ಮಾಡುತ್ತಾರೆ. ತೀವ್ರವಾದ ಕಾಯಿಲೆಗೋ, ಅಪಘಾತಕ್ಕೋ ಸಿಲುಕಿ ಬದುಕುಳಿದರೆ ಜೀವನಪರ್ಯಂತ ಹಬ್ಬದ ದಿನದಂದು ಹರಕೆಯ ಉಡುಪನ್ನು ಧರಿಸುವುದಾಗಿ ಹರಕೆ ಹೊರುವುದೂ ಉಂಟು.

ಕೊರಗ ಕ್ರೈಸ್ತರು ತಮಿಳುನಾಡಿನ ವೇಳಾಂಗಣಿ[2] ದೇವಮಾತೆಗೂ ಹರಕೆ ಹೊತ್ತುಕೊಳ್ಳುವ ಪದ್ಧತಿ ಇದೆ. ಕಾವಿ ಬಣ್ಣದ ಉಡುಪನ್ನು ಧರಿಸುವುದಾಗಿ ದೇವಮಾತೆಗೆ ಹರಕೆಹೊರುವುದು ರೂಢಿ. ಶನಿವಾರ ದೇವಮಾತೆಗೆ ಅರ್ಪಿತವಾದ ದಿನ, ಅಂದು ಕಾವಿ ಸೀರೆಯನ್ನುಟ್ಟು ಪೂಜೆ ಅರ್ಪಿಸುವುದೂ ಒಂದು ಹರಕೆಯೇ ಆಗಿದೆ. ತಮಿಳುನಾಡಿನ ನಾಗಪಟ್ಟಣದಲ್ಲಿರುವ ಆರೋಗ್ಯ ಮಾತೆಯ ಬಳಿಗೆ ಹೋಗಿ ಹರಕೆ ಸಲ್ಲಸಲಾಗದಿರುವವರು ತಾವಿರುವಲ್ಲಿಯೇ ಕಾವಿ ಉಟ್ಟು ಹರಕೆ ಸಲ್ಲಿಸುತ್ತಾರೆ. ಈ ಹಿಂದೆ ಕಾಣಿಕೆ ಹಣ ಒಂದೂಕಾಲು ರೂಪಾಯಿಯಾಗಿತ್ತು. ಈಗ ಐದು ರೂಪಾಯಿಗಳಿಗಿಂತ ಹೆಚ್ಚಾಗಿದೆ.

1. ತಮಿಳುನಾಡಿನ ನಾಗಪಟ್ಟಣದಲ್ಲಿರುವ ಒಂದು ಸಣ್ಣ ಗ್ರಾಮ. ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರುವ ಕೆಳಗಿನ ತ್ರಿಪದಿ ಮೇಲಿನ ವಾದಸರಣಿಗೆ ಆಧಾರವಾಗಿದೆ:

    ಒಪ್ಪತ್ತಿನೂಟ ಉಣಲಾರೆ, ಮಡಗಲಾರೆ
    ತುಂಬಿದೊಳೆಯಲ್ಲಿ ಬರಲಾರೆ ಮರಿಯಪ್ಪ
    ಒಪ್ಪಿಸಿಕೊಳ್ಳಿ ನಿಮ್ಮ ಹರಕೇಯ (ತಲ್ವಾಡಿ 1983:111)

ಮತ್ತೆ ಕೆಲವರು ಹರಕೆಯ ಉಡುಪು ಧರಿಸಿ ಚರ್ಚಿನ ಬಳಿ ಭಿಕ್ಷೆ ಬೇಡುವುದಾಗಿಯೂ ಹರಕೆ ಹೊತ್ತುಕೊಳ್ಳುತ್ತಾರೆ. ಹೀಗೆ ಬೇಡಿದ ಹಣವನ್ನು ಚರ್ಚಿನ ಗೋಲಕದೊಳಗೆ ಹಾಕಿಬಿಡುತ್ತಾರೆ. ಇದರಿಂದ ತಾವು ದೇವರ ದಯೆಯಿಂದ ಜೀವಿಸುತ್ತಿರುವುದೆಂಬ ದೀನತಾಭಾವ ಮೂಡುವುದಲ್ಲದೆ ಅಹಂಭಾವವೂ ಕುಗ್ಗುತ್ತದೆ. ಅಂತಸ್ತಿಗಿಂತಲೂ ಮಾನವನ ಜೀವಿತ ಶ್ರೇಷ್ಠವೆಂಬ ವಿಚಾರ ಹೊರಹೊಮ್ಮುತ್ತದೆ. ಕಾವಿಬಟ್ಟೆ ವೈರಾಗ್ಯವನ್ನೂ ಕಪ್ಪುಬಟ್ಟೆ ದುಃಖವನ್ನೂ ಸೂಚಿಸುತ್ತವೆ. ಇಲ್ಲಿ ಹಿಂದೂ ಧರ್ಮದ ತಿರುಳನ್ನು ಮಣಗಾಣಬಹುದು. ಹಿಂದೂಧರ್ಮದ ಪ್ರಕಾರ ಮೋಕ್ಷ ಸಾಧನೆಯೇ ಮಾನವನ ಗುರಿ. ಮೋಕ್ಷ ದೊರೆಯಬೇಕಾದರೆ ಲೌಕಿಕ ವಸ್ತುಗಳಲ್ಲಿ ವೈರಾಗ್ಯ ಮೂಡಬೇಕು. ಇದನ್ನು ವರ್ಷಕ್ಕೊಮ್ಮೆಯಾದರೂ ಸ್ಮರಿಸಿಕೊಂಡಂತಾಗುತ್ತದೆ. ಇಂತಹ ಹರಕೆಗಳು ಭಾರತೀಯ ಕ್ರೈಸ್ತರಲ್ಲಿ ಮಾತ್ರ ಬೆಳೆದು ಬಂದಿರುವುದರಿಂದ, ಮೂಲತಃ ಹಿಂದೂಗಳಾದ ಕ್ರೈಸ್ತರು ಕಾವಿ ಬಣ್ಣದ ಈ ಶ್ರೇಷ್ಟತೆಯನ್ನು ಕೈಬಿಡದೆ ಈ ಬಗೆಯಾಗಿ ಉಳಿಸಿಕೊಂಡು ಬಂದಿದ್ದಾರೆ. ಸಂಭ್ರಮದಿಂದ ತಾಳಮೇಳಗಳೊಡನೆ ಈ ಸಂಪ್ರದಾಯವನ್ನು ಇಂದಿಗೂ ನಡೆಸಿಕೊಂಡು ಬರುತ್ತಿದ್ದಾರೆ. ಮುಡಿಕೊಡುವ ಸಂಪ್ರದಾಯದಲ್ಲಿ ಮಕ್ಕಳು ಮಾತ್ರವಲ್ಲ ಹಿರಿಯ ಗಂಡಸರೂ ಭಾಗವಹಿಸುತ್ತಾರೆ. ಕಾವಿಧರಿಸಿ, ಮುಡಿಕೊಡುವುದು ಸಾಮಾನ್ಯವಾದ ಹರಕೆಯಾಗಿದೆ.

ಹುಟ್ಟಿದ ಮಕ್ಕಳು ಬದುಕುಳಿಯದೆ ಹೋದಲ್ಲಿ, ಮುಂದಿನ ಮಗು ಹುಟ್ಟಿದ ತಕ್ಷಣ ಮೊರದಲ್ಲಿ ಹಾಕಿ ಅದಕ್ಕೆ ಕಿವಿ ಚುಚ್ಚುತ್ತಾರೆ. ಮಾರ್ಟಳ್ಳಿ* (ಕೊಳ್ಳೇಗಾಲ ತಾಲ್ಲೂಕು) ನಲ್ಲಿ ಹುಟ್ಟಿದ ತಕ್ಷಣ ಮೂಗು ಚುಚ್ಚಿರುವ ನಿದರ್ಶನಗಳೂ ಕಂಡು ಬಂದಿದೆ.

**3.7 ಸಾಮಾನ್ಯ ದಿನಗಳ ಉಡುಗೆ** ಕಾಡುಗಳಲ್ಲಿ ವಾಸಿಸುವ ಸಿದ್ದಿ ಮತ್ತು ಕೊರಗ ಕ್ರೈಸ್ತರು ಸಾಮಾನ್ಯವಾಗಿ ವ್ಯವಸಾಯವನ್ನೋ, ಕೂಲಿಯನ್ನೋ ಅಥವಾ ಅದಕ್ಕೆ ಸಂಬಂಧಿಸಿದ ಉಪಕಸಬನ್ನೋ ಅವಲಂಬಿಸಿದ್ದಾರೆ. ಸಹಜವಾಗಿ ಜನರು ಶ್ರಮ ಜೀವಿಗಳು. ಎರಡು ಹೊತ್ತಿನ ಊಟಕ್ಕೆ ತೊಂದರೆ ಇರುವ, ಇವರು ಉಡುಗೆ–ತೊಡುಗೆಗಳಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡಿಲ್ಲ. ಗಂಡಸರು ಒಂದು ತುಂಡು ಪಂಚೆ, ತಲೆಗೊಂದು ಬಟ್ಟೆ ಕಟ್ಟಿಕೊಂಡು ದುಡಿಮೆಗಿಳಿಯುತ್ತಾರೆ. ಇಲ್ಲಿನ ಹೆಚ್ಚು ಜನರಿಗೆ ಉಳಲು ಸ್ವಂತ ಜಮೀನಿಲ್ಲ. ಕೂಲಿಕಾರರೇ ಹೆಚ್ಚಾಗಿದ್ದಾರೆ.

**3.8 ಹಬ್ಬ ಹರಿದಿನಗಳಲ್ಲಿ ಧರಿಸುವ ಉಡುಪುಗಳು** ಹಬ್ಬದ ಸಂಭ್ರಮವೆಂದರೆ ಹೊಸಬಟ್ಟೆಗಳನ್ನು ಧರಿಸುವುದೇ ಆಗಿದೆ. ಕ್ರಿಸ್ಮಸ್ ಮತ್ತು ಈಸ್ಟರ್ – ಈ ಎರಡು ಹಬ್ಬಗಳಲ್ಲಿ ಕ್ರಿಸ್ಮಸ್

ಸಂಭ್ರಮದ ಹಬ್ಬ. ಎಷ್ಟೇ ಬಡವರಾದರೂ ಕ್ರಿಸ್ಮಸ್ ಹಬ್ಬಕ್ಕೆ ಮನೆಯವರಿಗೆಲ್ಲಾ ಹೊಸಬಟ್ಟೆ ತರುತ್ತಾರೆ. ಶ್ರೀಮಂತರು ಬಡವರಿಗೆ ವಸ್ತ್ರದಾನ ಮಾಡುತ್ತಾರೆ. ಕ್ರಿಸ್ಮಸ್ ಹಬ್ಬದ ಸಂಭ್ರಮ ನಗರಗಳಲ್ಲಿ ಹೆಚ್ಚಾಗಿ ಎದ್ದು ಕಾಣುತ್ತದೆ. ವಸ್ತ್ರ ವಿನ್ಯಾಸ, ವೇಷಭೂಷಣಗಳಿಗೆ ನಗರದಲ್ಲಿ ಪ್ರಾಶಸ್ತ್ಯ ಹೆಚ್ಚು. ಯುವತಿಯರು, ಯುವಕರು ಅತ್ಯಂತ ನವೀನ ಮಾದರಿಯ ಉಡುಪುಗಳನ್ನು ಧರಿಸುತ್ತಾರೆ. ಸ್ತ್ರೀಯರಿಗೆ ಕ್ರಿಸ್ಮಸ್ ಹಬ್ಬಕ್ಕೆ ಕೊಂಡುಕೊಳ್ಳುವ ಸೀರೆ ವಿಶೇಷದ್ದಾಗಿರುತ್ತದೆ.

ಕೊರಗ ಮತ್ತು ಸಿದ್ದಿ ಕ್ರೈಸ್ತರು ಕ್ರಿಸ್ಮಸ್ ಹಬ್ಬಕ್ಕೆ ಹೊಸ ಬಟ್ಟೆಯನ್ನು ಕಡ್ಡಾಯವಾಗಿ ತರುತ್ತಾರಾದರೂ, ಅವರ ವೇಷಭೂಷಣಗಳು ಒಂದು ಮಿತಿಗೆ ಒಳಪಟ್ಟಿರುತ್ತವೆ. ಹೆಣ್ಣು ಮಕ್ಕಳು ಹೊಸಬಳೆ, ಟೇಪು, ಪಾದರಕ್ಷೆಗಳನ್ನು ಕೊಂಡುಕೊಳ್ಳುತ್ತಾರೆ. ತಲೆ ತುಂಬಾ ಹೂವು ಮುಡಿದು ಹಬ್ಬದ ಸಂಭ್ರಮವನ್ನು ಮೆರೆಯುತ್ತಾರೆ.ಹಾಗೂ ಅವರು ನೆಲೆಸಿರುವ ಪ್ರದೇಶದ ಭೌಗೋಳಿಕತೆಗೆ ಪೂರಕವಾಗಿ ಉಡುಗೆ ತೊಡುಗೆಗಳಲ್ಲಿ ಭಿನ್ನತೆ ಇರುತ್ತದೆ.

ಈಸ್ಟರ್ ಪ್ರಮುಖವಾದ ಹಬ್ಬವಾದರೂ ಸಂಭ್ರಮದ ಹಬ್ಬವಲ್ಲ. ತಪಸ್ಸು ಧ್ಯಾನಗಳ ಹಬ್ಬ. ಯೇಸು ಕ್ರಿಸ್ತನ ಪುನರುತ್ಥಾನದ ಹಬ್ಬ ಈಸ್ಟರ್ ಹಬ್ಬಕ್ಕೆ ಎರಡು ದಿನವಿರುವಾಗ

* ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನ ಒಂದು ಹಳ್ಳಿ ಜಕ್ಕಳ್ಳಿಯಲ್ಲಿ

ಶುಭಶುಕ್ರವಾರದ ಆಚರಣೆ ಇರುತ್ತದೆ. ಅಂದು ಯೇಸುಕ್ರಿಸ್ತನು ಶಿಲುಬೆಯ ಮೇಲೆ ತೂಗಿ ಪ್ರಾಣನೀಗಿದ ದಿನ. ಅಂದು ಬುಡಕಟ್ಟುಕ್ರೈಸ್ತರು ಬಿಳಿಯ ಉಡುಪನ್ನು ಧರಿಸಿ ಆರಾಧನಾ ವಿಧಿಗಳಲ್ಲಿ ಪಾಲ್ಗೊಳ್ಳುತ್ತಾರೆ. ಈಸ್ಟರ್ ಹಬ್ಬದ ದಿನ ಮನೆಯವರೆಲ್ಲರೂ ಹೊಸಬಟ್ಟೆಗಳನ್ನು ಧರಿಸಿ ಪೂಜಾವಿಧಿಗಳಲ್ಲಿ ಭಾಗವಹಿಸುವರು.

ತಮ್ಮ ಗ್ರಾಮದ ಅಥವಾ ಊರಿನ ಚರ್ಚುಗಳ ಹಬ್ಬಗಳಿಗೂ ಮಕ್ಕಳಿಗೆ ಹೊಸಬಟ್ಟೆ ತಂದು ಸಂಭ್ರಮದಿಂದ ಆಚರಿಸುತ್ತಾರೆ. ನೈಸರ್ಗಿಕ ಸೌಂದರ್ಯವನ್ನು ಕೃತಕ ಸಾಧನಗಳು ವಂಚಿಸಲಾರವು ಎಂಬ ಅರಿವು ಜನಪದರಲ್ಲಿ ಆಳವಾಗಿರುವುದು. ನಾಗರೀ ಕತೆಯಲ್ಲಿ ಎಷ್ಟೇ ಪ್ರಗತಿ ಸಾಧಿಸಿದ್ದರೂ ಸಂಪ್ರದಾಯದ ಉಡುಗೆ-ತೊಡುಗೆಗಳ ಸ್ಥಾನ ಮಹತ್ವವುಳ್ಳದ್ದೂ, ಗೌರವವುಳ್ಳದ್ದೂ ಆಗಿರುತ್ತದೆ. ರಾಜ್ಯದ ಯಾವುದೇ ಜಿಲ್ಲೆಯ ಬೇರೆ ಬೇರೆ ತಾಲ್ಲೂಕುಗಳಲ್ಲಿ ವಾಸಿಸುವ ಕ್ರೈಸ್ತರು ತಮ್ಮ ಮಕ್ಕಳನ್ನು ಪಟ್ಟಣಗಳಲ್ಲಿ ಓದಿಸಿದರೂ ಹಳ್ಳಿಗೆ ಬಂದಾಗ ಅವರು ತಮ್ಮದೇ ಆದ ಒಂದು ಮಿತಿಯಲ್ಲಿ ಅಲಂಕಾರ ಮಾಡಿಕೊಳ್ಳುತ್ತಾರೆ.

**3.9 ಅಂತಿಮ ಸಂಸ್ಕಾರದ ಉಡುಪುಗಳು** ಪಾರ್ಥಿವ ಶರೀರವನ್ನು ಶುಚಿಯಾಗಿ ತೊಳೆದು ಶುಭ್ರವಾದ ಉಡುಪು ಹಾಕಿ ಹಾಸಿಗೆಯ ಮೇಲೆ ಬಿಳಿಯ ವಸ್ತ್ರ ಹಾಸಿ ಅದರ ಮೇಲೆ ಮಲಗಿಸುವರು. ಸೋದರಮಾವ, ಬೀಗರು, ಅಳಿಯಂದಿರು, ವಿವಾಹಿತ ಮಕ್ಕಳು ತಲಾ ಮೂರು ಗಜ ಬಿಳಿಯ ಬಟ್ಟೆಯನ್ನು ತಂದು ಶವದ ಮೇಲೆ ಹೊದಿಸುತ್ತಾರೆ. ಈ ಬಟ್ಟೆಯನ್ನು ‘ ಕೋಡಿ ’ ಎನ್ನುವರು. ‘ ಕೋಡಿ ’ ಸಲ್ಲಿಸಿ ತಮ್ಮ ಋಣವನ್ನು ತೀರಿಕೊಳ್ಳುವುದು ಸಂಪ್ರದಾಯ. ಸತ್ತ ವ್ಯಕ್ತಿ ಗಂಡಸಾದರೆ, ಆತನ ಪತ್ನಿಗೆ ಸ್ನಾನ ಮಾಡಿಸಿ, ಹೊಸ ಕೆಂಪು ಸೀರೆ ಉಡಿಸಿ, ಗಾಜಿನ ಬಳೆತೊಡಿಸಿ ಹೂ ಮುಡಿಸುತ್ತಾರೆ.

ಕಪ್ಪುಬಣ್ಣದ ಬಟ್ಟೆ ಮತ್ತು ಬಿಳಿಯ ಜರಿ ಟೇಪಿನಿಂದ ಪೆಟ್ಟಿಗೆಯನ್ನು ಅಲಂಕರಿಸುತ್ತಾರೆ. ಅವಿವಾಹಿತರು ಸತ್ತರೆ, ಶವಕ್ಕೆ ಬಿಳಿಯ ಉಡುಪು ಹಾಕಿ, ಶವಪೆಟ್ಟಿಗೆಯನ್ನೂ ಬಿಳಿಯ ಬಟ್ಟೆಯಿಂದಲೇ ಅಲಂಕರಿಸುತ್ತಾರೆ. ಶವಸಂಸ್ಕಾರಕ್ಕೆ ಬರುವ ಜನ ಹಿಂದೆ ಕಪ್ಪುಬಣ್ಣದ ಉಡುಪನ್ನು ಧರಿಸುತ್ತಿದ್ದರು. ಈಗ ಆ ಪದ್ಧತಿ ದೂರವಾಗುತ್ತಿದೆ. ಕಪ್ಪು ದುಃಖ ಸೂಚಕ ಬಣ್ಣ. ಅಂದು ಪೂಜಾವಿಧಿಯನ್ನರ್ಪಿಸುವ ಗುರುಗಳು ಮತ್ತು ಅವರ

ಸಹಾಯಕರು ಸಹ ಕಪ್ಪು ಬಣ್ಣದ ಉಡುಪನ್ನೇ ಧರಿಸುವುದು ರೂಢಿಯಲ್ಲಿದೆ. ಆದರೇ ಈ ಪದ್ದತಿ ಕ್ಷೀಣಿಸುತ್ತಿದೆ.

ಮೃತ ವ್ಯಕ್ತಿಯ ಹತ್ತಿರದ ಬಂಧುಗಳು ಒಂದು ವರ್ಷದತನಕ ಕಪ್ಪು ಬಣ್ಣದ ಉಡುಪನ್ನೇ ಧರಿಸುತ್ತಿದ್ದರು. ಇದು ಹೆಚ್ಚಾಗಿ ಆಂಗ್ಲೋ-ಇಂಡಿಯನ್ ಮತ್ತು ಕೊಂಕಣಿ ಕ್ರೈಸ್ತರಲ್ಲಿ ಮಾತ್ರ ರೂಢಿಯಲ್ಲಿತ್ತು. ಇತ್ತೀಚೆಗೆ ಈ ಪದ್ಧತಿಯೂ ಮಾಯವಾಗುತ್ತಿದೆ. ಸಿದ್ದಿ, ಕೊರಗ ಕ್ರೈಸ್ತರು ಕೂಡ ಕೊಂಕಣಿ ಕ್ರೈಸ್ತರಂತೆ ಶವಕ್ಕೆ ಬಿಳಿಯ ಉಡುಪನ್ನು ಧರಿಸುತ್ತಾರೆ.

**3.2 ಆಹಾರ ಪದ್ಧತಿ** ಸಾಂಪ್ರದಾಯಿಕವಾಗಿ ಬೆಳೆದುಬಂದಿರುವ ಇವರ ಅಡುಗೆ ಕಲೆ ಗ್ರಾಮೀಣ ಪರಿಸರದಲ್ಲಿ ವೈವಿಧ್ಯಮಯವಾಗಿ ಉಳಿದುಕೊಂಡು ಬಂದಿದೆ. ಕಾಡುಗಳಲ್ಲಿ ಮಹಿಳೆಯು ಹೊರಗೆ ದುಡಿದು ಬರುವವಳಾದ್ದರಿಂದ ಅಡುಗೆಗೆ ಹೆಚ್ಚು ಪ್ರಾಶಸ್ತ್ಯವೆ ಇಲ್ಲ.

ಅಧ್ಯಯನದ ಅನುಕೂಲಕ್ಕಾಗಿ ಕರ್ನಾಟಕದ ಬುಡಕಟ್ಟು ಕ್ರೈಸ್ತರ ಜನಪದ ಅಡುಗೆಗಳನ್ನು ಮೂರು ಬಗೆಯಾಗಿ ವರ್ಗೀಕರಿಸಿಕೊಳ್ಳಲಾಗಿದೆ.

ಅ) ನಿತ್ಯದ ಅಡುಗೆಗಳು
ಆ) ಹಬ್ಬ ಹರಿದಿನಗಳಲ್ಲಿ ಮಾಡುವ ಅಡುಗೆಗಳು
ಇ) ವಿಶೇಷವಾದ ಊಟೋಪಚಾರಗಳು.

**3.2.1 ಸಾಮಾನ್ಯ ಅಡುಗೆಗಳು** ಕರ್ನಾಟಕದ ಉತ್ತರಕನ್ನಡದಲ್ಲಿಮತ್ತುದಕ್ಷಿಣಕನ್ನಡದಲ್ಲಿಭತ್ತ ಪ್ರಧಾನ ಆಹಾರಧಾನ್ಯವಾಗಿದೆ. ಅನ್ನ ಅಪರೂಪದ ಅಡುಗೆಯಲ್ಲವಾದರೂ ಶ್ರಮಜೀವಿಗಳಾದ ಹಳ್ಳಿಯ ಜನ ಜೋಳ ಉಣ್ಣುವುದಕ್ಕೆ ಒಗ್ಗಿಕೊಂಡಿದ್ದಾರೆ. ಅತ್ಯಂತ ಸರಳವಾದ ವಿಧಾನವನ್ನೇ ಅನುಸರಿಸುತ್ತಾರೆ: ಹಸಿ ಹಿಟ್ಟಿಗೆ ಉಪ್ಪುಬೆರೆಸಿ ಸ್ವಲ್ಪ ತೆಳುವಾಗಿ ಕಲಸಿಕೊಂಡು ಕಾದ ಹೆಂಚಿನಮೇಲೆ ಹಾಕಿತಟ್ಟುತ್ತಾರೆ. ಕೆಲವರು ಬಿಸಿನೀರಿನಲ್ಲಿ ಹಿಟ್ಟನ್ನು ಗಟ್ಟಿಯಾಗಿ ಕಲಸಿ ಕೊಳ್ಳುವುದುಂಟು ರೊಟ್ಟಿಗೆ ನೆಂಚಿಕೊಳ್ಳಲು ಸಾಮಾನ್ಯವಾಗಿ ಹುರುಳಿಕಾಳಿನ ಚಟ್ನಿ ಮಾಡುತ್ತಾರೆ. ಹುರುಳಿಕಾಳನ್ನು ಕೆಂಪಗೆ ಹುರಿದುಕೊಂಡು ಅದಕ್ಕೆ ಒಣಮೆಣಸಿಕನಕಾಯಿ, ಹುಣಸೇಹಣ್ಣು, ಈರುಳ್ಳಿ, ಉಪ್ಪು ಬೆರೆಸಿ ನುಣ್ಣಗೆ ಅರೆದು ರೊಟ್ಟಿಗೆ ನೆಂಚಿಕೊಳ್ಳುತ್ತಾರೆ.

ಮಳೆಗಾಲದ ವಿಶೇಷವಾದ ಅಡುಗೆ ಎಂದರೆ ಕೆಸುವು ಮತ್ತು ಅಣಬೆ. ಕೆರೆಯ ದಂಡೆಗಳಲ್ಲಿ ಬೆಳೆಯುವ ಕೆಸುವಿನ ಸುಳಿಸೊಪ್ಪನ್ನು ಕೊಯ್ದು ತಂದು, ಬೇಳೆಯೊಂದಿಗೆ, ಹಸಿಮೆಣಸಿನಕಾಯಿ, ಈರುಳ್ಳಿ, ಬೆಳ್ಳುಳ್ಳಿ, ಕೆಸುವು ಸುಳಿಗಳ ಚೂರುಗಳನ್ನು ಬೇಯಿಸಿ, ಅರ್ಧಬೆಂದ ಮೇಲೆ ಹುಣಸೇಹಣ್ಣನ್ನು ಅದರೊಂದಿಗೆ ಹಾಕಿ ಬೇಯಿಸುವುದು. ಪೂರ್ಣಬೆಂದಮೇಲೆ ಬಸಿದು, ಮಸೆದು ಒಗ್ಗರಣೆ ಹಾಕುವುದು. ಈ ಕಸುವಿನ ಹುಳಿಗೆ 'ಹುಳಿ' ರುಚಿಗಳಲ್ಲಿ ಮುಂದಿರದಿದ್ದರೆ ನಾಲಿಗೆ ಮತ್ತು ಬಾಯಲ್ಲಿ ಕಡಿತವಾಗುತ್ತದೆಂದು ಹೇಳುವರು.

ಅಣಬೆ ಮಳೆಗಾಲದಲ್ಲಿ ಮಾತ್ರ ಸಿಗುವ ಪದಾರ್ಥ. ಗುಡುಗಿದರೆ ಸಾಕು ಅಣಬೆ ಮೊಳೆತು ಬಿಡುತ್ತದೆ. ಆದರೆ ಇದನ್ನು ಶೇಖರಿಸಿಡಲಾಗದು. ಮೊಳೆತ ಮಾರನೇ ದಿನವೇ ಕೊಳೆತು ಹುಳುಬೀಳುತ್ತದೆ. ಅದ್ದರಿಂದ ಅಣಬೆಯನ್ನು ತಂದತಕ್ಷಣ ಅಡುಗೆಮಾಡಿ ಊಟ ಮಾಡುವರು.

ಅಣಬೆಯನ್ನು ತಂದು, ಬಿಡಿಸಿ ಶುಚಿಮಾಡಿ, ಒಣಮೆಣಸಿನಕಾಯಿ, ಕೊತ್ತಂಬರಿಬೀಜ, ಜೀರಿಗೆಯನ್ನು ಹುರಿದುಕೊಂಡು, ಚಕ್ಕೆ ಲವಂಗ, ತೆಂಗಿನಕಾಯಿ, ಹಸಿಶುಂಠಿ, ಅರಿಸಿನ

ಇವೆಲ್ಲವನ್ನೂ ಚೆನ್ನಾಗಿ ರುಬ್ಬಿಕೊಂಡು, ಸ್ವಲ್ಪ ಹೆಚ್ಚಿನ ಪ್ರಮಾಣದ ಎಣ್ಣೆಯಲ್ಲಿ ಈರುಳ್ಳಿ, ಕೊತ್ತಂಬರಿಸೊಪ್ಪು ಮಸಾಲೆಯನ್ನೂ ಎಣ್ಣೆಗೆ ಹಾಕಿ ತಿರುವಿದರೆ ರುಚಿಯಾದ ಅಣಬೆ ಸಾರು ಸಿದ್ಧವಾಗುತ್ತದೆ.

ಅಣಬೆಯ ಬಗ್ಗೆ ಇವರಲ್ಲಿ ಕೆಲವು ಕಥೆಗಳು ಪ್ರಚಲಿತವಿವೆ: ಗಯ್ಯಾಳಿ ಅತ್ತೆಯ ಸೊಸೆಯೊಬ್ಬಳಿಗೆ ಕೋಳಿಮಾಂಸ ತಿನ್ನುವ ಬಯಕೆಯಾಯಿತು. ಅವಳು ಅತ್ತೆಯ, ಮನೆಯಲ್ಲಿ ಇಲ್ಲದ ಸಮಯ ನೋಡಿ ಒಂದು ಕೋಳಿಯನ್ನು ಕುಯ್ದು ಸಾರು ಮಾಡಿದಳು. ಆದರೆ ಅಡುಗೆಮಾಡಿ ಊಟಮಾಡುವ ಮುನ್ನ ಅತ್ತೆ ಬಂದು ಬಿಡುತ್ತಾಳೆ. ಅತ್ತೆಗೆ ಹೆದರಿದ ಸೊಸೆ ಸಾರನ್ನು ಹಿತ್ತಲಿಗೆ ಕೊಂಡೊಯ್ದು ಚೆಲ್ಲಿ ಬಿಡುತ್ತಾಳೆ. ಚೆಲ್ಲಿದ ಮಾಂಸದ ತುಂಡುಗಳು ಅಣಬೆಗಳಾಗಿ ಹುಟ್ಟಿಕೊಂಡವು ಅದರಿಂದಲೇ ಅಣಬೆಗೆ ಕೋಳಿಮಾಂಸದ ರುಚಿಯಿದೆ ಎಂಬ ಕಥೆ ಇದೆ.[3]

ಹಿಂದೆ ಅಣಬೆ ಬಹುಪ್ರಿಯವಾದ ಆಹಾರ ಸಸ್ಯವಾಗಿತ್ತು. ಲಿಂಗಾಯಿತರೂ ಅಣಬೆ ತಿನ್ನುತ್ತಿದ್ದರು. ಅಣಬೆ ದೊರೆಯುವ ಕಾಲದಲ್ಲಿ, ಇತರರಿಗೆ ಸಿಗದಂತೆ ಲಿಂಗಾಯಿತರೇ ಮೊದಲು ಹೋಗಿ ಆರಿಸಿಕೊಂಡು ಬಂದು ಬಿಡುತ್ತಿದ್ದರು. ಇತರರಿಗೆ ಅಣಬೆ ಸಿಗುವ ಅವಕಾಶ ತಪ್ಪಿಹೋಯಿತು. ಆಗ ಒಬ್ಬ ಕ್ರೈಸ್ತ ಒಂದು ಉಪಾಯ ಮಾಡಿದ. ಕೋಳಿಮಾಂಸದ ಮೂಳೆಗಳೇ ಅಣಬೆಗಳಾಗಿ ಹುಟ್ಟುತ್ತವೆ ಎಂದು ಪ್ರಚಾರ ಮಾಡಿದ. ಅಂದಿನಿಂದ ಲಿಂಗಾಯಿತರು ಅಣಬೆ ತಿನ್ನುವುದನ್ನು ಬಿಟ್ಟರು.[4]

ಅಣಬೆ ಸಾಮಾನ್ಯವಾಗಿ ಎಲ್ಲರೂ ಉಪಯೋಗಿಸುವ ಸಸ್ಯವಲ್ಲ. ಕ್ರೈಸ್ತರಲ್ಲಿ ಅಣಬೆ ತಿನ್ನದವರೂ ಇದ್ದಾರೆ. ಇದು ಕೊಳೆತ ಜೈವಿಕ ಪದಾರ್ಥಗಳ ಸಾರವೆಂದು ಅನೇಕರ ಭಾವನೆ. ಇದು ಸತ್ಯವಿರಲೂ ಬಹುದು. ಆದರೆ ಅಣಬೆ ತಿನ್ನುವವರು, ಅದರ ರುಚಿಕಂಡವರು ಅಷ್ಟು ಸುಲಭವಾಗಿ ಅದನ್ನು ನಿಷೇಧಿಸುವ ತೀರ್ಮಾನಕ್ಕೆ ಬರಲಿಲ್ಲ. ಅಣಬೆ ಕೋಳಿಮಾಂಸದಷ್ಟು ರುಚಿಮಾತ್ರವಲ್ಲ ಉತ್ತಮ ಪೌಷ್ಟಿಕ ಆಹಾರವೆಂದು ನಿರೂಪಿಸುವ ಹಿನ್ನೆಲೆಯಲ್ಲಿ ಈ ಕಥೆ ಹುಟ್ಟಿಕೊಂಡಿರಬಹುದು.

ಅಣಬೆ ತಿನ್ನುವುದರ ಬಗ್ಗೆ ಇದ್ದ ಕೀಳುಭಾವನೆಯನ್ನು ದೂರಿಕರಿಸಲು ಲಿಂಗಾಯಿತರೂ ಅಣಬೆ ತಿನ್ನುತ್ತಿದ್ದರೆಂಬ ಕಥೆ ಹುಟ್ಟಿಕೊಂಡಿರಬಹುದು. ಅಥವಾ ಮಳೆಗಾಲದಲ್ಲಿ ಮಾತ್ರ ದೊರೆಯುವ ಸಸ್ಯ ಮತ್ತವರ ಪಾಲಾಗಿ ತಮಗೆ ದೊರೆಯದೆ ಹೋಗಬಹುದು ಎಂಬ ಕಾರಣದಿಂದಲೂ ಈ ಕಥೆ ಹುಟ್ಟಿ ಕೊಂಡಿರಬಹುದು.

ಹಿಂದಿನ ಅಧ್ಯಾಯದಲ್ಲಿ ಪ್ರತಿಪಾದಿಸಿರುವಂತೆ ಬುಡಕಟ್ಟು ಕ್ರೈಸ್ತರು ನೆಲಸಿರುವ ಕಡೆಗಳೆಲ್ಲಾ ಲಿಂಗಾಯಿತರೂ ನೆಲಸಿದ್ದರು ಎಂಬ ವಿಷಯವನ್ನು ಈ ಕಥೆಗಳು ಪುಷ್ಟೀಕರಿಸುತ್ತವೆ.

ಅಣಬೆಗಳಲ್ಲಿ ನುಚ್ಚಕ್ಕಿಅಣಬೆ, ಮೊಟ್ಟಣಬೆ, ಬೇರಣಬೆ, ಮರದಣಬೆ, ಹುಚ್ಚಣಬೆ ಎಂಬ ಪ್ರಭೇದಗಳಿವೆ. ಹುಚ್ಚಣಬೆ ತಿನ್ನಬಾರದು, ತಿಂದರೆ ಹುಚ್ಚು ಹಿಡಿಯುತ್ತದೆ ಎನ್ನುತ್ತಾರೆ. ಮರದಣಬೆ ಬೆಂಡಿನಂತಿದ್ದು ರುಚಿ ಇರುವುದಿಲ್ಲ. ಇದು ಮರಹಾಗೂ ಬೇರುಗಳ ಮೇಲೆ ಅರಳುತ್ತದೆ. ಒಮ್ಮೆಗೆ ಹತ್ತಿಪ್ಪತ್ತು ಅಣಬೆಗಳು ಸಿಗುತ್ತವೆ. ಆದರೆ ಇವನ್ನು ಉಪಯೋಗಿಸುವುದಿಲ್ಲ. ವೈಜ್ಞಾನಿಕ ಅನ್ವೇಷಣೆಗಳಿಂದ ಇತ್ತೀಚೆಗೆ ಕೃತಕ ಅಣಬೆಯನ್ನು ಹುಲ್ಲುಗಳಲ್ಲಿ ಬೆಳೆಯುವ ಕ್ರಮವನ್ನು ಕಂಡುಹಿಡಿದು ಪೌಷ್ಟಿಕ ಆಹಾರವೆಂದು ಪ್ರಸಾರಮಾಡಿ,

ಅಣಬೆ ಪ್ರಿಯರಿಗೆ ಎಲ್ಲಾ ಕಾಲಗಳಲ್ಲಿಯೂ ದಕ್ಕುವಂತೆ ಮಾಡಲಾಗಿದೆ.ಹಾಗೂ ಆಧುನಿಕ ಫಲಹಾರ ಮಂದಿರಗಳಲ್ಲಿ ಅಣಬೆಯಿಂದ ಸಿದ್ದಪಡಿಸಿದ ಬಗೆ ಬಗೆಯ ಖಾಧ್ಯಗಳನ್ನು ಸಿದ್ಧಪಡಿಸುವುದುಂಟು. ಇವುಗಳಿಗೆ ಅಪಾರ ಬೇಡಿಕೆ ಹಾಗೂ ದುಬಾರಿ ಬೆಲೆಯೂ ಇದೆ.

ಮೈದಾನ ಪ್ರದೇಶದಲ್ಲಿ ಕೆಲವೊಮ್ಮೆ ದೂರದೂರಕ್ಕೆ ಒಂದೊಂದು ಅಣಬೆ ಸಿಗುತ್ತದೆ. ಒಂದು ಸಿಕ್ಕಿದರೆ ಇನ್ನೊಂದು ಸಿಕ್ಕೇ ಸಿಗುತ್ತದೆ ಎಂದು ಹುಡುಕಿಕೊಂಡು ಹೋಗುವುದುಂಟು. ಅಣಬೆ ಒಂಟಿಯಾಗಿ ಅರಳುವುದಿಲ್ಲವೆಂದು ಬಲ್ಲವರು ಹೇಳುತ್ತಾರೆ. ಅಣಬೆ ಅಪರೂಪಕ್ಕೆ ಅರಳುವ ಸಸ್ಯವಾದ್ದರಿಂದ ಅಪರೂಪಕ್ಕೆ ಬಂದ ಅತಿಥಿಗಳನ್ನು 'ಅಣಬೆ ಅರಳಿದಂಗೆ ಬಂದ್ಬಿಟ್ಟದ್ದೀಯಾ? ಎಂಬ ಮಾತು ರೂಢಿಯಲ್ಲಿದೆ.

ಕೆರೆತೊರೆಗಳಲ್ಲಿ ನಳ್ಳಿಯನ್ನು ಹಿಡಿದು ತಂದು ಒಡಲನ್ನು ಶುಚಿಗೊಳಿಸಿ ತೊಳೆದಿಡುವುದು. ಖಾರವಾದ ಮಸಾಲೆಯನ್ನು ರುಬ್ಬಿಕೊಂಡು, ಶುಚಿಮಾಡಿ ಇಟ್ಟಿರುವ ನಳ್ಳಿಯೊಡನೆ ಬೆರೆಸಿ ಮಿತವಾಗಿ ನೀರಿಟ್ಟು ಕುದಿಸಿದರೆ ನಳ್ಳಿ ಸಾಂಬಾರು ಸಿದ್ದವಾದಂತೆ. ಮಳೆಗಾಲದಲ್ಲಿ ನಳ್ಳಿ ಆರೋಗ್ಯಕ್ಕೆ ಒಳ್ಳೆಯದು. ಶೀತನೆಗಡಿ ಬರುವುದಿಲ್ಲ, ಎಂದೂ ಹೇಳುತ್ತಾರೆ.

ಚಾಮರಾಜನಗರ, ಕೊಳ್ಳೆಗಾಲ, ಹುಣಸೂರು, ಕೊಡಗು ಮತ್ತು ಮಲೆನಾಡು ಪ್ರದೇಶಗಳಲ್ಲಿ ಕಳಲೆಯನ್ನು ವಿಶೇಷ ಆಹಾರವಾಗಿ ಬಳಸುತ್ತಾರೆ. ಕಳಲೆಯನ್ನು ಸಣ್ಣಸಣ್ಣ ತುಂಡುಗಳಾಗಿ ತುಂಡರಿಸಿ, ಅಕ್ಕಿತೊಳೆದ ನೀರಿನಲ್ಲಿ 'ನೆನೆಸಿ'ಇಡುತ್ತಾರೆ.[5] ಮಾರನೇ ದಿನ ಆ ನೀರನ್ನು ಚೆಲ್ಲಿ, ಮತ್ತೆ ಅಕ್ಕಿ ನೀರಿನಲ್ಲಿ ನೆನೆಸು ತ್ತಾರೆ. ಹೀಗೆ ಮೂರು ದಿನ ನೆನೆಸಿದ ನಂತರ ಮಸಾಲೆ ಹಾಕಿ ಬೇಯಿಸುವರು. ಮಳೆಗಾಲದಲ್ಲಿ ಕಳಲೆ ಒಳ್ಳೆಯ ಆಹಾರ. ಇದು ಅತಿ ಉಷ್ಣ ಪದಾರ್ಥವಾದ್ದರಿಂದ ಇದನ್ನು ಗರ್ಭಿಣಿಯರು ತಿಂದರೆ ಗರ್ಭಪಾತವಾಗುವ ಸಂಭವವಿದೆ.ಎಂಬ ಕಾರಣದಿಂದ ಅವರಿಗೆ ಇದು ನಿಷಿದ್ದ.

ಕಳಲೆ ತೊಳೆದ ನೀರನ್ನು ಕೋಳಿಗಳು ಕುಡಿದರೆ ಅಥವಾ ಒಂದೆರಡು ಚೂರು ಕಳಲೆಯನ್ನು ತಿಂದರೆ ಕೋಳಿಗಳು ಸತ್ತು ಹೋಗುತ್ತವೆ ಎಂದು ಅನುಭವಿಗಳು ಹೇಳುತ್ತಾರೆ. ಜಜ್ಜುಮೂಲಂಗಿ, ಎಣ್ಣಾಯಿ, ಬಾಳೆದಿಂಡಿನಪಲ್ಯ ಮುಂತಾದವು ಅಪರೂಪಕ್ಕೆ ಅಣಿಗೊಳ್ಳುವ ಅಡುಗೆಗಳು. ಬಾಳೆದಿಂಡಿನಪಲ್ಯ ಗಂಡಸರ ಆರೋಗ್ಯಕ್ಕೆ ಉತ್ತಮವೆಂದು ಪರಿಗಣಿತವಾಗಿದೆ. ಕೃಷಿ ಪ್ರಧಾನ ಕೆಲವು ಸರಳವಾದ, ಸಿಹಿತಿಂಡಿಗಳಾದ ರಾಗಿ ಹುರಿಟ್ಟು, ರಾಗಿಪುಟ್ಟು, ಕುಳಿಪಣಿಯಾರಂ, ಪಾಲಪಣಿಯಾರಂಗಳನ್ನು ಸಿದ್ದಪಡಿಸುವರು.

**3.2.2 ವಾರದ ವಿಶೇಷ ಆಹಾರ** ಬುಡಕಟ್ಟುಕ್ರೈಸ್ತರು ಮಾಡುವ ತಿಂಡಿಗಳು ವಿಭಿನ್ನವಾಗಿವೆ. ಇವರು ಅಕ್ಕಿ ಪ್ರಧಾನ ಆಹಾರ ಧಾನ್ಯವನ್ನಾಗಿ ಉಪಯೋಗಿಸುವುದರಿಂದ, ಇವರು ಅಣಿಗೊಳಿಸುವ ತಿಂಡಿಗಳಲ್ಲು ಅಕ್ಕಿಯನ್ನೇ ಪ್ರಧಾನವಾಗಿ ಬಳಸಲಾಗುತ್ತದೆ. ಅಕ್ಕಿ ಹಿಟ್ಟನ್ನು ಒಬ್ಬಟ್ಟಿನ ಹಿಟ್ಟಿನಂತೆ ತೆಳುವಾಗಿ ಕಲಸಿಕೊಂಡು ಹಲಸಿನ ಎಲೆಯ ಮೇಲೆ ತೆಳುವಾಗಿ ತಟ್ಟಿಕೊಳ್ಳುವುದು. ಎಲೆಯ ಸಹಿತ ಅದನ್ನು ಪೊಟ್ಟಣದಂತೆ ಮಡಚಿ ಅದರೊಳಗೆ ತೆಂಗಿನಕಾಯಿ ತುರಿ ಮತ್ತು ಬೆಲ್ಲ ಬೆರೆಸಿದ ಹೂರಣವಿಟ್ಟು ಅಕ್ಕಿ ಹಿಟ್ಟಿನಿಂದಲೇ ಅದನ್ನು ಮುಚ್ಚಿ ಹಬೆಯಲ್ಲಿ ಬೇಯಿಸುವುದು. ಇದನ್ನು 'ಈಡಿಯೊ' ಎನ್ನುತ್ತಾರೆ. ಇದು ಶಂಕಾಕೃತಿಯಾಗಿರುವ ತಿಂಡಿ.

ಕುಸುಬಲಕ್ಕಿಯನ್ನು ಹುರಿದು ಬೀಸುವ ಕಲ್ಲಿನಲ್ಲಿ ಪುಡಿಮಾಡುವುದು. ಬೆಲ್ಲವನ್ನು ಒರಳಿಗೆ ಹಾಕಿ ಕುಟ್ಟಿ, ಅದು ಮುದ್ದೆಯಂತಾದಾಗ, ಕಾಯಿತುರಿಯನ್ನೂ, ಏಲಕ್ಕಿಯನ್ನೂ ಅದರೊಂದಿಗೆ ಹಾಕಿ ಚೆನ್ನಾಗಿ ಕುಟ್ಟುವುದು. ಅದು ತೆಳ್ಳಗಾದಾಗ ಅಕ್ಕಿಪುಡಿಯನ್ನು ಬೆರೆಸಿಕೊಂಡು ಕುಟ್ಟಿ ಹದವಾದ ಮೇಲೆ ಉಂಡೆಮಾಡಿ ಇಡುವುದು. ಇದು 'ತಾಂಡ್ಲಾಲಾಡು' ವಾರದ ತನಕ ಕೆಡದಂತೆ ಇಡುವ ತಿಂಡಿ.

ಕನ್ನಡ ಕ್ರೈಸ್ತರು ಮಾಡುವ ರಾಗಿಹುರಿಟ್ಟು ಮತ್ತು ತಾಂಡ್ಲಾಲಾಡು ಅಕ್ಕಿ, ರಾಗಿ, ಎಂಬ ಧಾನ್ಯ ವ್ಯತ್ಯಾಸವನ್ನು ಬಿಟ್ಟರೆ ಎರಡೂ ಒಂದೇ ತೆರನಾದ ತಿಂಡಿ. ಇವರ ಪ್ರಧಾನ ಆಹಾರಧಾನ್ಯಗಳ ಮೇಲೆ ಇವರು ಮಾಡುವ ತಿಂಡಿಗಳು ಅವಲಂಬಿತವಾಗಿರುತ್ತವೆ ಎಂಬ ಅಂಶ ತಿಳಿದುಬರುತ್ತದೆ.

ಕುಸುಬಲಕ್ಕಿ ಮತ್ತು ಚೆನ್ನಾಗಿ ಹಣ್ಣಾಗಿರುವ ಹಲಸಿನ ತೊಳೆಗಳನ್ನು ನುಣ್ಣಗೆ ರುಬ್ಬಿ, ರುಚಿಗೆ ತಕ್ಕಷ್ಟು ಉಪ್ಪು ಬೆರೆಸಿ, ಇಡ್ಲಿ ಪಾತ್ರೆಯಲ್ಲಿಟ್ಟು ಹಬೆಯಲ್ಲಿ ಬೇಯಿಸುವುದು. ಕುಸುಬಲಕ್ಕಿಯನ್ನು 'ನೆನೆಸಿ' ಗಟ್ಟಿಯಾಗಿ ರುಬ್ಬಿ, ಅದನ್ನು ಅರ್ಧ 'ದಿಟ್ಟ'ಕ್ಕೆ ಬೇಯಿಸಿ ತೆಗೆದುಕೊಂಡು, ಚೆನ್ನಾಗಿ 'ನಾದಿ' ಶ್ಯಾವಿಗೆ ಒರಳಿನಲ್ಲಿಟ್ಟು ಒತ್ತುವುದು. ಶ್ಯಾವಿಗೆ ತಯಾರಾಗುತ್ತದೆ. ಆ ನಂತರ ತೆಂಗಿನಕಾಯಿ, ಈರುಳ್ಳಿ, ಜೀರಿಗೆಯನ್ನು ರುಬ್ಬಿ ಅದರ ಹಾಲನ್ನು ಬಸಿದುಕೊಂಡು, ಒಂದೆರಡು ಹರಳು ಉಪ್ಪನ್ನು ಹಾಕಿ ಕುದಿಸಿ, ಅದರೊಡನೆ ಶ್ಯಾವಿಗೆಯನ್ನು ಬೆರೆಸಿಕೊಂಡು ತಿನ್ನುವುದು ಬಹಳ ರುಚಿಕರ ಎಂದು ಕ್ರೈಸ್ತರು ಹೇಳುತ್ತಾರೆ.

ಕುಸುಬಲಕ್ಕಿ ಮತ್ತು ಬೆಲ್ಲವನ್ನೂ ಗಟ್ಟಿಯಾಗಿ ರುಬ್ಬಿ, ಗೋಲಿಯಂತೆ ಸಣ್ಣ ಸಣ್ಣ ಉಂಡೆಗಳನ್ನಾಗಿ ಮಾಡಿ ಎಣ್ಣೆಯಲ್ಲಿ ಕರಿಯುವುದು. ಇದು ತಿಂಗಳಗಟ್ಟಲೆ ಇಟ್ಟರು ಕೆಡುವುದಿಲ್ಲ. ಇದನ್ನು ಕ್ರೈಸ್ತರು ಅಣಿಗೊಳಿಸಿ ಇಟ್ಟುಕೊಳ್ಳುವರು.

ಕ್ರೈಸ್ತ ಸಿದ್ದಿಗಳು ತಾವು ಮಾಡುವ ಎಲ್ಲಾ ತಿಂಡಿಗಳಿಗೂ ಅಕ್ಕಿಯನ್ನೇ ಉಪಯೋಗಿಸುವುದು ಗಮನಾರ್ಹವಾದ ವಿಷಯ. ಇದಕ್ಕೆ ಮುಖ್ಯವಾದ ಕಾರಣ ಸಿದ್ದಿ ಕ್ರೈಸ್ತರು ಹಿಂದಿನಿಂದಲೂ ಕರ್ನಾಟಕದವರಲ್ಲ. ಅವರು ಕಾರಣಾಂತರದಿಂದ ಕರ್ನಾಟಕಕ್ಕೆ ಬಂದು ನೆಲೆಸಿದವರು. ಅವರು ಆಫ್ರಿಕಾ ಮೂಲದವರಾದ ಕಾರಣ ತಾವು ನೆಲೆಸಿರುವ ಪ್ರದೇಶದಲ್ಲಿ ದೊರೆಯುವ ಧಾನ್ಯವಾದ ಅಕ್ಕಿಯನ್ನೇ ಆಹಾರ ಧಾನ್ಯವಾಗಿ ಬಳಸುವುದನ್ನು ಅಭ್ಯಾಸ ಮಾಡಿಕೊಂಡಿದ್ದಾರೆ. ರಾಗಿ, ಮತ್ತು ಗೋಧಿಗಳನ್ನು ಉತ್ತರ ಕನ್ನಡದಲ್ಲಿ ಬೆಳೆಯುವುದಿಲ್ಲ. ಕುದುರೆಗೆ ಬೇಯಿಸಿದ ಹುರುಳಿ ಹಾಕುವ ಸಂಪ್ರದಾಯ ಎಲ್ಲಾ ಕಡೆಯೂ ಪ್ರಚಲಿತವಿದೆ. ಅಂತೆಯೇ ಹುರುಳಿ ಇತ್ಯಾದಿ ಕಾಳುಗಳು ಪ್ರಾಣಿಗಳ ಆಹಾರಧಾನ್ಯಗಳೆಂಬುದು ಅವರ ತಿಳಿವಳಿಕೆಯಾಗಿದೆ.

ಇವರು ಮಾಂಸಾಹಾರ ಪದಾರ್ಥಗಳನ್ನು ಅಣಿಗೊಳಿಸುವ ಕ್ರಮಗಳೂ ಕುತೂಹಲಕರ ವಾಗಿವೆ. ಕೆಲವನ್ನು ಇಲ್ಲಿ ಗಮನಿಸಬಹುದು: ಹಂದಿ ಮಾಂಸವನ್ನು ಸಣ್ಣ ಸಣ್ಣ ತುಂಡುಗಳಾಗಿ ಕತ್ತರಿಸಿಕೊಂಡು ತೊಳೆದು ಹಸಿಮೆಣಸಿನಕಾಯಿ, ಶುಂಠಿ, ಕೊತ್ತಂಬರಿಸೊಪ್ಪು, ಈರುಳ್ಳಿ, ಬೆಳ್ಳುಳ್ಳಿ, ಇವಿಷ್ಟನ್ನೂ ಸಣ್ಣಗೆ ಹೆಚ್ಚಿ ಮಾಂಸದೊಂದಿಗೆ ಹಾಕಿ ಬೇಯಿಸುವುದು. ಚೆನ್ನಾಗಿ ಬೆಂದಮೇಲೆ, ಒಣಮೆಣಸಿನಕಾಯಿಪುಡಿ, ಧನಿಯಾಪುಡಿ, ಅರಿಸಿನಪುಡಿ ಚಕ್ಕೆ ಲವಂಗದ ಪುಡಿಗಳನ್ನು ಮಾಂಸದೊಂದಿಗೆ ಹಾಕಿ, ರುಚಿಗೆ ತಕ್ಕ ಉಪ್ಪು ಹಾಕಿ ಕುದಿಸುವುದು.

ಇಳಿಸುವ ಮುನ್ನ ಒಂದು ಚಮಚದಷ್ಟು ವಿನಿಗರ್ ಹಾಕಿ ಇಳಿಸಿದರೆ ತಿನ್ನಲು ಅತಿ ರುಚಿಯಾಗಿರುತ್ತದೆ.

ಮಾಂಸವನ್ನು ಖೈಮಾ ಮಾಡಿಕೊಂಡು ಚಕ್ಕೆ ಲವಂಗ, ಮೆಣಸನ್ನು ನೀರು ಹಾಕದೆ ಬೇಯಿಸುವುದು. ಹಸಿಮೆಣಸಿನ ಕಾಯಿ, ಹಸಿಶುಂಠಿ, ಈರುಳ್ಳಿ, ಬೆಳ್ಳುಳ್ಳಿ, ಕೊತ್ತಂಬರಿಸೊಪ್ಪು, ಪುದಿನಸೊಪ್ಪನ್ನು ಸಣ್ಣಗೆ ಕತ್ತರಿಸಿ ಬೇಯಿಸಿದ ಆಲುಗೆಡ್ಡೆಯ ಸಿಪ್ಪೆ ತೆಗೆದು, ಕಿವುಚಿ ಪುಡಿಮಾಡಿ ಬೆಂದ ಮಾಂಸದ ಜೊತೆ ಬೆರೆಸುವುದು, ಸಣ್ಣಗೆ ಹೆಚ್ಚಿಟ್ಟುಕೊಂಡಿರುವ ಮಸಾಲೆಯನ್ನು ಸ್ವಲ್ಪ ಎಣ್ಣೆಯಲ್ಲಿ ಕರಿದು ಮಾಂಸದೊಂದಿಗೆ ಕಲಸಿ ಹದ ಮಾಡಿಕೊಳ್ಳುವುದು. ಈ ಮಿಶ್ರಣವನ್ನು ಬೇಕಾದ ಆಕಾರದಲ್ಲಿ ಅಂದರೆ ಗುಂಡಾಕಾರ ಅಥವಾ ವಜ್ರಾಕೃತಿಯೋ, ಅಂಗೈ ಅಗಲಕ್ಕೆ ಮಾಡಿಟ್ಟುಕೊಳ್ಳುವುದು. ಮೊಟ್ಟೆಯ ಬಿಳಿಭಾಗವನ್ನು ಮಾತ್ರ ಒಂದು ಪಾತ್ರೆಗೆ ಹಾಕಿಕೊಂಡು ಚೆನ್ನಾಗಿ ಬೆರೆಸಿ ತೆಳ್ಳಗೆ ಮಾಡಿಕೊಂಡು ಮಾಂಸದ ತುಂಡುಗಳನ್ನು ಮೊಟ್ಟೆಯ ದ್ರವದಲ್ಲಿ ಅದ್ದಿ ಎಣ್ಣೆಯಲ್ಲಿ ಬೇಯಿಸುವುದು.

**3.2.3 ಹಬ್ಬದ ವಿಶೇಷ ಆಹಾರ** ಬುಡಕಟ್ಟುಕ್ರೈಸ್ತರು ಕ್ರಿಸ್ಮಸ್ ಮತ್ತು ಈಸ್ಟರ್. ಅಲ್ಲದೆ ಚರ್ಚ್ ಹಬ್ಬಗಳನ್ನೂ ಆಚರಿಸುತ್ತಾರೆ. ಎಲ್ಲಾ ಹಬ್ಬಗಳಲ್ಲೂ ಮಾಂಸದ ಅಡುಗೆ ವಿಶೇಷವಾಗಿರುತ್ತದೆ. ಕುರಿ, ಕೋಳಿ, ಕೋಳಿ ಬಾತು, ಹಂದಿ ಮಾಂಸಗಳನ್ನು ಉಪಯೋಗಿಸುತ್ತಾರೆ. ತುಪ್ಪದನ್ನ, ಮಾಂಸದಸಾರು, ಚಿಕನ್ ರೋಸ್ಟ್, ಪಲಾವು (ಬಿರಿಯಾನಿ) ಇವು ಸಾಮಾನ್ಯವಾಗಿ ಎಲ್ಲ ಹಬ್ಬಗಳಲ್ಲೂ ಅಣಿಗೊಳಿಸುವ ಅಡುಗೆಗಳು. ಈಸ್ಟರ್ ಹಬ್ಬದ ಮಾಂಸದಡುಗೆಯು 'ಜೂದರಖಂಡ' ಎಂದೇ ಗ್ರಾಮಗಳಲ್ಲಿ ಕರೆಯಲ್ಪಡುತ್ತದೆ.

ಕ್ರಿಸ್ಮಸ್ ತಿಂಡಿಗಳ ಹಬ್ಬ. ಕ್ರಿಸ್ಮಸ್ ಹಬ್ಬದಲ್ಲಿ ಎಂಥ ಬಡವರಾದರೂ ಒಂದೆರಡು ವಿಧವಾದ ತಿಂಡಿಗಳನ್ನಾದರೂ ಮಾಡುತ್ತಾರೆ. ಕಜ್ಜಾಯ, ಚಕ್ಕುಲಿ, ರವೆಉಂಡೆ, ಪಫ್ಸ್, ಕರ್ಜಿಕಾಯಿ ಇವೆಲ್ಲಾ ಸಾಮಾನ್ಯ ತಿಂಡಿಗಳು. ವಿಶೇಷವಾಗಿ ಕ್ರಿಸ್ಮಸ್‌ನಲ್ಲೇ ಮಾಡುವ ತಿಂಡಿಗಳೆಂದರೆ ಕಲ್ಕಲಾ ಮತ್ತು ರೋಸ್‌ಕೋಕಿಸ್.

'ಕಲ್ಕಲಾ' ತಿಂಡಿಯನ್ನು ಹಬ್ಬಕ್ಕೆ ಎಂಟು-ಹತ್ತು ದಿನಗಳ ಮುಂಚಿತವಾಗಿಯೇ ಸಿದ್ಧಪಡಿಸುವುದು ವಾಡಿಕೆ. ಇದರ ತಯಾರಿಕೆಗೆ ಹೆಚ್ಚು ಸಮಯಬೇಕು ಹಾಗೂ ಹೆಚ್ಚು ದಿನ ಕೆಡದಂತೆಯೂ ಇಡಬಹುದು. ತುಪ್ಪಕ್ಕೆ ಪುಡಿಮಾಡಿದ ಸಕ್ಕರೆಯನ್ನು ಬೆರೆಸುವುದು. ಸಕ್ಕರೆ ಕರಗಿದ ಮೇಲೆ, ಮೊಟ್ಟೆಗಳನ್ನು ಒಡೆದು (ಒಂದು ಕೆ.ಜಿ. ಹಿಟ್ಟಿಗೆ ನಾಲ್ಕು ಮೊಟ್ಟೆಯಂತೆ) ಆ ಮಿಶ್ರಣಕ್ಕೆ ಬೆರೆಸಿ ಮೈದಾ ಹಿಟ್ಟನ್ನೂ ಚಿಟಿಕೆಯಷ್ಟು ಉಪ್ಪನ್ನೂ ಹಾಕಿ ಕಲಸಿ, ಚೆನ್ನಾಗಿ ನಾದುವುದು. ನಾದಿದ ಬಳಿಕ ಗರಿಗರಿಯಾಗಿರುತ್ತದೆ. ಆ ನಂತರ ಗೋಲಿಗಾತ್ರದ ಉಂಡೆಗಳನ್ನು ಮಾಡಿ ಬೇಕಾದ ಆಕಾರದಲ್ಲಿ ಅಚ್ಚು ಮಾಡಿ ಎಣ್ಣೆಯಲ್ಲಿ ಕರಿಯುವುದು. ಸಾಮಾನ್ಯವಾಗಿ ಮುಳ್ಳನು (fork) ತಿರುಗಿಸಿ, ಅದರ ಹಿಂಭಾಗದಲ್ಲಿ ಹಿಟ್ಟನ್ನು ತಟ್ಟಿ ಉರುಳಿಸಿದರೆ ಸುರುಳಿ ಆಕಾರದಲ್ಲಿ ಗರಿಗರಿಯಾಗಿ ಬರುತ್ತದೆ. ಆಗ ಕಲ್ಕಲಾ-ಗಳನ್ನು ತೆಳುವಾದ ಸಕ್ಕರೆ ಪಾಕದಲ್ಲಿ ಹಾಕಿ ತೆಗೆದು ತಣ್ಣಗಾದ ಮೇಲೆ ಅದು ಬೆಳ್ಳಗೆ ನೋಡುವುದಕ್ಕೆ ಆಕರ್ಷಕವಾಗಿ ಕಾಣಿಸುತ್ತದೆ. ಸಕ್ಕರೆ ಪಾಕದಲ್ಲಿ ಹಾಕುವುದರಿಂದ ಹೆಚ್ಚುಕಾಲ ಕೆಡದಂತೆ ಇಡಬಹುದು. ಇದು ತಿನ್ನಲು ಉತ್ತಮವಾದ ಬಿಸ್ಕತ್ತಿನಂತೆ ರುಚಿಕರವಾಗಿರುತ್ತದೆ.

ರೋಸ್ ಕೋಕಿಸ್ ಮೈದಾಹಿಟ್ಟು ಮತ್ತು ಸಕ್ಕರೆಯನ್ನು ತೆಂಗಿನ ಹಾಲಿನಲ್ಲಿ ಬೆರೆಸಿ ಕಲಸಿಕೊಂಡು, ಕೋಳಿ ಮೊಟ್ಟೆಯನ್ನು ಒಡೆದು ಬೆರೆಸಿ ಕಲಸಬೇಕು. ಈ ಮಿಶ್ರಣ ದೋಸೆ

ಹಿಟ್ಟಿನ ಹದಕ್ಕೆ ಬರುವಂತೆ ಮಾಡಿ ಅಚ್ಚಿನಲ್ಲಿ ಈ ಮಿಶ್ರಣವನ್ನು ಅದ್ದಿ ಎಣ್ಣೆಯಲ್ಲಿ ಕರಿಯುವುದು. ಇದು ಹೂವಿನ ಆಕಾರದ ಅಚ್ಚು. ಎಣ್ಣೆಯಲ್ಲಿಟ್ಟಾಗ ಅಚ್ಚಿನಿಂದ ಹಿಟ್ಟು ಕಳಚಿಕೊಳ್ಳುತ್ತದೆ. ತೆಳುವಾದ ಹಿಟ್ಟಿನ ಮಿಶ್ರಣದಿಂದ ತಯಾರಿಸುವುದರಿಂದ ಇದು ತುಂಬಾ ಗರಿಗರಿಯಾಗಿರುತ್ತದೆ. ತೆಂಗಿನಹಾಲು ಬೆರೆಸುವುದರಿಂದ ತಿನ್ನಲು ಬಹಳ ರುಚಿಕರ ವಾಗಿರುತ್ತದೆ.

ಮೊಟ್ಟೆಕಜ್ಜಾಯ ಮೈದಾಹಿಟ್ಟು, ಸಕ್ಕರೆ, ಮೊಟ್ಟೆ, ಚೆನ್ನಾಗಿ ಕಳಿತ ಬಾಳೆಯಹಣ್ಣು, ಸ್ವಲ್ಪ ಉಪ್ಪುಬೆರೆಸಿ ಚೆನ್ನಾಗಿ ತಣ್ಣೀರಿನಿಂದ ಕಲಸುವುದು. ಇದು ಇಡ್ಲಿಗೆ ರುಬ್ಬುವ ಹಿಟ್ಟಿನ ಹದದಲ್ಲಿರಬೇಕು. ಈ ಹಿಟ್ಟನ್ನು ಒಂದೊಂದು ಚಮಚ ತೆಗೆದುಕೊಂಡು ಎಣ್ಣೆಯಲ್ಲಿ ಹಾಕುವುದು. ಇದು ಬೆಂದು, ಉಬ್ಬಿ ಕಂದುಬಣ್ಣಕ್ಕೆ ತಿರುಗಿದಮೇಲೆ ತೆಗೆದಿರಿಸುವುದು. ಇದನ್ನು ತಯಾರಿಸಿದ ದಿನವೇ ತಿಂದುಬಿಡಬೇಕು. ಬಾಳೆಹಣ್ಣು ಹಾಕುವುದರಿಂದ ಮಾರನೇದಿನ ಒಳಭಾಗ ನಾರಿನಂತಾಗುತ್ತದೆ. ಅತ್ಯಂತ ಕಡಿಮೆ ಖರ್ಚಿನಲ್ಲಿ, ಹಾಗೂ ಅತ್ಯಂತ ಸುಲಭವಾಗಿ ಮಾಡಬಹುದಾದ ತಿಂಡಿ ಇದಾಗಿದೆ.

**3.2.4 ಬಂಧುಗಳಿಗೆ ವಿಶೇಷ ಅಡುಗೆಗಳು** ದಿನನಿತ್ಯದ ಸಾಮಾನ್ಯ ಅಡುಗೆ, ಹಬ್ಬ ಹರಿದಿನಗಳಲ್ಲಿ ಮಾಡುವ ಅಡುಗೆಗಳಲ್ಲದೆ, ವಿಶೇಷ ಸಂದರ್ಭಗಳಲ್ಲಿ ವಿಭಿನ್ನ ರುಚಿಯ ಅಡುಗೆಗಳನ್ನೂ ಬುಡಕಟ್ಟು ಕ್ರೈಸ್ತರು ಮಾಡುತ್ತಾರೆ.

**3.2.5 ಬಾಣಂತಿಯ ಊಟೋಪಚಾರಗಳು** ಹೆರಿಗೆಯಾದ ಕ್ಷಣದಿಂದ ನಲವತ್ತು ದಿನಗಳತನಕದ ಅವಧಿಯನ್ನು ಸಿದ್ಧಿ ಮತ್ತು ಕೊರಗರು 'ಸೂತಕ'ವೆಂದು ಪರಿಗಣಿಸುತ್ತಾರೆ. ಬಾಣಂತಿಗೆ ಪ್ರತ್ಯೇಕವಾದ ಕೋಣೆಯಲ್ಲಿ ಇರಿಸುತ್ತಾರೆ. ಚೊಚ್ಚಲ ಮಗುವಿನ ಬಾಣಂತಿಯಾದರೆ ಐದು ತಿಂಗಳ ತನಕ ತವರಿನಲ್ಲೇ ಉಳಿಯುವಳು. ಚೊಚ್ಚಲ ಬಾಣಂತನ ಬಹಳ ಸೂಕ್ಷ್ಮವಾದುದು. ಏಕೆಂದರೆ ಹೆರಿಗೆಯ ಸಂದರ್ಭ ಸ್ತ್ರೀಯರಿಗೆ ಒಂದು ಮರುಹುಟ್ಟು ಇದ್ದಂತೆ. ಅಪಾರ ನೋವು ಮತ್ತು ಅತಿಯಾದ ರಕ್ತಸ್ರಾವದಿಂದ ಬಹಳ ನಿಸಕ್ತಿಹೊಂದುವ ಕಾರಣ ಜೀವನದಲ್ಲಿ ಮೊದಲು ಎದುರಾಗುವ ಈ ಸಂದರ್ಭದಲ್ಲಿ ಹೆಣ್ಣು ತಾಯಿಯ ಬಳಿ ಇರ ಬಯಸುವುದು ಸಹಜವೇಆಗಿದೆ.

ಸಿದ್ಧಿ ಕೊರಗ ಬುಡಕಟ್ಟು ಕ್ರೈಸ್ತರು, ಹಿಂದೆ ಬಾಣಂತಿಯರಿಗೆ ಮೊದಲ ಮೂರು ದಿನಗಳು ರವೆರೊಟ್ಟಿಯನ್ನೂ ವಾದಕ್ಕಿ ಕಾಫಿಯನ್ನು, ಎಂಡು ದಿನಗಳವರೆಗೆ ಉಪ್ಪು ಹಾಕದೆ ಬೇಯಿಸಿದ ಕುಸಬಕ್ಕಿಯ ಬಿಡಿ ಅನ್ನವನ್ನು ಕೊಡುತ್ತಿದ್ದರು. ಕೆಲವು ದಿನಗಳ ಬಳಿಕ ಅನ್ನದ ಜೊತೆ ಉಪ್ಪು ಕರಿಮೆಣಸಿನ ಪುಡಿ ಬೆರೆಸಿ, ಪನ್ನಬೆಲ್ಲವನ್ನು ನೆಂಚಿಕೊಳ್ಳಲು ಕೊಡುವುದು ರೂಢಿಯಲ್ಲಿತ್ತು.[7] ಇತ್ತೀಚೆಗೆ ಆಧುನಿಕ ಆಹಾರ ಕ್ರಮದ ಪರಿಣಾಮ ಹಿಂದಿನ ಪದ್ಧತಿಗಳು ರೂಢಿಯಲ್ಲಿ ಇರುವುದಿಲ್ಲ.

ಕೆಲವು ಪಂಗಡಗಳಲ್ಲಿ ಬಾಣಂತಿಗೆ ಕಾಫಿ ಕೊಡುವ ಪದ್ಧತಿ ಇಲ್ಲ (ಹಿರಿಯಣ್ಣ: 1978:43). ಆದರೆ ಮೈಸೂರು ಜಿಲ್ಲೆಯ ಕ್ರೈಸ್ತರು ಬಾಣಂತಿಗೆ ಶೀತ ತಗುಲದಿರಲು ದಿನಕ್ಕೆ ಮೂರು ಬಾರಿ ಕಾಫಿ ಕೊಡುವ ಪದ್ಧತಿಯನ್ನು ಬೆಳೆಸಿಕೊಂಡಿದ್ದಾರೆ.

ನಲವತ್ತು ದಿನಗಳ ತನಕ ಅಂದರೆ ಸೂತಕ ಕಳೆಯುವವರೆಗೆ ಬಾಣಂತಿ ಯಾವ ಕೆಲಸವನ್ನೂ ಮಾಡುವಂತಿಲ್ಲ. ಮಲಗಿಯೇ ಇರಬೇಕು. ಹೆಚ್ಚು ಹೊತ್ತು

ಕುಳಿತುಕೊಂಡಿದ್ದರೆ, ಸೊಂಟ ನೋವು ಬರುತ್ತದೆ ಎಂದು ಅನುಭವಿಗಳು ಹೇಳುತ್ತಾರೆ ಬಾಣಂತಿಯರಿಗೆ ದಿನ ಬಿಟ್ಟು ದಿನ ಮೈಗೆ ಸ್ನಾನ ಮಾಡಿಸುತ್ತಾರೆ[8]. 'ಬಾಣಂತಿಗೆ ಮಸಾಲೆ' ಯಿಂದ ತಯಾರಿಸಿದ ಕಷಾಯವನ್ನು ಕುಡಿಯಲು ಕೊಡುವುದರಿಂದ ಶೀತ ನೆಗಡಿಬರುವುದಿಲ್ಲ. ಕೆಲವರು ಒಂದು ಚಮಚದಷ್ಟು ಬ್ರಾಂಡಿಯನ್ನು ಕುಡಿಯಲು ಕೊಡುವ ಪದ್ಧತಿಯೂ ಇದೆ. ಕುರಿ ಅಥವಾ ಎಳೆಯ ಕೋಳಿಮಾಂಸದ ಸಾರು ಅನ್ನ ಕೊಡುತ್ತಾರೆ. ಬಾಣಂತಿ ಊಟ ಮಾಡುವಾಗ ಹೊರಗಿನವರು ಯಾರು ಅತ್ತ ಸುಳಿಯಬಾರದು. ಏಕೆಂದರೆ ತಾಯಿಯದು ಹೆಂಗರಳು ಊಟ ಮಾಡುವಾಗ ಮಕ್ಕಳು ಮತ್ತು ಇತರರು ಕಂಡರೆ ಹಂಚುವ ಗುಣ ಆಕೆಯದು, ಇದರಿಂದ ಆಹಾರದ ಕೊರತೆ ಉಂಟಾಗುತ್ತದೆ. ಕುರಿಮಾಂಸದ ಜೊತೆ ಸೋರೆಕಾಯಿ, ಸಪ್ಸೀಗೆಸೊಪ್ಪು ಅಡುಗೆಗೆ ಬಳಸುವುದರಿಂದ ಎದೆಹಾಲು ತುಂಬಿಬರುತ್ತದೆ ಎಂಬ ನಂಬಿಕೆಯಿದೆ. ಕುರಿಯ ತಲೆಮಾಂಸವನ್ನು ಅಡುಗೆಮಾಡಿ ಬಾಣಂತಿಗೆ ತಿನ್ನಿಸುವುದರಿಂದ ಮಗುವಿಗೆ ತಲೆ, ಕುತ್ತಿಗೆ ಗಟ್ಟಿಯಾಗಿರುತ್ತದೆ ಎಂಬ ತಿಳಿವಳಿಕೆಗೆ ' ಎಂಟ್ ಮಕ್ಳಿಗೆ ಎಂಟ್ ಕುರಿ ತಿಂದವ್ಳೆ ' ಎಂದು ಹಾಸ್ಯ ಮಾಡುವುದುಂಟು.

ಬಾಣಂತಿಯರಿಗೆ ಆಲೂಗೆಡ್ಡೆ, ಕುಂಬಳಕಾಯಿ ಮುಂತಾದ ಶೀತದ ಪದಾರ್ಥಗಳನ್ನು ಆಹಾರದಲ್ಲಿ ಕೊಡುವುದಿಲ್ಲ. ಹಂದಿಮಾಂಸ, ಮೊಟ್ಟೆಗಳು ಒಂದು ವರ್ಷದವರೆಗೆ ಬಾಣಂತಿ ತಿನ್ನುವುದು ನಿಷಿದ್ಧ. ಮೊಟ್ಟೆ ತಿಂದರೆ ಮಗುವಿಗೆ ತಲೆಕೂದಲು ಬೆಳೆಯುವುದಿಲ್ಲ. ಇರುವ ಕೂದಲೂ ಉದುರಿಹೋಗುತ್ತದೆ ಎಂದು ಹಿರಿಯರು ಹೇಳುವುದುಂಟು. ಆದರೆ ಮೊಟ್ಟೆಯಲ್ಲಿ ಪ್ರೋಟೀನ್ ಆಹಾರಾಂಶ ಹೆಚ್ಚಿಗೆ ಇರುವುದರಿಂದ ಇದು ತಲೆಕೂದಲು ಬೆಳೆಯಲು ಸಹಕಾರಿಯಾಗಿದೆ. ಬಾಣಂತಿಗೆ ಪಚನಕ್ರಿಯೆಯಲ್ಲಿ ತೊಂದರೆಯಾಗದಿರಲೆಂಬ ಉದ್ದೇಶದಿಂದ ಹೀಗೆ ಹೇಳಿರುವ ಸಾಧ್ಯತೆ ಇದೆ.

**3.2.6 ಹಾಲು ತುಪ್ಪದ ದಿನ ಮಾಡುವ ಅಡುಗೆಗಳು** ವ್ಯಕ್ತಿ ನಿಧನಹೊಂದಿ ಮೂರು ದಿನಗಳಾದ ಮೇಲೆ ಹಾಲುತುಪ್ಪ ಮಾಡುವ ಪದ್ಧತಿ ಹಿಂದೂಗಳಂತೆಯೇ ಬುಡಕಟ್ಟು ಕ್ರೈಸ್ತರಲ್ಲಿಯೂ ರೂಢಿಯಲ್ಲಿದೆ. ಅಂದು ನೆಂಟರಿಷ್ಟರು ಸ್ಮಶಾನಕ್ಕೆ ಹೋಗಿ ಸಮಾಧಿಯಮೇಲೆ ಹಾಲೆರೆದು ಬರುತ್ತಾರೆ. ಮನೆಗೆ ಬಂದು ದೀಪವನ್ನು ನೋಡಿದ ಮೇಲೆ ಪ್ರಾರ್ಥನೆ ಪ್ರಾರಂಭಿಸುತ್ತಾರೆ. ಅನಂತರ ಚರ್ಚಿನಿಂದ ಕೊಟ್ಟಿರುವ ಶಿಲುಬೆಯನ್ನು ತೆಗೆದುಕೊಂಡು ಹೋದಬಳಿಕ, ನೆಂಟರಿಷ್ಟರಿಗೆ ಊಟಕ್ಕೆ ಬಡಿಸುತ್ತಾರೆ. ಮೊದಲು ಅಕ್ಕಿ ಮತ್ತು ಹೆಸರು ಬೇಳೆಯಿಂದ ತಯಾರಿಸಿದ ಗಂಜಿಯನ್ನು ಬಳಿಕ ಮಾಂಸದ ಅಡುಗೆಯನ್ನು ಬಡಿಸುತ್ತಾರೆ. ಅಂದು ಮಾಂಸದಡುಗೆ ಬಡಿಸದಿದ್ದಲ್ಲಿ ಶವಸಂಸ್ಕಾರದಲ್ಲಿ ಪಾಲ್ಗೊಂಡವರಾರೂ ನಲವತ್ತು ದಿನಗಳ ತನಕ ಮಾಂಸಭೋಜನ ಮಾಡಬಾರದೆಂಬ ವಿಧಿಯಿದೆ. ಆದ್ದರಿಂದ ಶಾಸ್ತ್ರಕ್ಕಾಗಿಯಾದರೂ ಅಂದು ಮಾಂಸದಡುಗೆ ಮಾಡಲೇಬೇಕು. ಕೆಲವರು ನಲವತ್ತು ದಿನಗಳತನಕ ಮಾಂಸದಡುಗೆ ಮಾಡುವುದಿಲ್ಲ. ನಲವತ್ತು ದಿನಗಳ ಪೂಜೆಗೆ 'ಮೋಕ್ಷದೀಪ' ಎನ್ನುವರು. ಅಂದು ವಿಧವಿಧವಾದ ಭಕ್ಷ್ಯಗಳನ್ನು ತಯಾರಿಸಿ ಎಡೆ ಹಾಕುವರು. ಅಲ್ಲದೆ ಮೃತವ್ಯಕ್ತಿಗೆ ಇಷ್ಟವಾಗಿದ್ದ ಭಕ್ಷ್ಯ, ಪಾನೀಯಗಳನ್ನೂ ಇಡುವರು. ಕರೆದಿರುವ ನೆಂಟರಿಷ್ಟರಿಗೆಲ್ಲಾ ವಿಶೇಷ ಭೋಜನ ಮಾಡಿಸುವರು. ಅದು ಮಾಂಸಹಾರವಾಗಿರುತ್ತದೆ.

ಸಿದ್ಧಿ ಮತ್ತು ಕೊರಗ ಬುಡಕಟ್ಟುಕ್ರೈಸ್ತರು ಅಡುಗೆಮಾಡುವ ವಿಧಾನಗಳಲ್ಲಿ ವಿಭಿನ್ನತೆ ಕಂಡುಬಂದರೂ ಸಂದರ್ಭಗಳೂ ಒಂದೇ ಆಗಿರುವುದನ್ನು ಗಮನಿಸಬಹುದು. ಉದಾಹರಣೆಗೆ ತಮಿಳು, ಕೊಂಕಣಿ ಮಾತನಾಡುವ ಕ್ರೈಸ್ತರು ಮಾಡುವ ಕುರಿ, ಕೋಳಿಮಾಂಸದ

ಸಾರುಗಳಿಗಿಂತಲೂ ಹಿಂದುಗಳು ಮಾಡುವ ಸಾರು, ಸಂಪೂರ್ಣ ವಿಭಿನ್ನವಾದ ರೀತಿಯದಾಗಿದೆ. ಕಾಡುಗಳಲ್ಲಿ ವಾಸಿಸುವ ಬುಡಕಟ್ಟು ಕ್ರೈಸ್ತರು ಮಾಂಸದ ಸಾರನ್ನು ಮಾಡಿ ಬಸಿದು ಮಾಂಸವನ್ನು ಪ್ರತ್ಯೇಕಿಸುತ್ತಾರೆ. ರುಚಿಯಲ್ಲೂ ವ್ಯತ್ಯಾಸ ಕಂಡುಬರುತ್ತದೆ. ಹಬ್ಬಹರಿದಿನಗಳಲ್ಲಿ ಎಲ್ಲಾ ಕ್ರೈಸ್ತರೂ ತಮ್ಮದೇ ಆದ ವಿಧಾನದಲ್ಲಿ ಮಾಂಸದ ಅಡುಗೆಯನ್ನು ಮಾಡುವುದು ಕಂಡು ಬರುತ್ತದೆ. ಹೀಗೆ ಮಾಂಸದ ಬಸ್ಸಾರು ಮಾಡುವ ವಿಧಾನ ಇತರ ಧರ್ಮೀಯರಲ್ಲೂ ಕಂಡು ಬರುತ್ತದೆ.

ಕೋಳಿ ಕೊಯ್ದು ಅಡುಗೆ ಮಾಡುವಾಗ ಯಾರದೂ ದೃಷ್ಟಿಯಾಗಬಾರದೆಂಬ ಒಂದು ವಿಚಿತ್ರವಾದ ಪದ್ಧತಿ ರೂಢಿಯಲ್ಲಿದೆ. ಮಾಂಸದ ಸಾರು ಒಲೆಯ ಮೇಲೆ ಕುದಿಯುತ್ತಿರುವಾಗ ಕುಡುಗೋಲು ಅಥವಾ ಕತ್ತಿಯನ್ನು ಬೆಂಕಿಯಲ್ಲಿ ಕೆಂಪಗೆ ಕಾಯಿಸಿ ಸಾರಿನ ಪಾತ್ರೆಯೊಳಗೆ ಇಡುವರು. ಮಾಂಸದ ತುಂಡೊಂದು ಅದಕ್ಕೆ ಅಂಟಿಕೊಂಡಾಗ ಅದನ್ನು ತೆಗೆದು ಆ ತುಂಡನ್ನು ಬಿಸಾಡುವರು. ಆಗ ದೃಷ್ಟಿ ತೆಗೆದಂತಾಯಿತು ಎಂಬ ಸಮಾಧಾನ ಹೊಂದುತ್ತಾರೆ. ಇಂತಹ ಅನೇಕ ನಂಬಿಕೆಗಳು ಕನ್ನಡ ಕ್ರೈಸ್ತರಲ್ಲಿ ಕಾಣಬರುತ್ತದೆ.

**3.3 ವೈದ್ಯ ಪದ್ಧತಿ** ಪ್ರತಿ ಸಮಾಜದಲ್ಲೂ ತನ್ನದೇ ಆದ ಒಂದು ವೈದ್ಯ ಪದ್ಧತಿಯಿರುವಂತೆ ಕ್ರೈಸ್ತ ಸಮಾಜದಲ್ಲೂ ತನ್ನದೇ ಆದ ವೈದ್ಯ ಪದ್ಧತಿಯಿದೆ. ಸಾಮಾನ್ಯ ರೋಗಗಳಿಗೆ ಮನೆಯ ಹಿರಿಯ ಸ್ತ್ರೀಯರೇ ಪರಂಪರಾನುಗತವಾಗಿ ನಡೆದುಬಂದಿರುವ ವೈದ್ಯ ಮಾಡುತ್ತಾರೆ. ರೋಗ ಕೈಮೀರಿದಾಗ ಮಾತ್ರ ವೈದ್ಯರಲ್ಲಿಗೆ ಹೋಗುತ್ತಾರೆ. ಜನಪದರ ದೃಷ್ಟಿಯಲ್ಲಿ ಉತ್ತಮ ಆರೋಗ್ಯವನ್ನು ಪಡೆಯುವುದು ಭಗವಂತನ ಕೃಪಾವರವಾಗಿರುತ್ತದೆ. ಶಿಕ್ಷೆಯ ರೂಪದಲ್ಲಿ ದೇವರು ರೋಗಗಳನ್ನು ಕೊಡುತ್ತಾನೆ. ಮಾಡಿರುವ ತಪ್ಪಿಗೆ ಪಶ್ಚಾತ್ತಾಪಪಟ್ಟು, ಪ್ರಾಯಶ್ಚಿತ್ತ ಮಾಡಿದರೆ ರೋಗದಿಂದ ಮುಕ್ತರಾಗಬಹುದು ಎಂಬ ಭಾವನೆಯಿಂದಲೇ ಹರಕೆ ವ್ರತ ಇತ್ಯಾದಿಗಳು ಇವರಲ್ಲಿ ಹುಟ್ಟಿಕೊಂಡಿವೆ. ಬುಡಕಟ್ಟು ಕ್ರೈಸ್ತರಲ್ಲಿಯೂ ಇಂತಹ ಧಾರ್ಮಿಕ ಮನೋಭಾವ ಮೈಗೂಡಿಕೊಂಡಿದೆ. ಇತರ ಧರ್ಮೀಯರಲ್ಲಿಯೂ ಇಂತಹ ಮನೋಭಾವನೆಗಳನ್ನು ಗುರುತಿಸಬಹುದು. ಉದಾಹರಣೆಗೆ; ರೋಗರುಜಿನಗಳಿಗೆ ದೈವಶಕ್ತಿ, ಭೂತಶಕ್ತಿಗಳೇ ಕಾರಣವೆಂದು ಲಂಬಾಣಿಗಳು ಭಾವಿಸುತ್ತಾರೆ. ಪ್ಲೇಗು, ಕಾಲರಾ, ಸಿಡುಬು ಇತ್ಯಾದಿ ಸಾಮೂಹಿಕ ರೋಗಗಳು ಮಾರಿ, ಮಸಣಿಗಳು ಮುನಿದ ಕಾರಣ ಎಂದು ಅವರ ನಂಬಿಕೆ (ಖಂಡೋಬ: 1991:165). ಈ ನಂಬಿಕೆಗಳಲ್ಲಿ ನ್ಯೂನತೆಗಳೂ ಇರಬಹುದು. ಆದರೆ ನಂಬಿಕೆಗಳು ಕಾಲಕಾಲಕ್ಕೆ ಬದಲಾವಣೆ ಹೊಂದುವಂಥವುಗಳಾಗಿವೆ. "ಸಮಾಜದಲ್ಲಿ ನೀತಿ ಧರ್ಮಗಳು ಉಳಿದಿರುವುದು ಈ ನಂಬಿಕೆಗಳಿಂದ; ಐಕ್ಯ ಸಾಧನೆಯಾಗಿರುವುದು ಇವುಗಳಿಂದ" (ದೇಜಗೌ: 1991:365). ನಂಬಿಕೆಗಳ ಆಧಾರದಮೇಲೆಯೇ ದೇವತೆಗಳ ಉತ್ಸವ, ಜಾತ್ರೆ ನಡೆದು ಸಾವಿರಾರು ಜನರು ಒಂದೆಡೆ ಕೂಡಿ ಪೂಜೆ ಪುನಸ್ಕಾರಾದಿಗಳು ನಡೆಯುವ ಅವಕಾಶ ಒದಗಿದೆ. ಅನೇಕ ರೋಗರುಜಿನಗಳಿಗೆ ದೇವತೆಗಳನ್ನು ಮೊರೆ ಹೋಗುವುದು ಅವರ ಹೆಸರಿನಲ್ಲಿ ಹರಕೆ ಹೊರುವುದು ಪದ್ಧತಿಯಾಗಿದೆ. ಈ ಪದ್ಧತಿಗಳ ಆಚರಣೆಗಳಿಂದ ರೋಗ ವಾಸಿಯಾಗುವುದೆಂಬ ನಂಬಿಕೆಯೂ ಬೆಳೆದು ಬಂದಿದೆ.

ಜಾನಪದ ವಿದ್ವಾಂಸರು ಜನಪದ ವೈದ್ಯವನ್ನು ನೈಸರ್ಗಿಕ ವೈದ್ಯವಿಧಾನ ಮತ್ತು ಧಾರ್ಮಿಕ-ಮಾಂತ್ರಿಕ ವೈದ್ಯ ವಿಧಾನಗಳೆಂದು ವಿಂಗಡಿಸಿದ್ದಾರೆ. ಇದೇ ವರ್ಗೀಕರಣಕ್ಕೆ ಅನುಸಾರವಾಗಿ ಕ್ರೈಸ್ತ ಜನಪದ ವೈದ್ಯವನ್ನು ಅಭ್ಯಸಿಸಲಾಗಿದೆ. ನೈಸರ್ಗಿಕ ವಿಧಾನದಲ್ಲಿ ಪ್ರಾಕೃತಿಕವಾಗಿ ದೊರೆಯುವ ಯಾವುದೋ ಬೇರು, ಬೀಜ, ಸೊಪ್ಪು ಅಥವಾ ಆಹಾರ ಪದಾರ್ಥಗಳೇ ಮೂಲ ಔಷಧಿಯ ವಸ್ತುಗಳಾಗಿರುತ್ತವೆ. ಮಾಂತ್ರಿಕ ಅಥವಾ ಧಾರ್ಮಿಕ ವೈದ್ಯ ಸಂಪೂರ್ಣವಾಗಿ ನಂಬಿಕೆಯ ಆಧಾರದ ಮೇಲೆ ನಿಂತಿದೆ. ಹರಕೆ ಹೊರುವುದು, ಹರಕೆ ತೀರಿಸುವುದು, ಮುಡಿಕೊಡುವುದು, ಅನ್ನದಾನ ಮಾಡಿಸುವುದು, ಯಂತ್ರ ಹಾಕಿಸುವುದು,

ತೀರ್ಥ ಪ್ರೋಕ್ಷಣೆ ಮಾಡಿಸುವುದು, ಮಂತ್ರ ಹೇಳಿಸುವುದು ರೂಢಿಯಲ್ಲಿದೆ. ದೈಹಿಕವಾಗಿ ಕಾಣಿಸಿಕೊಳ್ಳುವ ಕಾಯಿಲೆಗಳಿಗೆ ಬುಡಕಟ್ಟು ಕ್ರೈಸ್ತರು ತಮಗೆ ತೋಚಿದಂತೆ, ತಮ್ಮ ಕೈಗೆಟಕುವಂತಹ ಔಷಧಿಗಳನ್ನು ಮಾಡಿಕೊಳ್ಳುತ್ತಾರೆ. ಅಂತಹ ಕೆಲವು ಸರಳ ವೈದ್ಯಗಳನ್ನು ಇಲ್ಲಿ ನಿರೂಪಿಸಲಾಗಿದೆ.

ಜ್ವರ ಬಂದಾಗ ಮೈ ಕೈ ಸೋತು, ಕಣ್ಣುಗಳು ಕೆಂಪಗಾಗಿ ಮೈ 'ಕೆಂಡ'ದಂತೆ ಸುಡುವುದರಿಂದ ಗುರುತಿಸುವರು. ಸಂಜಿಸೊಪ್ಪು, ಬೆಳ್ಳುಳ್ಳಿ ಜಜ್ಜಿ ತೆಗೆದ ರಸ, ಎರಡನ್ನೂ ಬೆರೆಸಿ ಮೈಗೆಲ್ಲಾ ಉಜ್ಜಿ ಅದರ ಚಕ್ಕೆಯನ್ನು ಬಿಳಿಬಟ್ಟೆಗೆ ಕಟ್ಟಿ ಹೆಂಗಸಾದರೆ ಎಡಮಣಿಕಟ್ಟಿಗೂ, ಗಂಡಸಾದರೆ ಬಲಮಣಿಕಟ್ಟಿಗೂ ಕಟ್ಟುತ್ತಾರೆ.) ಬಿಸಿನೀರಿನ ಸ್ನಾನ ಮಾಡಿಸಿ, ಖಾರವಾದ ಉಪ್ಪೆಸರಿನಲ್ಲಿ ಬಿಸಿ ರಾಗಿಮುದ್ದೆಯನ್ನುಂಡು ಬೆಚ್ಚಗೆ ಹೊದ್ದುಕೊಂಡು ಮಲಗಲು ಹೇಳುತ್ತಾರೆ.

ಕೆಮ್ಮಿಗೆ ಕಾರಣವನ್ನು ಮೊದಲು ಪತ್ತೆಹಚ್ಚಿ ಅನಂತರ ಔಷಧಿ ಯಾವುದೆಂಬುದನ್ನು ತೀರ್ಮಾನಿಸುತ್ತಾರೆ. ಮೂಗಿನಲ್ಲಿ ಸೋರುತ್ತಿದ್ದರೆ ಶೀತದ ಕೆಮ್ಮು ಎಂದು ಕೆಮ್ಮುವಾಗ ಗೊರಲು ಶಬ್ದ ಬಂದರೆ ನಾಯಿ ಕೆಮ್ಮು, ಸಿಂಬಳವೇನೂ ಬರದೆ ಒಣಕೆಮ್ಮಾದರೆ ಕಿರುನಾಲಿಗೆ ಬಿದ್ದಿರುವ ಕೆಮ್ಮು ಎಂದೂ ಗುರುತಿಸುತ್ತಾರೆ. ಶೀತದ ಕೆಮ್ಮಾದರೆ ಮೆಣಸು, ಧನಿಯಾ, ಬೆಲ್ಲ, ಒಣಶುಂಠಿ, ಲವಂಗ ಇವೆಲ್ಲವನ್ನೂ ಕುಟ್ಟಿ, ನೀರಿನಲ್ಲಿ ಬೆರೆಸಿ ಕುದಿಸಿ ಅದರ ಕಷಾಯವನ್ನು ರೋಗಿಗೆ ಕುಡಿಸುತ್ತಾರೆ.[9] ಇದು ಕೊರಗ ಮತ್ತು ಸಿದ್ಧಿ ಕ್ರೈಸ್ತರಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಕನ್ನಡ ಕ್ರೈಸ್ತರು ಶೀತದ ಕೆಮ್ಮಿಗೆ ಮಾಡುವ ಔಷಧಿಯು ಸ್ವಲ್ಪ ಭಿನ್ನವಾಗಿದೆ. ಬಿಸಿಹಾಲಿಗೆ ಕರಿಮೆಣಸಿನಪುಡಿ ಮತ್ತು ಅರಿಸಿನಪುಡಿಯನ್ನು ಹಾಕಿಕೊಂಡು ಕುಡಿಯುತ್ತಾರೆ. ಮೆಣಸಿನ ಕಾಳನ್ನು ದವಡೆಯಲ್ಲಿ ಇರಿಸಿ ಕೊಳ್ಳುತ್ತಾರೆ. ಮಕ್ಕಳಿಗೆ ಶೀತದ ಕೆಮ್ಮು ಬಂದರೆ ವೀಳೆಯದೆಲೆಯನ್ನು ಜಜ್ಜಿ ಹೊಸಕಿ ರಸತೆಗೆದು ಕಸ್ತೂರಿ, ಬೆರೆಸಿ ಕುಡಿಸುತ್ತಾರೆ.[10]

ನಾಯಿಕೆಮ್ಮು ಸಾಮಾನ್ಯವಾಗಿ ಮಕ್ಕಳಿಗೆ ಬರುವುದೇ ಹೆಚ್ಚು. ಮಗುವಿಗೆ ನಾಯಿಕೆಮ್ಮು ಬಂದಾಗ, ಕರಿನಾಯಿಗೆ ಅನ್ನ ಹಾಕಿ ಅದು ತಿಂದುಬಿಟ್ಟ ಎಂಜಲನ್ನು ಮಗುವಿಗೆ ತಿನ್ನಿಸುತ್ತಾರೆ. ಸಂತ ನೆಬಸ್ತಿಯಾನರಿಗೋ, ಸಂತ ಅಂತೋಣಿಯವರಿಗೋ ಹರಕೆ ಕಟ್ಟಿಕೊಳ್ಳುತ್ತಾರೆ.

ಕಿರುನಾಲಿಗೆ ಬಿದ್ದಾಗ ಬರುವ ಕೆಮ್ಮಿಗೆ ಉಪ್ಪೆಸರಿನ ಖಾರದೊಂದಿಗೆ ಬಿಸಿ ರಾಗಿರೊಟ್ಟಿಯನ್ನು ತಿನ್ನಿಸುತ್ತಾರೆ. ಅವರೇಕಾಳು ಹುರಿದು ಖಾರವಾಗಿ ಸಾರುಮಾಡಿ ರಾಗಿಮುದ್ದೆಯೊಂದಿಗೆ ತಿನ್ನಿಸುತ್ತಾರೆ. ಬೆಳಿಗ್ಗೆ ಎದ್ದ ತಕ್ಷಣ ನೀರು ಮುಟ್ಟುವ ಮೊದಲು ತಲೆಯ ಸುಳಿಯಿಂದ ನಾಲ್ಕೆಳೆ ಕೂದಲು ಹಿಡಿದೆಳೆದು ನೆಟಿಕೆ ತೆಗೆಯುತ್ತಾರೆ. ಡೋರ್ನಹಳ್ಳಿಯ ಕ್ರೈಸ್ತರು ಕರಿಮೆಣಸಿನ ಪುಡಿಯನ್ನು ಹೆಬ್ಬೆಟ್ಟಿನಲ್ಲಿಟ್ಟುಕೊಂಡು ಕಿರುನಾಲಿಗೆಯ ಮೇಲಿಟ್ಟು ಒತ್ತರಿಸುತ್ತಾರೆ.[11] ಒಣಕೆಮ್ಮಿಗೆ ಕೊಂಕಣಿ ಕ್ರೈಸ್ತರು ಮಾಡುವ ಔಷಧಿ ಸ್ವಲ್ಪ ಭಿನ್ನವಾಗಿದೆ. ದಪ್ಪನಾದ ನಿಂಬೆಹಣ್ಣನ್ನು ನಾಲ್ಕು ಹೋಳುಗಳಾಗಿ ಮಾಡಿ, ಒಂದು ಲೋಟದಷ್ಟು ನೀರಿನಲ್ಲಿ ಹಾಕಿ ಕುದಿಸುವುದು. ಅದು ಬೆಂದು ಒಂದು ಲೋಟದಲ್ಲಿ ನೀರು ಕಾಲುಭಾಗವಾದಾಗ, ದಿನಕ್ಕೆ ಅದನ್ನು ಮೂರುಸಲ ಒಂದೊಂದು ಟೀ ಚಮಚದಷ್ಟು ದ್ರಾವಣವನ್ನು ಸೇವಿಸುವುದರಿಂದ ಒಣಕೆಮ್ಮು ಗುಣವಾಗುತ್ತದೆ ಎಂದು ತಿಳಿಸುತ್ತಾರೆ.

ಹಳ್ಳಿ ಜನರಿಗೆ ತಲೆನೋವು ಬಂದರೆ ನೆತ್ತಿಗೆ ಕೈಯೆಣ್ಣೆ ಇಟ್ಟುಕೊಂಡು, ತಲೆಗೆ ಬಟ್ಟೆ ಬಿಗಿದು ಮಲಗಿಬಿಡುತ್ತಾರೆ. ಮತ್ತು ಗಂಧ ತೇದು ಹಣೆಗೆ ಹಚ್ಚಿಕೊಳ್ಳುತ್ತಾರೆ. ತಲೆ ಸಿಡಿತ ವಿಪರೀತವಾಗಿದ್ದರೆ ಲಕ್ಕಿ ಸೊಪ್ಪನ್ನು ನೀರಿನಲ್ಲಿ ಹಾಕಿ ಕುದಿಸಿ, ರೋಗಿಯ ಮುಂದೆ ಆ ಕುದಿಯುವ ನೀರನ್ನು ಇಟ್ಟು, ರೋಗಿಗೆ ದಪ್ಪನಾದ ಕಂಬಳಿ ಹೊದಿಸುತ್ತಾರೆ. ಆವಿ ದಟ್ಟವಾಗಲೆಂದು ಮೊದಲೇ ಕೆಂಡದಲ್ಲಿ ಹಾಕಿ ಬಿಸಿಯಾಗಿರುವ ಇಟ್ಟಿಗೆಯ ಚೂರುಗಳನ್ನು ನೀರಿಗೆ ಹಾಕುತ್ತಾರೆ. ಆವಿಯಿಂದ ಬೆವರುಬಾರದಷ್ಟು ಶೀಘ್ರವಾಗಿ ರೋಗಿಯ ತಲೆನೋವು ಕಡಿಮೆಯಾಗುತ್ತದೆ, ಎನ್ನುತ್ತಾರೆ. ಶೀತದಿಂದ ಬಂದಿರುವ ತಲೆನೋವಾದರೆ ಗದ್ದೆಯಿಂದ ಹಿಡಿದು ತಂದ ಏಡಿಯ ಕಷಾಯವನ್ನು ಮಾಡಿ ಕುಡಿಸುತ್ತಾರೆ. ಈ ಪದ್ಧತಿ ಸಾಮಾನ್ಯವಾಗಿ ಕನ್ನಡ ಕ್ರೈಸ್ತರಲ್ಲಿ ರೂಢಿಯಲ್ಲಿದೆ. ಏಡಿಯನ್ನು ಶುಚಿಮಾಡಿ ಅದರೊಂದಿಗೆ ಮೆಣಸು, ಜೀರಿಗೆ, ಬೆಳ್ಳುಳ್ಳಿ, ಒಣಮೆಣಸಿನಕಾಯಿ ಇವಿಷ್ಟನ್ನೂ ಸೇರಿಸಿ ಕುಟ್ಟಿ ನೀರಿನೊಂದಿಗೆ ಬೆರೆಸಿ ರುಚಿಗೆ ತಕ್ಕಷ್ಟು ಉಪ್ಪುಹಾಕಿ ಕುದಿಸಿ, ಕಷಾಯವನ್ನು ತಯಾರಿಸಿ ಬಸಿದು ಕುಡಿಸುವುದರಿಂದ ತಲೆನೋವು ಮಾಯವಾಗುತ್ತದೆ ಎಂಬ ನಂಬಿಕೆಯಿದೆ.[12]

ಎಳೆಯ ಮಕ್ಕಳಿಗೆ ಭೇದಿಯಾದರೆ ಬಜೆಯನ್ನು ಬೆಂಕಿಯಲ್ಲಿ ಸುಟ್ಟು ತಾಯಿಯ ಹಾಲಿನಲ್ಲಿ ತೇದು ಕುಡಿಸುತ್ತಾರೆ. ಹೊಟ್ಟೆ ಉಬ್ಬಿಕೊಂಡಿದ್ದರೆ ಹೊಕ್ಕಳಿನ ಸುತ್ತ ಹರಳೆಣ್ಣೆ ಸವರಿ ವೀಳೆಯದೆಲೆಯನ್ನು ಬೆಂಕಿಯ ಮೇಲೆ ಹಿಡಿದು ಬಿಸಿಮಾಡಿ ಹೊಟ್ಟೆಯ ಮೇಲೆ ಹಾಕುತ್ತಾರೆ. ದೊಡ್ಡವರಿಗೆ ಭೇದಿಯಾದರೆ ಕುಡುಗೋಲನ್ನು ಬೆಂಕಿಯಲ್ಲಿ ಕಾಯಿಸಿ ಸ್ತ್ರೀಯಾದರೆ ಎಡ ಅಂಗಾಲಿಗೆ, ಪುರುಷನಾದರೆ ಬಲಅಂಗಾಲಿಗೆ ಬರೆ ಹಾಕುತ್ತಾರೆ. ಬಟ್ಟೆ ಜಾರಿದರೂ ಭೇದಿಯಾಗುತ್ತದೆ. ಆಗ ಹೊಕ್ಕಳಿಗೆ ಹರಳೆಣ್ಣೆ ಸವರಿ ಅಂಗಾತ ಮಲಗಿಸಿ ಅರೆಯುವ ಕಲ್ಲನ್ನು ಹೊಟ್ಟೆಯ ಮೇಲೆ ಇಡುತ್ತಾರೆ. ಅಥವಾ ಹರಳೆಣ್ಣೆ ಹಚ್ಚಿ, ನೀವಿ ಬಟ್ಟೆಯಿಂದ ನಡುವನ್ನು ಬಿಗಿದು ಕಟ್ಟುತ್ತಾರೆ.

ಆಮಶಂಕೆಯಾದರೆ ಹಲಸಿನ ಬೀಜ ಹುರಿದು ತಿನ್ನುತ್ತಾರೆ. ಹಾಲು, ಸಕ್ಕರೆ ಹಾಕದೆ ಬರೀ ಟೀ ಪುಡಿಯನ್ನು ನೀರಿನಲ್ಲಿ ಕುದಿಸಿ ಕುಡಿಯುತ್ತಾರೆ. ದಾಳಿಂಬೆಕಾಯಿ ಜಜ್ಜಿ ಕಷಾಯ ಮಾಡುವುದು, ಅಥವಾ ದಾಳಿಂಬೆ ಚಿಗುರುಗಳನ್ನು ಹಾಕಿ ಕುದಿಸಿ ಕಷಾಯ ಮಾಡುವುದೂ ಇದಕ್ಕೆ ಔಷಧಿಯಾಗಿದೆ. ಬೇಯಿಸಿದ ಸಿಹಿಗೆಣಸು ಬಾದಾಮೊಗೋಂದು ಇವೆಲ್ಲಾ ಆಮಶಂಕೆಗೆ ಬಳಸುವ ಔಷಧಿಗಳಾಗಿವೆ. ವಿಶೇಷವಾಗಿ ಆಡಿನ ಸುತ್ತುಕರುಳನ್ನು ತಂದು ಶುಚಿಮಾಡಿ ಉಪ್ಪು, ಕರಿಮೆಣಸಿನ ಪುಡಿಯನ್ನು ಹಾಕಿ ಹುರಿದು ತಿನ್ನುವುದು ಶೀಘ್ರವಾಗಿ ಆಮಶಂಕೆಯನ್ನು ನಿಲ್ಲಿಸುವ ಪ್ರಯತ್ನವಾಗಿದೆ ಎಂದು ಅನುಭವಿಗಳು ಹೇಳುತ್ತಾರೆ. ಹೆಚ್ಚು ಖರ್ಚಿಲ್ಲದೆ ವೈದ್ಯೋಪಚಾರವನ್ನು ಮುಗಿಸುವ ಈ ಬುಡಕಟ್ಟುಕ್ರೈಸ್ತರಿಗೆ ಕೈಗುಣದಲ್ಲಿ ನಂಬಿಕೆ ಇದೆ.[13]

**3.3.1 ಧಾರ್ಮಿಕ ಮತ್ತು ಮಾಂತ್ರಿಕ ವೈದ್ಯ** ಜನಪದ ವೈದ್ಯದಲ್ಲಿ ಮಂತ್ರವಿದ್ಯೆಯೂ ಪ್ರಮುಖವಾದದ್ದು. ಇದು ಪ್ರಧಾನವಾಗಿ ಮನಸ್ಸಿನ ಮೇಲೆ ಪ್ರಭಾವ ಬೀರುವುದರಿಂದ ಇದನ್ನು ಮನೋವೈದ್ಯ ಎಂದೂ ಕರೆಯುತ್ತಾರೆ. ನಂಬಿಕೆಯ ಆಧಾರದ ಮೇಲೆ ಪರಂಪರೆಯಿಂದ ಬಂದ ಪದ್ಧತಿ ಇದು. ದೃಷ್ಟಿತೆಗೆಯುವುದು, ದಾಟುಮಾಡಿಸುವುದು, ಹರಕೆಹೊರುವುದು, ಹರಕೆ ತೀರಿಸುವುದು, ದೆವ್ವ ಬಿಡಿಸುವುದು ಇವೇ ಮುಂತಾದ ವೈದ್ಯ ಪದ್ಧತಿಯಿಂದ ಮೈಸೂರಿನ ಕ್ರೈಸ್ತರೂ ಹೊರತಾಗಿಲ್ಲ. ಕ್ರೈಸ್ತರಲ್ಲಿ ದೇವರು ಮೈಮೇಲೆ ಬರುವ ಸಂಪ್ರದಾಯ ಮಾತ್ರ ಮೈಸೂರು ಜಿಲ್ಲೆಯಲ್ಲಿ, ಎಲ್ಲಿಯೂ ಕಂಡು ಬಂದಿಲ್ಲ. ಆದರೆ ದೆವ್ವ ಹಿಡಿದುಕೊಳ್ಳುವ, ಬಿಡಿಸುವ ಪದ್ಧತಿಗಳು ಇಂದಿಗೂ ರೂಢಿಯಲ್ಲಿವೆ.

ಸಾಮಾನ್ಯವಾಗಿ ಹಳ್ಳಿಗಳ ಕಡೆ ಇಂತಹ ನಂಬಿಕೆಗಳು ಹೆಚ್ಚು. ಮೈನೆರೆದ ಹೊಸದರಲ್ಲಿ ಅಥವಾ ಮದುವೆಯಾದ ಹೊಸದರಲ್ಲಿ ಹರಿಯುವ ನೀರಿರುವ ಕಡೆ, ಅರಣ್ಯ ಪ್ರದೇಶಗಳಲ್ಲಿ, ನಿರ್ಜನ ಪ್ರದೇಶಗಳಲ್ಲಿ ಅಲೆದಾಡಬಾರದು. ಹಸಿಮೈಯಲ್ಲಿ ದೆವ್ವ ಪ್ರವೇಶಿಸುತ್ತದೆ ಎಂಬ ನಂಬಿಕೆ ಇದೆ. ಬಾಣಂತಿಯಲ್ಲೂ ಒಬ್ಬೊಬ್ಬರೇ ಎದ್ದು ರಾತ್ರಿಯ ಹೊತ್ತು ಹೊರಗೆ ಬರಬಾರದು. ಗಾಳಿಸೋಂಕಾಗುತ್ತದೆಂದು ಹಿರಿಯರು ಹೇಳುತ್ತಾರೆ.

ದೆವ್ವ ಹಿಡಿದಿದೆ ಎಂದು ಗುರುತಿಸಲು ಹಲವಾರು ಕಾರಣಗಳಿರಬಹುದು. ಆಲಸ್ಯವಾಗುವುದು, ಊಟ ಸೇರದಿರುವುದು, ಹೆಚ್ಚು ಊಟಮಾಡುವುದು, ಯಾರ ಬಳಿಯೂ ಮಾತಾಡದೆ ಮಂಕಾಗಿರುವುದು, ಭೀತಿಬಿದ್ದವರಂತೆ ವರ್ತಿಸುವುದು, ಅನಾಸಕ್ತರಾಗಿರುವುದು, ಯಾವಾಗಲೂ ಏಕಾಂತವಾಗಿರಲು ಬಯಸುವುದು, ಗಾಢನಿದ್ರೆ ಮಾಡುವುದು, ಕೆಳಗೆ ಬಿದ್ದು ಕೈಕಾಲು ಒದರಿಕೊಂಡು ಬಾಯಿಯಲ್ಲಿ ಜೊಲ್ಲು ಸುರಿಸುವುದು ಇಂಥ ಅನೇಕ ಕಾರಣಗಳಿಂದ ವ್ಯಕ್ತಿಗೆ ದೆವ್ವ ಹಿಡಿದಿದೆ ಎಂದು ಗುರುತಿಸುತ್ತಾರೆ ಕೆಲವೊಮ್ಮೆ ಸಾಮಾನ್ಯ ರೋಗಗಳು ವೈದ್ಯರಿಂದ ಗುಣವಾಗದೆ ಹೋದರೆ ದೆವ್ವದ ಚೇಷ್ಟೆ ಎಂದು ಹೇಳುವುದುಂಟು. ಉದಾಹರಣೆಗೆ ಸತತವಾಗಿ ಬಿಕ್ಕಳಿಕೆ ಬರುವುದರಿಂದ ಇದು ದೆವ್ವದ ಚೇಷ್ಟೆಯೇ ಎಂಬ ನಿರ್ಧಾರಕ್ಕೆ ಬರುತ್ತಾರೆ. ಮೇಲಾಗಿ ಅವನಲ್ಲಿ ಇಲ್ಲದ ಸೂಚನೆಗಳನ್ನು ಜೊತೆಗೂಡಿಸುತ್ತಾರೆ. ಬಿಕ್ಕಳಿಕೆ ಬರುವಾಗ ಅವನು ಮಂಕಾಗಿಬಿಡುತ್ತಾನೆ, ಯಾರೊಡನೆಯೂ ಮಾತಾಡದೆ ಸುಮ್ಮನೆ ಕುಳಿತುಬಿಡುತ್ತಾನೆ ಹೀಗೆಲ್ಲಾ ಊಹಿಸುವುದುಂಟು. 

'ದೆವ್ವ ಬಿಡಿಸಿದ' ಅನೇಕ ನಿದರ್ಶನಗಳು ಬೈಬಲ್ಲಿನಲ್ಲಿ ಉಲ್ಲೇಖಿಸಿರುವುದು ಕಂಡುಬರುತ್ತದೆ. ಕ್ರೈಸ್ತರ ಆರಾಧ್ಯದೈವ ಯೇಸುಕ್ರಿಸ್ತ ಅನೇಕ ಬಾರಿ ತನ್ನ ಅಧಿಕಾರವಾಣಿಯಿಂದಲೇ ದೆವ್ವಗಳನ್ನು ಬಿಡಿಸಿರುವ ದೃಷ್ಟಾಂತಗಳಿವೆ. ದೆವ್ವ ಇದೆ ಎಂಬ ನಂಬಿಕೆ ಮೈಸೂರು ಜಿಲ್ಲೆಯ ಕ್ರೈಸ್ತರಲ್ಲಿ ಪ್ರಬಲವಾಗಿದೆ. ಇದರಿಂದ ' ದೆವ್ವ ' ಎಂದು ಗುರುತಿಸಿದ ಕೂಡಲೇ ಕ್ರೈಸ್ತರು ಆ ವ್ಯಕ್ತಿಯನ್ನು ಗುರುಗಳ ಬಳಿಗೆ ಕರೆದೊಯ್ಯುತ್ತಾರೆ. ಚರ್ಚಿನಲ್ಲಿ ಗುರುಗಳು ರೋಗಿಯ ತಲೆಯ ಮೇಲೆ ಕೈಯಿಟ್ಟು ಪ್ರಾರ್ಥನೆ ಮಾಡಿ ತೀರ್ಥ ಪ್ರೋಕ್ಷಿಸಿ ಕಳುಹಿಸಿಕೊಡುತ್ತಾರೆ. ಅಷ್ಟಕ್ಕೂ ಬಿಡುಗಡೆಯಾಗದಿದ್ದರೆ ಕೆಲವೊಮ್ಮೆ ಸಂತರಿಗೆ ಮೊರೆಹೋಗುವುದುಂಟು. ಡೋರ್ನಹಳ್ಳಿಯ ಸಂತ ಅಂತೋಣಿಯವರಿಗೆ ಹರಕೆ ಹೊತ್ತುಕೊಂಡರೆ ಎಂತಹ ದೆವ್ವವಾಗಿದ್ದರೂ ಬಿಟ್ಟು ಹೋಗುತ್ತದೆ ಎಂಬ ನಂಬಿಕೆ ಇದೆ. ಈ ನಂಬಿಕೆಯ ಆಧಾರದ ಮೇಲೆಯೇ ಸಂತ ಅಂತೋಣಿಯವರ ಪ್ರಾರ್ಥನಾ ಮನವಿ ಮಾಲೆಯಲ್ಲಿ ಸಂತನನ್ನು ' ಪಿಶಾಚಿಗಳ ದಿಗಿಲೇ ' ಎಂದು ಕೊಂಡಾಡಿದ್ದಾರೆ. ದೆವ್ವ ಹಿಡಿದವರಿಗಾಗಿ ಹರಕೆ ಹೊತ್ತುಕೊಂಡು ಹದಿಮೂರು ಮಂಗಳವಾರಗಳ ವ್ರತ ಮಾಡುವರು. ಡೋರ್ನಹಳ್ಳಿಯ ಜಾತ್ರೆಯದಿನ, ತೇರು ಹೊರಡುವ ಸಮಯದಲ್ಲಿ ಅವರನ್ನು ಕರೆದುಕೊಂಡು ಹೋದರೆ ರೋಗಿಯು ವಿಚಿತ್ರವಾಗಿ ಚೀತ್ಕಾರ ಮಾಡುತ್ತಾ ತೇರಿನ ಮುಂದೆ ಬಂದು ಬೀಳುತ್ತಾನೆ. ಆಗ ದೆವ್ವವು ಬಿಟ್ಟು ಹೋಗುತ್ತದೆ ಎಂಬ ನಂಬಿಕೆ ಇದೆ. ಇದು ಇಂದಿಗೂ ರೂಢಿಯಲ್ಲಿದೆ. ದೆವ್ವ ಹಿಡಿದವರಿಗೆ ಅಂತೋಣಿಯವರ ಕ್ಷೇತ್ರದಲ್ಲಿ ಮಂತ್ರಿಸಿದ ಎಣ್ಣೆ ಹಚ್ಚುವುದು. ಪುಣ್ಯ ಕ್ಷೇತ್ರದಿಂದ ತಂದಿರುವ ಕಪ್ಪುದಾರವನ್ನು ಕಟ್ಟುವುದು ಕ್ರಮ. ಇದರಿಂದ ದೆವ್ವ ಹತ್ತಿರ ಸುಳಿಯದಂತೆ ಆಗುತ್ತದೆ. ಈ ಸಂತರ ಜೀವನಚರಿತ್ರೆಯ ಜೊತೆಜೊತೆಗೆ ಇವರ ಪವಾಡಗಳನ್ನೂ, ದೆವ್ವಗಳನ್ನೂ ಉಚ್ಚಾಟನೆ ಮಾಡಿದ ಪ್ರಸಂಗಗಳನ್ನು ಹೇಳುವುದುಂಟು. ಸಂತ ಅಂತೋಣಿಯವರ ಹೆಸರನ್ನು ಹೇಳಿದರೆ ಸಾಕು ದೆವ್ವ ಹತ್ತಿರ ಸುಳಿಯುವುದಿಲ್ಲ ಎಂಬ ನಂಬಿಕೆ ಇದೆ.

ಸಾಮಾನ್ಯವಾಗಿ ಬುಡಕಟ್ಟು ಕ್ರೈಸ್ತರೆಲ್ಲರ ಮನೆಗಳಲ್ಲೂ ಅಂತೋಣಿಯವರ ಪ್ರತಿಮೆ ಅಥವಾ ಭಾವಚಿತ್ರವಿರುತ್ತದೆ. ಪ್ರತಿದಿನ ಮನೆಯಲ್ಲಿ ಧೂಪಹಾಕಿ, ಮೇಣದಬತ್ತಿ ಹಚ್ಚುವುದರಿಂದ ದೆವ್ವಗಳು ದೂರ ಓಡುತ್ತವೆ. ಧೂಪದ ಪರಿಮಳ ದೆವ್ವಕ್ಕೆ ಆಗುವುದಿಲ್ಲ ಎಂಬ ನಂಬಿಕೆಯಿದೆ. ಪ್ರತಿಯೊಬ್ಬ ಕ್ರೈಸ್ತನ ಮನೆಯಲ್ಲಿ ಬೈಬಲ್ ಇರಬೇಕು. ಬೈಬಲ್ ವಾಚನ ಮಾಡುವುದರಿಂದ ದೆವ್ವದ ಕಾಟ ಇರುವುದಿಲ್ಲ ಎಂದು ತಿಳಿದಿದ್ದಾರೆ.

ಸಾಮಾನ್ಯವಾಗಿ ಚಿಕ್ಕಮಕ್ಕಳಿಗೆ ದೃಷ್ಟಿ ತೆಗೆಯುತ್ತಾರೆ. ನವದಂಪತಿಗಳಿಗೆ, ಮೈನೆರೆದ ಹುಡುಗಿಯರಿಗೆ ವಿಶೇಷ ಸಂದರ್ಭಗಳಲ್ಲಿ ಮಾತ್ರ ದೃಷ್ಟಿ ತೆಗೆಯುತ್ತಾರೆ. ಮಕ್ಕಳು ಒಂದೇ ಸಮನೆ ಅಳುತ್ತಿದ್ದರೆ ಸಂಜೆ ಹೊತ್ತು ದೀಪ ಹಚ್ಚಿದ ಮೇಲೆ ಪೊರಕೆ ಕಡ್ಡಿಗಳನ್ನು ಮೂರುಸಲ ಇಳಿಸಿ ಹೊತ್ತಿಸಿ ಮೂಲೆಗಿಡುತ್ತಾರೆ. ಅದು ಚಟಪಟ ಶಬ್ದ ಮಾಡುತ್ತಾ ಉರಿಯುವಾಗ ನೆಟಿಕೆ ಮುರಿದು ಥೂ ಥೂ ಎನ್ನುತ್ತಾರೆ. ಉರಿದುಹೋದ ಕಡ್ಡಿಗಳ ಬೂದಿಯನ್ನು ತಂದು ಹಣೆಗೆ, ಎಡ ಅಂಗೈ, ಎಡ ಅಂಗಾಲಿಗೆ ಒಂದೊಂದು ಬೊಟ್ಟು ಇಡುತ್ತಾರೆ.

ದೃಷ್ಟಿ ತೆಗೆಯುವುದು ಹಲವಾರು ಕಾರಣಗಳಿಗಾಗಿ ಕಾಣಿಸಿಕೊಂಡಿದೆ. ಮಕ್ಕಳಿಗೆ ಜ್ವರ ಕಡಿಮೆಯಾಗದಿದ್ದರೆ 'ನಂಜು' ತೆಗೆಸುತ್ತಾರೆ. ಅರಿಸಿನದ ನೀರಿನಲ್ಲಿ ಸುಣ್ಣಬೆರೆಸಿ ಕೆಂಪಗೆ ಮಾಡಿಕೊಂಡು, ಇದ್ದಿಲಿನ ಚೂರು, ಒಣಮೆಣಸಿನಕಾಯಿ, ಮೂರುತೂತು ಮಾಡಿದ ಎಲೆ, ಇದು ? ಒಂದು ನಾಣ್ಯ ಇವೆಲ್ಲವನ್ನೂ ಮಗುವಿಗೆ ನಿವಾಳಿಸಿ ಕೆನ್ನೀರಿಗೆ ಹಾಕಿ ಆ ನೀರನ್ನು ಮೂರು ಹಾದಿ ಕೂಡುವಲ್ಲಿ ಚೆಲ್ಲಿ ಬರುತ್ತಾರೆ. ಅವರು ಕೈಕಾಲುಮುಖ ತೊಳೆದು ಒಳಗೆ ಬರುವತನಕ ಮನೆಯ ಇತರ ಮಕ್ಕಳು, ಸದಸ್ಯರು ಅವರನ್ನು ಎದಿರುಗೊಳ್ಳಬಾರದೆಂಬುದು ನಿಯಮ.

ಸಾಸಿವೆಯನ್ನು ಮಗುವಿಗೆ ನಿವಾಳಿಸಿ ಒಲೆಗೆ ಹಾಕುವುದು ರೂಢಿಯಲ್ಲಿದೆ. ದುರ್ವಾಸನೆ ಬಂದರೆ ಮಗುವಿಗೆ ದೃಷ್ಟಿ ತಗಲಿರುವುದು ಸತ್ಯ ಎಂದು ನಂಬುತ್ತಾರೆ. ಮೆಣಸಿನಕಾಯಿಯನ್ನು ನಿವಾಳಿಸಿ ಬೆಂಕಿಗೆ ಹಾಕಿದಾಗ ಘಾಟು ಬರದಿದ್ದರೆ ದೃಷ್ಟಿ ತಗಲಿದೆ ಎಂದು ತಿಳಿಯುತ್ತಾರೆ. ಇವೆಲ್ಲಾ ಪದ್ಧತಿಗಳೂ ಮೂಲತಃ ಹಿಂದುಗಳದೇ ಆಗಿದ್ದು ಮತಾಂತರದ ಅನಂತರವೂ ಅದೇ ಪದ್ಧತಿಗಳನ್ನೇ ರೂಢಿಯಲ್ಲಿಟ್ಟುಕೊಂಡಿರುವುದು ಕಂಡು ಬರುತ್ತದೆ. ವಾಸ್ತವವಾಗಿ ಕ್ರೈಸ್ತರು ಇಂಥ ಅಸಮರ್ಥನೀಯ ಪದ್ಧತಿಗಳನ್ನು ಆಚರಿಸುವುದು ಧರ್ಮಕ್ಕೆ ವಿರುದ್ಧವೆಂದು ಶಾಸ್ತ್ರಗಳು ಹೇಳಿದೆಯಾದರೂ ಬುಡಕಟ್ಟು ಕ್ರೈಸ್ತರಲ್ಲಿ ಪರಂಪರಾನುಗತವಾಗಿ ಸಾಗಿ ಬಂದ ಸಂಪ್ರದಾಯಗಳಲ್ಲಿ ಅಚಲ ನಂಬಿಕೆಯುಳ್ಳವರಾಗಿದ್ದಾರೆ.

ಬೆನ್ನು ಉಳುಕಿದ್ದರೆ, ಆ ವ್ಯಕ್ತಿಯನ್ನು ಮನೆಯ ಹೊಸ್ತಿಲ ಮೇಲೆ ಕೂರಿಸಿ ಚೊಚ್ಚಲು ಮಕ್ಕಳ ಕಾಲಿನಿಂದ ಮೂರುಸಲ ನೀವಳಿಸುವುದು. ಹೀಗೆ ಮೂರು ದಿನಗಳ ಕಾಲ ಮಾಡಿದರೆ ಉಳುಕು ಸರಿಹೋಗುತ್ತದೆ,[14] ಎಂದು ನಂಬುತ್ತಾರೆ.

ಮಗು ಎಡವಿ ಬಿದ್ದಾಗ, ಮಗುವನ್ನು ಅಲ್ಲೇ ನಿಲ್ಲಿಸಿ ಮಣ್ಣಿನ ಇಂಟೆಯೊಂದನ್ನು ತಂದು ಮಗುವಿಗೆ ಮೂರುಸಲ ಇಳಿ ತೆಗೆದು ಆ ಸ್ಥಳದಲ್ಲಿ ಒಡೆಯುತ್ತಾರೆ. ಮತ್ತು ಒಂದು ತಂಬಿಗೆ ನೀರನ್ನು ಮಗುವಿನ ತಲೆಗೆ ನೀವಳಿಸಿ ಅಲ್ಲಿ ಚೆಲ್ಲುತ್ತಾರೆ. ಸಿಡುಬು, ದಡಾರ ಕಾಯಿಲೆಗಳು ಕಾಣಿಸಿಕೊಳ್ಳುವ ಮುನ್ನ ಸತತ ಜ್ವರ ಬರುತ್ತದೆ. ಕಾರಣ ತಿಳಿಯದೆ ಜ್ವರಕ್ಕೆ

ಔಷಧ ಕೊಡಿಸುತ್ತಿದ್ದರೂ, ಸಿಡುಬು, ದಡಾರದ ಸೂಚನೆಗಳು ಕಂಡು ಬಂದರೆ ಔಷಧಿಯನ್ನು ನಿಲ್ಲಿಸಿ ಬಿಡುತ್ತಾರೆ. ಆ ಸೋಂಕು ರೋಗಗಳನ್ನು ' ಅಮ್ಮಾ ' ಎಂದೇ ಕರೆಯುತ್ತಾರೆ. ಹಿಂದುಗಳು ಮಾರಮ್ಮನಿಗೆ ತಂಪು ಮಾಡಿಸುವ ಪದ್ಧತಿಯನ್ನು ಇಲ್ಲಿ ಸ್ಮರಿಸಬಹುದು. ಕ್ರೈಸ್ತರು ಮಾರಮ್ಮನ ಪೂಜೆ ಮಾಡದಿದ್ದರೂ ಸಿಡುಬು, ದಡಾರ ಬಂದಾಗ ಹಿಂದೂಗಳು ಮಾರಮ್ಮನಿಗೆ ಬಹಳ ಭಯಭಕ್ತಿಯಿಂದ ನಡೆದುಕೊಳ್ಳುತ್ತಾರೆ. ರೋಗಿ ಗುಣಮುಖನಾಗುವತನಕ ಪೊರಕೆಯಿಂದ ಮನೆ ಕಸಗುಡಿಸುವುದಿಲ್ಲ, ಮೆಣಸಿನಕಾಯಿ ಹುರಿಯುವುದಿಲ್ಲ. ಮಾಂಸಾಹಾರ ಸೇವಿಸುವುದಿಲ್ಲ, ಮುಟ್ಟಾದವರು, ಸೂತಕದವರು ಮನೆಗೆ ಬರುವುದಿಲ್ಲ. ಬಾಗಿಲಲ್ಲಿ ಸಗಣಿ ಇಡುವುದು, ಬೇವಿನಸೊಪ್ಪು ಇಡುವಂತೆ ಹಿಂದೂ ಸಂಪ್ರದಾಯಗಳನ್ನೇ ಅನುಸರಿಸುತ್ತಾರೆ ಆದರೆ ಇವಕ್ಕೆಲ್ಲಾ ವೈಜ್ಞಾನಿಕ ಕಾರಣಗಳನ್ನು ನೀಡಿ ಇದಾವುದೂ ಮೂಢನಂಬಿಕೆ ಅಲ್ಲ; ರೋಗಿ ಶೀಘ್ರವಾಗಿ ಗುಣಮುಖನಾಗಲು ಇವೆಲ್ಲದರ ಅವಶ್ಯಕತೆ ಇದೆ ಎಂದು ಸಾಬೀತಾಗಿದೆ (ದೇಜಗೌ 1986:18) ಅಂತೂ ತಿಳಿದೋ ತಿಳಿಯದೆಯೋ ಮೈಸೂರು ಜಿಲ್ಲೆಯ ಹಳ್ಳಿಗಳಲ್ಲಿ ನೆಲಸಿರುವ ಕ್ರೈಸ್ತರು ಇವನ್ನು ಪಾಲಿಸಿಕೊಂಡು ಬಂದಿದ್ದಾರೆ. ರೋಗಿ ಗುಣಮುಖನಾದ ಮೇಲೆ ಒಂಬತ್ತು ಅಥವಾ ಹನ್ನೊಂದು ದಿನಗಳಿಗೆ ಸ್ನಾನಮಾಡಿಸಿ ಮಾರಿಗುಡಿಗೆ ಕರೆದೊಯ್ಯುವ ಪದ್ಧತಿ ಹಿಂದೂಗಳಲ್ಲಿದೆ. ಆದರೆ ಕ್ರೈಸ್ತರು ಇದೊಂದು ವಿಷಯದಲ್ಲಿ ಬದಲಾವಣೆ ಮಾಡಿಕೊಂಡಿದ್ದಾರೆ. ಬುಡಕಟ್ಟುಕ್ರೈಸ್ತರು ಸಂತ ಸೆಬಸ್ತಿಯಾನರಿಗೆ ಹರಕೆ ಕಟ್ಟಿಕೊಳ್ಳುತ್ತಾರೆ. ಗುಣವಾದ ಬಳಿಕ ಮೆಣಸು, ಹುರಿಗಡಲೆಯನ್ನು ತೆಗೆದುಕೊಂಡು ಹೋಗಿ ಪೂಜಾವೇಳೆಯಲ್ಲಿ ಅದನ್ನು ಎರಚುತ್ತಾರೆ. ಸಂತನಿಗೆ ಹೂ, ಮೇಣದಬತ್ತಿಗಳನ್ನು ಸಲ್ಲಿಸಿ ಬರುತ್ತಾರೆ.

**3.3.2 ಮಾಟ ಶೂನ್ಯ ಮಾಡಿಸುವುದು** ಇದು ಕ್ರೈಸ್ತ ಸಂಪ್ರದಾಯಕ್ಕೆ ವಿರುದ್ಧವಾದದ್ದು. ಆದರೆ ವೈದ್ಯ ವಿಫಲವಾದಾಗ ಯಾರೋ ಮಾಟ ಮಾಡಿಸಿರಬಹುದೆಂದು ಊಹಿಸಿ, ಇತರರ ಬಳಿಗೆ ಹೋಗಿ ಪ್ರತಿಯಾಗಿ ಮಾಟ ಮಾಡಿಸುವವರೂ ಇದ್ದಾರೆ. ಧಾರ್ಮಿಕ ವಿಧಿಗಳ ಪ್ರಕಾರ ಇದು ಪಾಪಕೃತ್ಯ. ಶಕುನಗಳನ್ನೂ, ಮಾಟಮಂತ್ರಗಳನ್ನೂ ಕ್ರೈಸ್ತರು ನಂಬಿದರೆ ದೇವರ ಕಟ್ಟಳೆಗೆ ವಿರುದ್ಧವಾದ ಪಾಪಗಳನ್ನು ಕಟ್ಟಿಕೊಳ್ಳುವರೆಂಬ ನಂಬಿಕೆ ಇದೆ. ಮಾಟ ಮಾಡಿಸುವವರು, ಮಾಟಕ್ಕೆ ಪರಿಹಾರ ಮಾಡಿಸುವವರು ತಾವು ಮಾಡುತ್ತಿರುವುದು ತಪ್ಪು ಎಂಬ ಪರಿಜ್ಞಾನವಿರುವುದರಿಂದ ಇತರ ಕ್ರೈಸ್ತರ ಕಣ್ಣಿಗೆ ಬೀಳದಂತೆ ಗೋಪ್ಯವಾಗಿಡುತ್ತಾರೆ.

ಅನೇಕರು ಮಾಟಮಂತ್ರಗಳಿಗೆ ಪರಿಹಾರವಾಗಿ ಡೋರ್ನಹಳ್ಳಿಯ ಸಂತ ಅಂತೋಣಿಯವರಿಗೆ ಹರಕೆ ಹೊರುತ್ತಾರೆ. ವಾಸಿಯಾದರೆ ಮುಡಿಕೊಡುವುದು, ಭಿಕ್ಷುಕರಿಗೆ ಅನ್ನದಾನ ಮಾಡುವುದು ಇತ್ಯಾದಿಗಳ ರೂಪದಲ್ಲಿ ಹರಕೆ ತೀರಿಸುತ್ತಾರೆ. ಕೊಂಕಣಿ ಕ್ರೈಸ್ತರು ಸಂತ ಜೂಡ್ ತದ್ದೆಯುಸ್ ಎಂಬ ಸಂತರಿಗೆ ಹರಕೆ ಕಟ್ಟಿಕೊಳ್ಳುತ್ತಾರೆ. ಈ ಸಂತನ ಪುಣ್ಯಕ್ಷೇತ್ರ ಮಂಗಳೂರಿನ ಪಕ್ಷಿಕೆರೆಯಲ್ಲಿದೆ. ಈ ಸಂತನ ಅನುಗ್ರಹದಿಂದ ಮಾಟಮಂತ್ರಗಳು ವಿಫಲವಾಗುತ್ತವೆ ಎಂಬ ನಂಬಿಕೆ ಇದೆ.[15] ಕ್ರೈಸ್ತರ ಜೀವನದಲ್ಲಿ ಮಾಟಮಾಡಿಸುವುದು, ಕಣಿ ಶಕುನಗಳನ್ನು ಕೇಳುವುದು ಇತ್ಯಾದಿಗಳಿಗೆ ಪ್ರಾಶಸ್ತ್ಯವಿಲ್ಲ. ದೇವರ ಮೇಲಿನ ನಂಬಿಕೆಯೇ ಎಲ್ಲಕ್ಕೂ ಸಿದ್ಧೌಷಧಿ ಎಂಬ ಭರವಸೆ ಇದೆ.

ಮುಡಿಕೊಡುವುದು ಕ್ರೈಸ್ತಧರ್ಮದ ಸಂಪ್ರದಾಯವಲ್ಲ ಆದರೂ ಮೈಸೂರಿನ ಕ್ರೈಸ್ತರು ಡೋರ್ನಹಳ್ಳಿಯ ಸಂತ ಅಂತೋಣಿಯವರಿಗೆ ಜಾತ್ರೆಯ ಸಮಯದಲ್ಲಿ ಮುಡಿಕೊಡುವ ಪದ್ಧತಿಯನ್ನು ಇಟ್ಟುಕೊಂಡಿದ್ದಾರೆ. ಸಣ್ಣಪುಟ್ಟ ಕಾಯಿಲೆಗಳಿಗೆ ಗೃಹಿಣಿಯರು ಮನೆಯಲ್ಲೇ ದೇವರಿಗೆ ಹರಕೆಹೊತ್ತು ಕಾಣಿಕೆ[16] ಕಟ್ಟಿಕೊಳ್ಳುತ್ತಾರೆ. ಹದಿಮೂರು ದಿನಗಳ ಅಥವಾ

ಹದಿಮೂರು ವಾರಗಳತನಕ ವ್ರತಮಾಡಿ ಹದಿಮೂರನೇ ದಿನ ಅಥವಾ ಹದಿಮೂರನೇ ವಾರ ಕಾಣಿಕೆಯನ್ನು ಬಿಚ್ಚಿ, ಚರ್ಚಿಗೆ ಹೋಗಿ ಪ್ರಾರ್ಥನೆ, ಹರಕೆಗಳನ್ನು ಸಲ್ಲಿಸಿ, ಕಾಣಿಕೆ ಹಣವನ್ನು ಹುಂಡಿಗೆ ಹಾಕಿ, ಸಂತನ ಹೆಸರಿನಲ್ಲಿ ಜನರಿಗೆ ಬ್ರೆಡ್ ಅಥವಾ ಬನ್ ಹಂಚುವ ಪದ್ಧತಿಯಿದೆ.

ದೃಷ್ಟಿ ಇಳಿಸುವುದು, ದಾಟು ಮಾಡಿಸುವುದು, ಇತ್ಯಾದಿಗಳು ನಿಷಿದ್ಧ ಎಂಬುದನ್ನು ಅರಿತಿದ್ದರೂ ಬುಡಕಟ್ಟು ಕ್ರೈಸ್ತರು ತಮ್ಮ ಹಿರಿಯರು ರೂಢಿಸಿಕೊಂಡು ಬಂದಿರುವುದನ್ನು ಬಿಡುತ್ತಿಲ್ಲ. ಅದರಲ್ಲೇ ಗುಣವಾಗುತ್ತದೆಂಬ ನಂಬಿಕೆ ಉಳ್ಳವರು. ಕೆನ್ನೀರು ಮಾಡುವುದು, ವೀಳೆಯದೆಲೆಗೆ ಮುಕ್ಕಣ್ಣಿನಂತೆ ಮೂರು ತೂತು ಮಾಡುವುದು, ಬಣ್ಣದ ಅನ್ನದುಂಡೆಗಳನ್ನು ಮಾಡುವುದು, ಮೂರು ಹಾದಿ ಸೇರುವಲ್ಲಿ ಇಳಿತೆಗೆದ ನೀರನ್ನು ಚೆಲ್ಲುವುದು ಇವೆಲ್ಲಾ ಹಿಂದೂ ಸಂಪ್ರದಾಯಗಳೇ ಆಗಿದ್ದರೂ ತಮಗರಿವಿಲ್ಲದಂತೆಯೇ ಇಲ್ಲಿನ ಕೊರಗ ಬುಡಕಟ್ಟು ಕ್ರೈಸ್ತರು ಇವುಗಳನ್ನು ಅನುಸರಿಸಿಕೊಂಡು ಬಂದಿದ್ದಾರೆ.

ಬುಡಕಟ್ಟು ಕ್ರೈಸ್ತರು ತಮ್ಮ ನೆರೆಹೊರೆಯವರೊಡನೆ ನಿಕಟ ಸಂಪರ್ಕವನ್ನು ಹೊಂದಿದ್ದಾರೆ. ಸುಖದುಃಖಗಳಲ್ಲಿ ಭೇದಭಾವವಿಲ್ಲದೆ ಮುನ್ನುಗ್ಗಿ ಸಮಭಾಗಿಗಳಾಗುತ್ತಾರೆ. ಮನೆಯಲ್ಲೇ ಹೆರಿಗೆ ಮಾಡಿಸುವ ಸಂದರ್ಭ ಒದಗಿದಾಗ ಹಿಂದು, ಕ್ರೈಸ್ತರೆಂಬ ಭಾವನೆಯನ್ನು ತೊರೆದು ಪ್ರತಿಫಲಾಪೇಕ್ಷೆಯಿಲ್ಲದೆ ಸಹಾಯಕ್ಕೆ ಬರುತ್ತಾರೆ.

**3.4 ವಸತಿ** ನಗರವನ್ನು ಬಿಟ್ಟರೆ, ಹಳ್ಳಿಗಳಲ್ಲಿ ನೆಲೆಸಿರುವ ಕೊರಗ ಮತ್ತು ಸಿದ್ಧಿ ಕ್ರೈಸ್ತರಲ್ಲಿ ಅನೇಕ ಮಂದಿ ಸ್ವಂತ ಮನೆಗಳನ್ನು ಹೊಂದಿದ್ದಾರೆ. ಇದಕ್ಕೆ ನಿರ್ದಿಷ್ಟವಾದ ಕಾರಣಗಳೂ ಇವೆ. ಭಾರತದ ಸ್ವಾತಂತ್ರ್ಯಕ್ಕೆ ಮುನ್ನ ಧರ್ಮಪ್ರಚಾರಕ್ಕೆಂದು ಬಂದ ಪಾದ್ರಿಗಳು ಈ ಹಳ್ಳಿಗಳಲ್ಲಿ ನೆಲೆಸಿ ಜನರ ದಾರಿದ್ರ್ಯವನ್ನು ಕಂಡು ಅವರಿಗೆ ವಸತಿ, ಜಮೀನುಗಳನ್ನು ದೊರಕಿಸಿಕೊಟ್ಟದ್ದಾರೆ.[17] ಅನೇಕರನ್ನು ಜೀತ ವಿಮುಕ್ತಗೊಳಿಸಿ ಜೀವನೋಪಾಯಕ್ಕೆ ಮಾರ್ಗಗಳನ್ನು ತೋರಿದ್ದಾರೆ. ಹೀಗೆ ವಸತಿ ಸೌಕರ್ಯವನ್ನು ಪಡೆದು ಜನರು ತಮ್ಮದೇ ಆದ ಮನೆಗಳನ್ನು ಹೊಂದಿದ್ದಾರೆ.

**3.4.1 ಸಾಂಪ್ರಾದಾಯಕ ಶೈಲಿ** ಗುದ್ದಲಿಪೂಜೆ ಸಂಪ್ರದಾಯ ಕೊರಗ ಮತ್ತು ಸಿದ್ಧಿ ಕ್ರೈಸ್ತರಲ್ಲಿದೆ. ಅಂದು ಗುರುಗಳನ್ನು (Priests) ಕರೆತಂದು ಮನೆಕಟ್ಟಲಿರುವ ಸ್ಥಳವನ್ನು ತೀರ್ಥದಿಂದ ಪವಿತ್ರೀಕರಿಸಿ, ಪ್ರಾರ್ಥನೆ ಸಲ್ಲಿಸುತ್ತಾರೆ. ಮನೆಯ ಯಜಮಾನ ಮೊದಲು ಗುದ್ದಲಿಯಿಂದ ಮೂರು ಸಲ ನೆಲವನ್ನು ಅಗೆಯುತ್ತಾನೆ. ಅನಂತರ ಬಂದಿರುವವರಿಗೆಲ್ಲಾ ಸಿಹಿ ಹಂಚುತ್ತಾರೆ. ಬಳಿಕ ಅವರವರ ಆರ್ಥಿಕ ಸ್ಥಿತಿಗತಿಗೆ ಅನುಗುಣವಾಗಿ ಇಟ್ಟಿಗೆ ಮಣ್ಣು ಗೋಡೆ ನಿರ್ಮಿಸುವರು ಅವರು ಬರಿಸುವ ಮರಗಳು ಸಹ ಅವರ ಹಣಕಾಸಿನ ಅನುಕೂಲವನ್ನು ಅವಲಂಬಿಸಿದೆ. ಸಾಮಾನ್ಯವಾಗಿ ಕ್ರೈಸ್ತರಲ್ಲಿ ಪಾಶ್ಚಿಮಾತ್ಯ ಅನುಕರಣೆ ಹೆಚ್ಚು ಅಂತೆಯೇ ಮನೆಯಲ್ಲಿ ಸಾನ್ನಗೃಹ, ಶೌಚಾಲಯದ ವ್ಯವಸ್ಥೆ ಮಾಡಿಕೊಳ್ಳುವುದು ಕಂಡುಬರುತ್ತದೆ.
-ಹಿಂದೂಗಳಲ್ಲಿರುವಂತೆ ಇವರು ಸಹಾ ಮನೆಗೆ ಬಾಗಿಲು ನಿಲ್ಲಿಸುವಾಗ ವಿಶೇಷ ಪ್ರಾರ್ಥನೆ ಹಮ್ಮಿಕೊಳ್ಳುವುದುಂಟು.

**3.4.2 ಆಧುನಿಕ ಶೈಲಿ** ಬುಡಕಟ್ಟು ಕ್ರೈಸ್ತರು ವಾಸಿಸುವ ಮನೆಗಳ ನಿರ್ಮಾಣ ಅವರ ವೃತ್ತಿಗಳನ್ನು ಅವಲಂಬಿಸಿರುತ್ತದೆ. ರೈತಾಪಿ ಜನರು ತಮ್ಮ ವೃತ್ತಿಗೆ ಅನುಕೂಲವಾಗುವಂತೆ ವಿಸ್ತಾರವಾದ ಅಂಗಳ, ಹಿತ್ತಲುಗಳಿರುವಂತೆ ಮನೆಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಇತರ

ಉದ್ಯೋಗಗಳಲ್ಲಿ ತೊಡಗಿರುವವರು ನಾಜುಕಾದ ಪ್ರತ್ಯೇಕ ಕೊಠಡಿಗಳನ್ನೊಳಗೊಂಡ ಮನೆಗಳನ್ನು ಕಟ್ಟಿಸಿಕೊಳ್ಳುವುದು ಸಾಮಾನ್ಯವಾಗಿ ಕಂಡುಬರುತ್ತದೆ.

**ಅಡಿ ಟಿಪ್ಪಣಿಗಳು**

1. ಹಿಂದೆ ಕಾಣಿಕೆ ಹಣ ಒಂದುಕಾಲು ರೂಪಾಯಿಯಾಗಿತ್ತು. ಈಗ ಹತ್ತು ರೂಪಾಯಿಗಳಾಗಿವೆ.
2. ತಮಿಳು ನಾಡಿನ ನಾಗಪಟ್ಟಣದಲ್ಲಿರುವ ಒಂದು ಗ್ರಾಮ.
3. ವಕ್ತೃ: ಚೌರಿಯಮ್ಮ ವಯಸ್ಸು 60, ನಾಗನಹಳ್ಳಿ.
4. ಜಯಮ್ಮ.ವಯಸ್ಸು 58, ಡೋರ್ನಹಳ್ಳಿ.
5. ಹುನಿಸುವಿಕೆ: ಪ್ರತಿದಿನ ಅಕ್ಕಿದಿನ ಅಕ್ಕಿ ತೊಳೆದ ನೀರಿನಲ್ಲಿ ನೆನೆಹಾಕಿ ಮೂರನೇ ದಿನ ಆ ನೀರನ್ನು ಚೆಲ್ಲಿ ಮತ್ತೆ ನೆನೆಸುವುದು. ಹಾಗೆ ಮಾಡಿದರೆ ಅದರ ಉಷ್ಣಾಂಶ ಕಡಿಮೆಯಾಗುತ್ತದೆ. 'ಒಗರು' ಇರುವುದಿಲ್ಲ.
6. ವಕ್ತೃ: ಗ್ರೇಸ್‌ಪೆರ್ನಾಂಡಿಸ್, ವಯಸ್ಸು 50, ಮೈಸೂರು.
7. ವಕ್ತೃ: ಶಾಂತಮ್ಮ ವಯಸ್ಸು 70, ಶಾಂತಿಪುರ.
8. ಬೇವಿನ ಸೊಪ್ಪು, ಲಕ್ಕಿಸೊಪ್ಪು, ತೈಲದ ಎಲೆ.
9. ಗ್ರೇಸ್‌ಫೆರ್ನಾಂಡಿಸ್, ವಯಸ್ಸು - 50, ಮೈಸೂರು.
10. ಮರಿಯಮ್ಮ, ವಯಸ್ಸು - 60, ನಾಗನಹಳ್ಳಿ, ಎಚ್.ಡಿ.ಕೋಟೆ.
11. ವಕ್ತೃ: 1. ಜವನಾಮಮ್ಮ, ವಯಸ್ಸು 62, ಡೋರ್ನಹಳ್ಳಿ.
12. ಮಾರ್ತಮ್ಮ, ವಯಸ್ಸು 60, ಕೂಡಲೂರು, ಹುಣಸೂರು ತಾಲ್ಲೂಕು.
13. ಮರಿಯಾನ್ ಸಂತಾನ್ ಸಿದ್ಧಿ, ಉಗ್ಗಿನಕೇರಿ, ಮುಂಡಗೋಡ ತಾಲ್ಲೂಕು.
14. ವಕ್ತೃ: ಸೈಮನ್ ಸಿದ್ಧಿ, ಉಗ್ಗಿನಕೇರಿ, ಮುಂಡಗೋಡ ತಾಲ್ಲುಕು.
15. ವಕ್ತೃ: ಸಿಸ್ಟರ್ ನಿವೇದಿತ, ಮಂಗಳೂರು,
16. ಕಾಣಿಕೆ : ಹಿಂದೆ ಐದು ಪೈಸೆಯ ನಾಣ್ಯವನ್ನು ಬಿಳಿ ಬಟ್ಟೆಗೆ ಕಟ್ಟಿ ಅದನ್ನು ಸಂತರ ಪ್ರತಿಮೆಯ ಪಾದಕ್ಕೆ ಅಥವಾ ಫೋಟೋಗೆ ಕಟ್ಟುವುದು.
17. ಸುನೀಲ್ ಸಿದ್ಧಿ, ವಯಸ್ಸು 25 ಶಾಲಾ ಶಿಕ್ಷಕ, ಮುಂಡಗೋಡ.
18. ಗಚ್ಚು : ಕಲ್ಲು ಹಾಕಿಸಿ, ಸುಣ್ಣ ಹುಯ್ಸಿಸಿ ಉಜ್ಜುವುದು.

## ಅಧ್ಯಾಯ – ನಾಲ್ಕು

### ಬುಡಕಟ್ಟು ಕ್ರೈಸ್ತರ ಜೀವನಾವರ್ತನ ಸಂಬಂಧಿ ಸಂಪ್ರದಾಯ ಮತ್ತು ಆಚರಣೆಗಳು

ಹುಟ್ಟು–ಸಾವು ಪ್ರತಿಯೊಬ್ಬ ಮಾನವನ ಜೀವನದ ಸಹಜ ಪಕ್ರಿಯೆಗಳು ಗಳು. ಇವಕ್ಕೆ ಸಂಬಂಧಿಸಿದಂತೆ ಹಲವಾರು ವಿಧಿ, ಉಪಾಸನೆಗಳು, ನಿಷಿದ್ಧಗಳು ಎಲ್ಲಾ ಸಮೂಹಗಳಲ್ಲೂ ಕಂಡುಬರುವಂತೆ ಕೊರಗ ಮತ್ತು ಸಿದ್ದಿ ಬುಡಕಟ್ಟು ಕ್ರೈಸ್ತರಲ್ಲಿ ಅವರದೇಯಾದ ಜೀವನಾವರ್ತನ ಆಚರಣೆಗಳು ರೂಢಿಯಲ್ಲಿವೆ. ಆದರೆ ಪ್ರತಿ ಸಮೂಹದಲ್ಲೂ ಗುರುತಿಸುವಂತಹ ಸಾಮ್ಯತೆ–ಭಿನ್ನತೆಗಳೂ ಕಂಡು ಬರುತ್ತದೆ. ಅಂತೆಯೇ ಮೈಸೂರು ಜಿಲ್ಲೆಯಲ್ಲಿ ನೆಲೆಸಿರುವ ಕ್ರೈಸ್ತರಲ್ಲೂ ಅವರಿಗೇ ವಿಶಿಷ್ಟವಾದ ವಿಧಿ ಆಚರಣೆಗಳೂ, ನಂಬಿಕೆಗಳೂ ಕಂಡು ಬಂದಿವೆ. ಅಧ್ಯಯನದ–ಅನುಕೂಲಕ್ಕಾಗಿ ಈ ಕೆಳಗಿನಂತೆ ಉಪಶಿರ್ಷಿಕೆಗಳಾಗಿ ವಿಂಗಡಿಸಿಕೊಳ್ಳಲಾಗಿದೆ:

ಅ) ಜನನ ಸಂಸ್ಕಾರ
ಆ) ಪ್ರೌಢ ಸಂಸ್ಕಾರ
ಇ) ವಿವಾಹ ಸಂಸ್ಕಾರ
ಈ) ಮರಣ ಸಂಸ್ಕಾರ

**4.1 ಜನನ ಸಂಸ್ಕಾರ** 'ನಪುತ್ರಸ್ಯ ಗತಿರ್ನಾಸ್ತಿ' ಎಂಬ ಪುರಾಣದ ಮಾತು ಕ್ರೈಸ್ತರಿಗೆ ಅನ್ವಯಿಸುವುದಿಲ್ಲ ವಾದರೂ ತಾಯಿಯಾಗುವ ಆನಂದ, ತೃಪ್ತಿ ಪ್ರತಿಯೊಬ್ಬ ಸ್ತ್ರೀಯಲ್ಲೂ ಕಂಡುಬರುವುದು ಅತಿಶಯವೇನಲ್ಲ. ದೇವರು ಗಂಡು–ಹೆಣ್ಣನ್ನು ಸೃಷ್ಟಿಸಿದ ಉದ್ದೇಶ ಆನಂದ ಹೊಂದಲು ಹಾಗೂ ಸಂತಾನಾಭಿವೃದ್ಧಿಯಾಗಲು, ಮಾನವನಿಗೆ ಮಕ್ಕಳು ದೈವದತ್ತವಾದ ವರ ಎಂಬುದು ಈ ಜನರ ಅಭಿಪ್ರಾಯ.

ಮದುವೆಯಾದ ವರ್ಷದಲ್ಲೇ ಮಗು ಜನಿಸಿದರೆ ಆಕೆ ಫಲಭರಿತಳೆಂದು ಕ್ರೈಸ್ತರು ನಂಬುತ್ತಾರೆ. ಮದುವೆಯಾದ ಒಂದೆರಡು ವರ್ಷಗಳಲ್ಲಿ ಮಗು ಜನಿಸದಿದ್ದರೆ ಹರಕೆ ಹೊರುವ ಪದ್ಧತಿ ಇವರಲ್ಲಿ ರೂಢಿಯಲ್ಲಿದೆ. ಮೈಸೂರು ಜಿಲ್ಲೆಯ ಕ್ರೈಸ್ತರು ಕೆ.ಆರ್.ನಗರದ ಸಮೀಪದ ಡೋರ್ನಹಳ್ಳಿಯ ಸಂತ ಅಂತೋಣಿಯವರಿಗೆ ಹರಕೆ ಕಟ್ಟಿಕೊಂಡು ಮಕ್ಕಳನ್ನು ಪಡೆದ ಮೇಲೆ ಬೆಳ್ಳಿತೊಟ್ಟಿಲನ್ನು ಅರ್ಪಿಸುವುದು ಪದ್ಧತಿಯಾಗಿದೆ.ಸಿದ್ದಿ ಕ್ರಿಸ್ತರು ಹರಿಹರದ ಆರೋಗ್ಯಮಾತೆಗೆ ,ಕೊರಗ ಕ್ರೈಸ್ತರು ಮಂಗಳೂರಿನ ಕಾರ್ಕಳದ ಸಂತ ಲಾರೆನ್ಸ್‌ರಿಗೆ ಹರಕೆ ಕಟ್ಟುವ ಪದ್ಧತಿಯುಂಟು ಹಾಗೆಯೇ .

ಚೊಚ್ಚಲ ಹೆರಿಗೆ ತವರಿನಲ್ಲೇ ಆಗಬೇಕೆಂಬ ನಿಯಮ ಮೈಸೂರು ಜಿಲ್ಲೆಯ ಕ್ರೈಸ್ತರಲ್ಲಿ ರೂಢಿಯಲ್ಲಿದೆ. ಗರ್ಭಿಣಿಗೆ ಏಳು ತಿಂಗಳು ತುಂಬಿದಾಗ 'ಬಸಿರೊಸಗೆ' (ಸೀಮಂತ) ಯನ್ನು ಮಾಡುವ ಪದ್ಧತಿ ಕನ್ನಡ ಕ್ರೈಸ್ತರಲ್ಲಿ ರೂಢಿಯಲ್ಲಿದೆ. ಸಾಮಾನ್ಯವಾಗಿ ಹಳ್ಳಿಗಳಲ್ಲಿ ಹೆರಿಗೆಗೆ ಆಸ್ಪತ್ರೆಗಳ ಮೊರೆ ಹೋಗುವುದಿಲ್ಲ. ಅಂತೆಯೇ ಸೂಲಗಿತ್ತಿಯರಿಗೂ ಅಭಾವವಿಲ್ಲ. ಪ್ರಸವವೇಳೆ ಸಮೀಪಿಸಿದಾಗ ಪುಣ್ಯಕ್ಷೇತ್ರಗಳಿಂದ ತಂದಿರಿಸಿದ್ದ ಎಣ್ಣೆಯನ್ನು ಗರ್ಭಿಣಿಯ ಹೊಟ್ಟೆಯ ಮೇಲೆ ಹೆಚ್ಚು ಹೆರಿಗೆ ಸರಾಗವಾಗಿ ಆಗಲಿ ಎಂದು ಪ್ರಾರ್ಥಿಸಿ, ಮುಂದಿನ ಕೆಲಸವನ್ನು ಪ್ರಾರಂಭಿಸುತ್ತಾರೆ.

ಹೆರಿಗೆಯಾದ ಮೇಲೆ ಮಗುವಿನಿಂದ ಕತ್ತರಿಸಿದ ಹೊಕ್ಕಳು ಬಳ್ಳಿಯನ್ನು ಅತ್ಯಂತ ಸುರಕ್ಷಿತವಾಗಿ ಒಂದು ಮಡಕೆಯಲ್ಲಿ ಹಾಕಿ ಮುಚ್ಚಿ, ದೂರಕ್ಕೆ ಕೊಂಡೊಯ್ದು, ನೆಲವನ್ನು ಅಗೆದು ಹೂಳುತ್ತಾರೆ. ಅದರ ಮೇಲೆ ಭಾರವಾದ ಕಲ್ಲೊಂದನ್ನಿಡುತ್ತಾರೆ. ಕ್ರೈಸ್ತೇತರಲ್ಲಿಯೂ ಸಾಮಾನ್ಯವಾಗಿ ಇದೇ ಪದ್ಧತಿ ಕಂಡು ಬರುತ್ತದೆ (ಖಂಡೋಬಾ: 1991:38)

ಕೊರಗ ಮತ್ತು ಸಿದ್ದಿ ಬುಡಕಟ್ಟುಕ್ರೈಸ್ತರಲ್ಲಿ ಮಗು ಹುಟ್ಟಿದ ನಲವತ್ತು ದಿನಗಳಿಗೆ ಸೂತಕ ಕಳೆಯುವ ಪದ್ಧತಿಯಿದೆ. ಹಿಂದೆ ನಲವತ್ತು ದಿನಗಳ ತನಕ ಬಾಣಂತಿ ಮನೆಯಿಂದಾಚೆಗೆ ಹೋಗುವಂತಿರಲಿಲ್ಲ. ಆಕೆಯ ತಂದೆತಾಯಂದಿರು ಮುಗುವನ್ನು ಚರ್ಚಿಗೆ ಕರೆದೊಯ್ದು ದೀಕ್ಷಾಸ್ನಾನ ಕೊಡಿಸುತ್ತಿದ್ದರು. ಎರಡು ದಿನಕ್ಕೆ ಮಗುವನ್ನು ಚರ್ಚಿಗೆ ಎತ್ತಿಕೊಂಡು ಹೋಗಿ ಅರ್ಪಣೆ ಮಾಡುವುದು ಯೆಹೂದ್ಯ ಸಂಸ್ಕೃತಿ. ಅದನ್ನೆ ಉಳಿಸಿಕೊಂಡಿದ್ದರು. ಆದರೆ ಇತ್ತೀಚೆಗೆ ಸ್ತ್ರೀಯರೂ ದುಡಿಯಲು ಹೊರಗೆ ಹೋಗುವುದರಿಂದ ನಲವತ್ತು ದಿನಗಳ ಕಾಲ ಮನೆಯಲ್ಲೇ ಕೂರುವುದಿಲ್ಲ. ಮಗು ಹುಟ್ಟಿದ ಒಂದು ತಿಂಗಳೊಳಗೆ ಬಾಣಂತಿಯೂ ಮಗುವಿನ ಜೊತೆ ಚರ್ಚಿಗೆ ಬಂದು ಸಂಸ್ಕಾರದಲ್ಲಿ ಪಾಲ್ಗೊಳ್ಳುತ್ತಾಳೆ. ಕನ್ನಡ ಕ್ರೈಸ್ತರು ಮಗು ಹುಟ್ಟಿದ ಐದನೇ ಅಥವಾ ಒಂಭತ್ತನೇ ದಿನಕ್ಕೆ ತಾಯಿ ಮಗುವನ್ನು ಚರ್ಚಿಗೆ ಕರೆದೊಯ್ದು ದೀಕ್ಷಾಸ್ನಾನ ಕೊಡಿಸುವುದು ರೂಢಿಯಲ್ಲಿದೆ. ಏಳು ಶುಭ ಸಂಖ್ಯೆಯಲ್ಲವೆಂಬುದು ಅವರ ಭಾವನೆ. "ಸಂಸ್ಕಾರ ಶಬ್ಧದ ಮೂಲಾರ್ಥ ತುಂಬ ಸರಳವಾಗಿದೆ. 'ಸಂ ಕರೋತಿ' ಅಂದರೆ ಉಪಯೋಗಕ್ಕೆ ಬರುವಂತೆ ಮಾಡುವುದು ಚೆನ್ನಾಗಿಸುವುದು, ಕೊಳೆಯನ್ನು ತೆಗೆಯುವುದು, ಒಳ್ಳೆಯ ಗುಣವನ್ನು ಹೆಚ್ಚಿಸುವುದು, ಇಂಥದಕ್ಕೆ ಸಂಬಂಧಿಸಿದ್ದೆಲ್ಲಾ ಸಂಸ್ಕಾರವೆನಿಸಿಕೊಳ್ಳುತ್ತದೆ" (ಪದ್ಮಪ್ರಸಾದ್ 1987:25). ಈ ಮಾತುಗಳು ಕ್ರೈಸ್ತರು ಆಚರಿಸುವ ಜನನ ಸಂಸ್ಕಾರಕ್ಕೆ ಪುಷ್ಟಿಕೊಡುತ್ತವೆ. 'ಸ್ನಾನ'ದ ಉದ್ದೇಶ ಕೊಳೆಯನ್ನು ತೆಗೆಯುವುದು. ಆದಿ ತಂದೆ ತಾಯಿ ಅಡಂ ಈವರು ಮಾಡಿದ ಪಾಪದ ಕಳಂಕ ಹುಟ್ಟುವ ಪ್ರತಿ ಮಗುವಿನಲ್ಲೂ ಇರುತ್ತದೆ. ಇದನ್ನು ಕ್ರೈಸ್ತರು 'ಜನ್ಮಪಾಪ' ಎಂದು ಕರೆಯುತ್ತಾರೆ. ದೀಕ್ಷಾಸ್ನಾನದಿಂದಾಗಿ ಈ ಪಾಪ ತೊಡೆದು ಹೋಗುತ್ತದೆ ಎಂಬ ನಂಬಿಕೆ ಕ್ರೈಸ್ತರಲ್ಲಿದೆ. ಎರಡನೆಯದಾಗಿ ದೀಕ್ಷಾಸ್ನಾನ ನೀಡುವಾಗ ಪವಿತ್ರಾತ್ಮರ ಸಪ್ತವರಗಳು ಅಂದರೆ ಶಮದಮಾದಿ ಸುಗುಣಗಳು ಮಗುವಿನಲ್ಲಿ ವೃದ್ಧಿಸುತ್ತದೆ ಎಂಬ ನಂಬಿಕೆ ಇದೆ. ಇದರಿಂದ ಪ್ರತಿಯೊಬ್ಬ ಕ್ರೈಸ್ತನ ಜೀವನದಲ್ಲೂ ದೀಕ್ಷಾಸ್ನಾನ ಮಹತ್ತರ ಹಾಗೂ ಪ್ರಮುಖ ಪಾತ್ರವಹಿಸುತ್ತದೆ.

**4.2 ನಾಮಕರಣ** ಹಳ್ಳಿಗಳಲ್ಲಿ ನೆಲೆಸಿರುವ ಬುಡಕಟ್ಟುಕ್ರೈಸ್ತರು ತಮ್ಮ ಮಕ್ಕಳಿಗೆ ಪೂರ್ವಜರ ಹೆಸರುಗಳನ್ನಿಡುತ್ತಾರೆ ಅಥವಾ ಹುಟ್ಟಿದ ತಿಂಗಳಿನಲ್ಲಿ ಆಚರಿಸುವ ಹಬ್ಬ ಯಾವ ಸಂತರದ್ದಾಗಿರುತ್ತದೆಯೋ ಆ ಸಂತರ ಹೆಸರುಗಳನ್ನು ಇಡುತ್ತಾರೆ. ಉದಾಹರಣೆಗೆ ಜೂನ್ ತಿಂಗಳಲ್ಲಿ ಹುಟ್ಟುವ ಮಕ್ಕಳಿಗೆ ಅಂತೋಣಿ, ಅಂತೋಣಿಮೇರಿ, ಆಂಟೋ, ಅಂಟೊನೆಟ್ ಇತ್ಯಾದಿ ಹೆಸರುಗಳನ್ನೂ, ಸೆಪ್ಟೆಂಬರ್ ತಿಂಗಳಲ್ಲಿ ಹುಟ್ಟುವ ಮಕ್ಕಳಿಗೆ ಅಮಲ, ವಿಮಲ,

ನಿರ್ಮಲ ಇತ್ಯಾದಿ ಹೆಸರುಗಳನ್ನೂ, ಡಿಸೆಂಬರ್ ತಿಂಗಳಿನಲ್ಲಿ ಹುಟ್ಟಿದರೆ ಇಮ್ಮಾನುಯೆಲ್, ಬಾಲಣ್ಣ, ಯೇಸುದಾಸ್, ಯೇಸುಸೆಲ್ವನ್, ಕ್ರಿಸ್ಟಿ, ಕ್ರಿಸ್ಟಿನಾ, ನೊಯೆಲಿನ್, ನೊಯೆಲ್, ಇನ್‌ಫೆನ್ಸಿಯಾ ಇತ್ಯಾದಿ ಹೆಸರುಗಳನ್ನೂ ಇಡುತ್ತಾರೆ. ಆದರೆ ಹಿಂದೂಗಳಂತೆ ಹೆಸರಿನ ಬಲ, ನಕ್ಷತ್ರ, ರಾಶಿ ಜಾತಕಗಳನ್ನು ನೋಡಿ ಅದಕ್ಕೆ ತಕ್ಕಂತೆ ಹೆಸರುಗಳನ್ನಿಡುವ ಪದ್ಧತಿ ಕ್ರೈಸ್ತರಲ್ಲಿಲ್ಲ. ಇತ್ತೀಚೆಗೆ ಸಂತರ ಹೆಸರುಗಳನ್ನು ಇಡುವುದು ವಿರಳವಾಗಿದೆ. ಸುಂದರವಾಗಿಯೂ, ಕರೆಯಲು ಸುಲಭವೂ ಆಗಿರುವ ಹೆಸರುಗಳನ್ನು ಇಡುವುದು ಜನಪ್ರಿಯವಾಗುತ್ತಿದೆ.ಉದಾಹರಣೆಗೆ .

**4.3 ದೀಕ್ಷಾಸ್ನಾನ** ಸಾಮಾನ್ಯವಾಗಿ ಭಾನುವಾರಗಳಂದು ಪೂಜೆ ಮುಗಿದ ತರುವಾಯ ದೀಕ್ಷಸಾನ್ನ ಸಂಸ್ಕಾರವನ್ನು ನೆರವೇರಿಸುತ್ತಾರೆ. ಅಂದು ತಂದೆ ತಾಯಿ ಮಗು ಮತ್ತು ಜ್ಞಾನ ತಂದೆತಾಯಿಯೊಡನೆ (God Parents) ಚರ್ಚಿಗೆ ಹೋಗುತ್ತಾರೆ. ಮಗುವನ್ನು ಕ್ರೈಸ್ತ ನಂಬಿಕೆಯಲ್ಲಿ ಬೆಳೆಸುವಂತೆ ಅವರಿಂದ ಕೆಲವು ವಾಗ್ದಾನಗಳನ್ನು ಮಾಡಿಸಿ ಕೊಳ್ಳುತ್ತಾರೆ. ಹಾಗ ೂ ಮಗುವಿನ ಹಣೆಯ ಮೇಲೆ_ಗುರುಗಳು ಎಣ್ಣೆಯಿಂದ ಶಿಲುಬೆಯ ಗುರುತನ್ನು ಹಾಕಿ "ಕರ್ತರಶಕ್ತಿ ನಿನ್ನ ರಕ್ಷಣೆಯಾಗಿರಲಿ, ಇದರ ಸಂಕೇತವಾಗಿರುವ ರಕ್ಷಣಾತೈಲದಿಂದ ನಿನ್ನನ್ನು ಅಭ್ಯಂಗಿಸುತ್ತೇನೆ" ಎಂದು ಹೇಳುತ್ತಾರೆ. ಮಗುವಿಗೆ ಇಡಬೇಕಾದ ಹೆಸರನ್ನು ಹೇಳಿ ಮಗುವಿನ ತಲೆಯಮೇಲೆ ಸ್ವಲ್ಪ ನೀರನ್ನು ಪ್ರೋಕ್ಷಿಸಿ "ಪಿತನ, ಸುತನ ಮತ್ತು ಪವಿತ್ರಾತ್ಮನ ನಾಮದಲ್ಲಿ ನಾನು ನಿನಗೆ ದೀಕ್ಷಾಸ್ನಾನವನ್ನು ಕೊಡುತ್ತೇನೆ" ಎಂದು ಹೇಳುತ್ತಾರೆ. ಬಿಳಿಯ ವಸ್ತ್ರವೊಂದನ್ನು ಮಗುವಿನ ತಲೆಯ ಮೇಲೆ ಹೊದಿಸಿ "ಈ ಬಿಳಿವಸ್ತ್ರ ಕ್ರೈಸ್ತ ಘನತೆಯ ಗುರುತಾಗಿರಲಿ, ಹೆತ್ತವರ ಹಾಗೂ ಬಂಧುಮಿತ್ರರ ನಡೆನುಡಿಯ ಆದರ್ಶವನ್ನು ಅನುಸರಿಸಿ ನಿತ್ಯಜೀವನದ ಪರ್ಯಂತ ಪರಿಶುದ್ಧವಾಗಿ ಕಾಪಾಡಿಕೋ ಎಂದು ಬೋಧಿಸುವರು.

ಜ್ಞಾನತಂದೆಯ (God Father) ಕೈಯಲ್ಲಿ ಉರಿಯುವ ಮೇಣದ ಬತ್ತಿಯನ್ನು ಕೊಟ್ಟು ಜ್ಞಾನತಂದೆ ತಾಯಿಯನ್ನು ಕುರಿತು "ವಿಶ್ವಾಸವನ್ನು ಸೂಚಿಸುವ ಈ ಬೆಳಕನ್ನು ನಿಮ್ಮ ವಶಕ್ಕೆ ಒಪ್ಪಿಸಲಾಗಿದೆ. ಕ್ರಿಸ್ತ ದೀವಿಗೆಯಿಂದ ಬೆಳಗುತ್ತಿರುವ ಈ ಮಗು ಸದಾ ಬೆಳಕಿನಲ್ಲಿ ನಡೆಯಲಿ, ವಿಶ್ವಾಸ(Faith)ದಲ್ಲಿ ನೆಲೆಗೊಂಡು ಸ್ವರ್ಗೀಯ ರಾಜ್ಯದಲ್ಲಿ ಸಕಲ ಸಂತರೊಡನೆ ಎದುರುಗೊಳ್ಳಲು ಸಿದ್ಧವಾಗಿರಲಿ"ಎಂದು ಹೇಳುತ್ತಾರೆ.ಆಗಅಲ್ಲಿರುವುವವರೆಲ್ಲರೂ ಮೇಣದ ಬತ್ತಿಗಳನ್ನು ಹಚ್ಚಿಕೊಂಡು ದೇವರನಾಮ ಹಾಡುತ್ತಾ ಮಗುವಿನೊಂದಿಗೆ ಗುರುಗಳು ಹಿಂದೆ ಪೀಠದ ಬಳಿಗೆ ಸಾಗುತ್ತಾರೆ.

ಹೊಸ ಸದಸ್ಯನೊಬ್ಬ ಧರ್ಮಸಭೆಗೆ ಸೇರ್ಪಡೆಯಾದ ಸಂಗತಿಯನ್ನು ಎಲ್ಲರಿಗೂ ತಿಳಿಸಲೆಂಬಂತೆ ಚರ್ಚಿನ ದೊಡ್ಡಗಂಟೆಯನ್ನು ಬಾರಿಸಲಾಗುತ್ತದೆ. ಹೀಗೆ ಮಗು ಹುಟ್ಟಿದ್ದನ್ನು ಸಹಾ ಗಂಟೆ ಬಾರಿಸುವುದರ ಮೂಲಕ ಇತರರಿಗೆ ತಿಳಿಸುವ ಪದ್ಧತಿ ಕ್ರೈಸ್ತೇತರರಲ್ಲಿಲೂ ಕಂಡುಬರುತ್ತದೆ. "The announcement is made by beating athali metal dish" (Shyam Parmar 1972:43). ಮೇಲೆ ತಿಳಿಸಿರುವಂತೆ ದೀಕ್ಷಾಸ್ನಾನದಲ್ಲಿ ಬಳಸುವ ಎಣ್ಣೆಯು ಶಕ್ತಿಯನ್ನೂ, ನೀರು ಶುದ್ಧಿಯನ್ನೂ, ಬಿಳಿಯವಸ್ತ್ರ ಶೀಲವನ್ನೂ, ಮೇಣದ ಬತ್ತಿ ತ್ಯಾಗ ಗುಣವನ್ನೂ ಸಂಕೇತಿಸುತ್ತವೆ. ಇಂತಹ ಅರ್ಥಪೂರ್ಣ ಅಂಶಗಳನ್ನು ಒಳಗೊಂಡಿರುವ ದೀಕ್ಷಾಸ್ನಾನವನ್ನು ಪಡೆಯದ ಕ್ರೈಸ್ತನ ಜೀವನ ಅರ್ಥಹೀನವಾಗುತ್ತದೆ. ಚರ್ಚಿನ ಸಂಪ್ರದಾಯಗಳು ಮುಗಿದ ಬಳಿಕ ಗುರುಗಳು ಮಗುವಿನ ಹೆಸರು, ತಂದೆತಾಯಿ, ಜ್ಞಾನ

ತಂದೆತಾಯಿಗಳ, ವಿಳಾಸ, ಹುಟ್ಟಿದ ದಿನಾಂಕ ಇತ್ಯಾದಿಗಳನ್ನು ತಮ್ಮ ಬಳಿ ಇರುವ ಮಾಹಿತಿ ಪುಸ್ತಕದಲ್ಲಿ ನೋಂದಾಯಿಸಿಕೊಳ್ಳುತ್ತಾರೆ.

**4.4 ದೀಕ್ಷಾಸ್ನಾನದ ಬಳಿಕ ಆಚರಿಸುವ ಸಂಪ್ರದಾಯಗಳು** ಚರ್ಚಿನಿಂದ ಮನೆಗೆ ಬಂದಾಗ ಕೆನ್ನೀರಿನ ಇಳಿತೆಗೆದು ತಾಯಿಯ ಕಾಲಿನ ಬಳಿ ಚೆಲ್ಲಿ. ಅದನ್ನು ದಾಟಿಕೊಂಡು ಒಳಗೆ ಬರಲು ಹೇಳುತ್ತಾರೆ. ಒಳಗೆ ಬಂದ ಮೇಲೆ ದೇವರ ಮುಂದೇ ಮೇಣದಬತ್ತಿ ಹಚ್ಚಿ, (ಸಾಂಬ್ರಾಣಿ) ಧೂಪ ಹಾಕಿ ಎಲ್ಲರೂ ಮೊಣಕಾಲೂರಿ ಪ್ರಾರ್ಥಿಸುತ್ತಾರೆ. ತಾಯಿಯು ಮೊಣಕಾಲಿನಲ್ಲಿ ಕುಳಿತು ಜ್ಞಾನ ತಾಯಿ ತನ್ನ ಮಗುವನ್ನು ಪಡೆಯುತ್ತಾಳೆ. ಅಂದಿನಿಂದ ಅವರ ನಡುವೆ ಜ್ಞಾನ ಸಂಬಂಧವೇರ್ಪಡುತ್ತದೆ. ಅಂದು ಬಂಧು ಬಳಗದವರಿಗೆ ವಿಶೇಷ ಊಟದ ವ್ಯವಸ್ಥೆ ಇರುತ್ತದೆ.

ಕ್ರೈಸ್ತರಲ್ಲಿ ಮಗುವನ್ನು ತೊಟ್ಟಿಲಿಗೆ ಹಾಕುವ ಪದ್ಧತಿಯೂ ರೂಢಿಯಲ್ಲಿದೆ. ಮಗುವಿಗೆ ಬಿಳಿಯ ಅಂಗಿ, ಬಿಳಿಯ ಕುಲಾವಿ, ಕಾಲುಚೀಲಗಳನ್ನು ಅಂದವಾದ ಬಣ್ಣದ ಉಡುಪುಗಳನ್ನು ತೊಡಿಸುತ್ತಾರೆ. ಹಣೆಗೆ& ಕೆನ್ನೆಗೆ ಕಪ್ಪು ಬೊಟ್ಟನ್ನಿಡುತ್ತಾರೆ. ತೊಟ್ಟಿಲನ್ನು ಬಣ್ಣದ ಕಾಗದ, ಹೂವು ಹಾಗೂ, ಬಣ್ಣದ ದೀಪಗಳಿಂದ ಅಲಂಕರಿಸುತ್ತಾರೆ. ಮಗುವನ್ನು ತೊಟ್ಟಿಲಿಗೆ ಹಾಕುವ ಮುನ್ನ ಧೂಪದಿಂದ ತೊಟ್ಟಿಲನ್ನು ಪವಿತ್ರೀಕರಿಸುತ್ತಾರೆ. ಹಿರಿಯ ಮಹಿಳೆಯೊಬ್ಬರು ಗುಂಡುಕಲ್ಲನ್ನು ಕೈಯಲ್ಲಿ ಹಿಡಿದು "ಗುಂಡು ಕಲ್ಲಿನಂತೆ ನೂರ್ಕಾಲ ಬಾಳು" ಎಂದು ಮೂರು ಸಾರಿ ಹೇಳಿ, ಕಲ್ಲನ್ನು ತೊಟ್ಟಿಲಿಗೆ ಇಳಿ ತೆಗೆದು ಮೂರನೇ ಸಲ ಕಲ್ಲನ್ನು ತೊಟ್ಟಿಲಿನಲ್ಲಿ ಇಡುತ್ತಾರೆ. ತೊಟ್ಟಿಲನ್ನು ನಾಲ್ಕೈದು ಸಲ ಆಡಿಸಿ, ಅನಂತರ ಕಲ್ಲನ್ನು ತೆಗೆದು ಮಗುವನ್ನು ಮಲಗಿಸುತ್ತಾರೆ. ಬಂದಿರುವ ಆಪ್ತರು ಉಡುಗೊರೆಗಳನ್ನಿತ್ತು ತಮ್ಮ ಸಂತೋಷವನ್ನು ವ್ಯಕ್ತಪಡಿಸುತ್ತಾರೆ. ಆಗ ಸಿಹಿ ಹಂಚುವುದು ಪದ್ಧತಿ.

ಲಾಲಿ ಹಾಡುವ ಪದ್ಧತಿ ಕ್ರೈಸ್ತರಲ್ಲಿ ಇದೆ. ಕೊಳ್ಳೇಗಾಲದ ಮಾರ್ಟಳ್ಳಿಯಲ್ಲಿ ನೆಲೆಸಿರುವ ಕ್ರೈಸ್ತರು ಹಾಡುವ ಲಾಲಿಹಾಡಿನಲ್ಲಿ ಧಾರ್ಮಿಕ, ಸಾಮಾಜಿಕ ಅಂಶಗಳು ಕಂಡು ಬರುತ್ತವೆ.

ತೆಕ್ಕಮಲೈಪೊಳಿಯೆ
ಎನ್ ಕಣ್ಣನುಕ್ಕು
ತೆನ್ನಾಯರ್ ತನ್ನಿವರ
ತೆನ್ನಾಟು ಕರುದನಿಲೇ
ಎನ್ ಕಣ್ಣನುಕ್ಕು
ದೇವಮಾದಾ ಪೂಸ್ಯೆವೆಕ್ಕ

ಮಗು ಹುಟ್ಟಿದಾಗ ಎಷ್ಟೇ ಕ್ಷೀಣವಾಗಿದ್ದರೂ ಪ್ರತಿದಿನ ಎಣ್ಣೇ ನೀವಿ ಬಿಸಿಬಿಸಿ ನೀರಿನ ಸ್ನಾನ ಮಾಡಿಸುವುದರಿಂದ ಮೂರು ತಿಂಗಳೊಳಗೆ ಮಗು ಮೈಕೈತುಂಬಿಕೊಂಡು ಆರೋಗ್ಯವಂತ ಮಗುವಾಗಿ ಬೆಳೆಯುತ್ತದೆ ಎಂಬುದು ನಂಬಿಕೆ. ತನ್ನ ಮಗನಿಗೆ ದಕ್ಷಿಣನಾಡಿನ ನೀರು ಹರಿದು ಬರಲೆಂದು ಹಾರೈಸುತ್ತಾಳೆ. ಕ್ರೈಸ್ತರಲ್ಲಿ ಪೂಜಾಕಾರ್ಯ ನಿರ್ವಹಿಸುವ ಗುರು ಪುರುಷನೇ ಆಗಿರುತ್ತಾನೆ. ಆದರೆ ಕ್ರಿಸ್ತನ ತಾಯಿ ಮರಿಯಮ್ಮನ ಮೇಲಿನ ಭಕ್ತಿಯಿಂದ "ದೇವಮಾತೆ ಪೂಜೆ ಅರ್ಪಿಸಲಿ" ಎಂಬ ಕಲ್ಪನೆ ಅದ್ವಿತೀಯವಾಗಿದೆ.

ಮತ್ತೊಂದು ಲಾಲಿ ಹಾಡಿನಲ್ಲಿ ಸೋದರ ಮಾವನ ಸಂಬಂಧ ಎಷ್ಟು ನಿಕಟವಾದುದೆಂದು ತಿಳಿದುಬರುತ್ತದೆ.

മൂന്നു പേരു മാമന് മാരു
മുത്തുസര പോഡുവാര്ഗള്
എന് സെല്ല കണെ ഉനക്കു
വത്താദ പാല് കേണര്
ദൂരി ദൂരി ದೂರಿ ದೂರಿ

ಸೇದುತ್ತಿರುವ ಬಾವಿಯಲ್ಲಿ ದಿನೇದಿನೇ ನೀರು ಚಿಮ್ಮುತ್ತಿರುತ್ತದೆ. ಅಂತೆಯೇ ಸತತವಾಗಿ ಹಾಲು ಕುಡಿಯುವ ಕಂದನಿಗೆ ಯಥೇಚ್ಛವಾಗಿ ಹಾಲು ದೊರೆಯುತ್ತಿರಲಿ ಎಂದು ಬತ್ತಿಹೋಗದ ಹಾಲಿನ ಬಾವಿಯ ಹೋಲಿಕೆ ಸುಂದರವಾಗಿದೆ.

ಹುಟ್ಟಿದ ಮಗುವಿಗೆ ಸೋದರಮಾವ ಉಡಿದಾರ, ಕಾಲ್ಗೆಜ್ಜೆ ತಂದು ಹಾಕುವ ಪದ್ಧತಿ ಕ್ರೈಸ್ತರಂತೆ ತಮಿಳರಲ್ಲಿಯೂ ರೂಢಿಯಲ್ಲಿದೆ. ಹುಟ್ಟಿರುವ ಮಗು ಗಂಡಾಗಿದ್ದರೆ ಸೋದರ ಮಾವನಂತೆ ಎಂದು ಹೋಲಿಸುವುದುಂಟು. ಸೋದರಮಾವನ ಸಂಬಂಧದ ಬಗೆಗೆ ಕನ್ನಡದ ತ್ರಿಪದಿಯೊಂದನ್ನು ಇಲ್ಲಿ ಸ್ಮರಿಸಬಹುದು.

ರೊಚ್ಚೆ ಕಂದಮ್ಮ ಉಚ್ಚೇಯ ಊದಾರೆ
ಕೆಂಗಟ್ಟಿ ತುಂಬಿ ಕೆರತುಂಬಿ ನಿಮ್ಮಾವ
ಮಕ್ಕಿಗದ್ದೇಯ ಬೆಳೆದಾನು

ಇಂತಹ ಪದ್ಯಗಳಲ್ಲಿ ಮಗುವಿನೊಡನೆ ಏರ್ಪಡುವ ಸೋದರಮಾವನ ಸಂಬಂಧ ಮಾತ್ರವಲ್ಲ ಸೋದರಪ್ರೇಮವೂ, ತವರಿನ ಬಗ್ಗೆ ಅಭಿಮಾನವೂ ವ್ಯಕ್ತವಾಗಿರುವುದನ್ನು ಸಾಮಾನ್ಯವಾಗಿ ಗಮನಿಸ ಬಹುದಾಗಿದೆ.

ಮಗುವಿಗೆ ಮೂರು ತಿಂಗಳು ಅಥವಾ ಐದು ತಿಂಗಳಾದ ಮೇಲೆ ಬಾಣಂತಿ, ಮತ್ತು ಮಗುವನ್ನು ತವರಿನಿಂದ ಗಂಡನ ಮನೆಗೆ ಕಳುಹಿಸುವರು. ಆಗ ತೊಟ್ಟಿಲನ್ನೂ, ಹೊಸಬಟ್ಟೆಗಳನ್ನೂ, ಅನುಕೂಲವಿದ್ದವರು ಮಗುವಿಗೆ ಉಡುಗೊರೆಯನ್ನು ಕೊಡುವುದುಂಟು ಒಂದು ವರ್ಷ ತುಂಬುವ ಮುನ್ನ ಬೆಸಸಂಖ್ಯೆಯ ತಿಂಗಳಿನಲ್ಲಿ ಮಗುವಿಗೆ ಕೂದಲು ತೆಗೆಸಿ, ಕಿವಿಚುಚ್ಚುವ ಪದ್ಧತಿಯೂ ವಾಡಿಕೆಯಲ್ಲಿದೆ. ಮಗು ಎರಡನೇ ವರ್ಷಕ್ಕೆ ಕಾಲಿಟ್ಟರೆ ಈ ಕಾರ್ಯವನ್ನು ಮೂರನೇ ವರ್ಷಕ್ಕೆ ಮುಂದೂಡಬೇಕಾಗುತ್ತದೆ. ಆದ್ದರಿಂದ ಸಾಮಾನ್ಯವಾಗಿ ಮಗುವಿಗೆ ಹನ್ನೊಂದು ತಿಂಗಳಾದಾಗಲೇ ಈ ಕಾರ್ಯವನ್ನು ನೆರವೇರಿಸುವರು.

ಮೊದಲನೇ ಸಲ ಮುಡಿ ಕೊಡುವ ಕಾರ್ಯವನ್ನು ಮೈಸೂರು ಜಿಲ್ಲೆಯ ಕ್ರೈಸ್ತರು ಸಾಮಾನ್ಯವಾಗಿ ಡೋರ್ನಹಳ್ಳಿ ಹಬ್ಬದಂದೇ ಮಾಡುತ್ತಾರೆ. ಕನ್ನಡ, ತಮಿಳು ಕ್ರೈಸ್ತರಲ್ಲಿ ಗಂಡು, ಹೆಣ್ಣುಮಕ್ಕಳಿಗೆ ಮುಡಿ ಕೊಡುವ ಹಾಗೂ ಕಿವಿಚುಚ್ಚುವ ಪದ್ಧತಿಗಳು ರೂಢಿಯಲ್ಲಿರುವುದು ಕಂಡು ಬರುತ್ತದೆ.

4.5 **ಪ್ರೌಢ ಸಂಸ್ಕಾರ** ಬುಡಕಟ್ಟು ಕ್ರೈಸ್ತರಲ್ಲಿ ರೂಢಿಯಲ್ಲಿರುವ ಪ್ರೌಢ ಸಂಸ್ಕಾರಗಳಲ್ಲಿ ಪ್ರಥಮ ಪರಮಪ್ರಸಾದ ಸ್ವೀಕಾರವು ಅತಿ ಮುಖ್ಯವಾದದ್ದು. ಪರಮಪ್ರಸಾದದ ವಿನಿಯೋಗದ ಸಂದರ್ಭದಲ್ಲೇ ಪಾಪನಿವೇದನೆ ಮತ್ತು ದೃಢೀಕರಣ ಸಂಸ್ಕಾರಗಳೂ ಜರುಗುತ್ತವೆ. ಪರಮಪ್ರಸಾದವು ಗೋಧಿಯ ಹಾಲಿನಿಂದ ತಯಾರಾಗುವ ಬಿಳಿಯ ರೊಟ್ಟಿಯಾಗಿದೆ. ಐವತ್ತು ಪೈಸೆ ನಾಣ್ಯದಷ್ಟು ಅಗಲವಾಗಿ ತೆಳುವಾಗಿರುವ ಈ ರೊಟ್ಟಿಯಲ್ಲಿ ಯೇಸುಕ್ರಿಸ್ತ ಜೀವಂತವಾಗಿ

ಇದ್ದಾನೆ ಎಂಬ ನಂಬಿಕೆ ಕ್ರೈಸ್ತರಲ್ಲಿದೆ. ಇದನ್ನು ಗುರುಗಳು (Priest) ಮಾತ್ರ ಕೈಯಿಂದ ಮುಟ್ಟುವರು. ಸ್ವೀಕರಿಸುವವರು ನಾಲಿಗೆಯನ್ನು ನೀಡಿ ಸ್ವೀಕರಿಸಬೇಕು. ಇಷ್ಟು ಕಟ್ಟುನಿಟ್ಟಾಗಿ ವಿನಿಯೋಗಿಸುವ ಪರಮಪ್ರಸಾದವನ್ನು ಸ್ವೀಕರಿಸುವ ಮುನ್ನ ಪಾಪನಿವೇದನೆ ಮಾಡಿ ಅಂತಃಕರಣ ಶುದ್ದಿಯಾಗಬೇಕು.

'ಪಾಪನಿವೇದನೆ' ಎಂದರೆ ಮಾಡಿರುವ ಎಲ್ಲಾ ತಪ್ಪುಗಳನ್ನು ಗುರುಗಳ ಬಳಿ ಪ್ರಾಮಾಣಿಕತೆಯಿಂದ ಹೇಳುವುದು. ಹಾಗೂ ಪಶ್ಚಾತ್ತಾಪಪಟ್ಟು ಮತ್ತೊಮ್ಮೆ ಪಾಪ ಮಾಡುವುದಿಲ್ಲ ವೆಂದು ದೃಢಪ್ರತಿಜ್ಞೆ ಮಾಡುವುದು. ರೋಮನ್ ಕಥೋಲಿಕರಲ್ಲಿ ಮಾತ್ರ ಈ ಸಂಸ್ಕಾರ ರೂಢಿಯಲ್ಲಿದೆ. ಪ್ರೊಟೆಸ್ಟೆಂಟರಲ್ಲಿ ಈ ಸಂಸ್ಕಾರಇರುವುದಿಲ್ಲ.

ಮಕ್ಕಳಿಗೆ ಎಂಟು–ಹತ್ತು ವರ್ಷದ ಪ್ರಾಯವಾದಾಗ ಈ ಸಂಸ್ಕಾರವನ್ನು ನೀಡುತ್ತಾರೆ. ಇದಕ್ಕೆ ಒಂದು ತಿಂಗಳ ಕಾಲ ಸಿದ್ಧತೆ ಅಗತ್ಯ ಆ ಅವಧಿಯಲ್ಲಿ ಕ್ರೈಸ್ತರು ದಿನನಿತ್ಯ ಹೇಳಲೇಬೇಕಾದ ಪ್ರಾರ್ಥನೆಗಳನ್ನೂ, ಪಾಪನಿವೇದನೆಯ ಕ್ರಮವನ್ನೂ ಕಲಿಸುವರು. ಪ್ರಾರ್ಥನೆಗಳನ್ನು ಕಂಠಪಾಠ ಮಾಡಿಸಿ ತಪ್ಪು ಸರಿ ವಿವೇಚನೆಯನ್ನೂ, ದೇವರು, ಮೋಕ್ಷ, ನರಕಗಳ ಬಗೆಗೆ ಕಥಾ ಮಾಧ್ಯಮದ ಮೂಲಕ ತಿಳಿವಳಿಕೆ ಕೊಡುತ್ತಾರೆ. ಪಾಪನಿವೇದನೆ ಮಾಡುವ ಕ್ರಮವನ್ನು ಸಂಭಾಷಣೆಯ ಮೂಲಕ ಕಲಿಸುತ್ತಾರೆ. ಅಂತಹ ಸಂಭಾಷಣೆಗಳು ಪುಸ್ತಕ ರೂಪದಲ್ಲಿ ಮುದ್ರಿತವಾಗಿವೆ. (ಹಾವನೂರು 1974:418). ಉದಾಹರಣೆಗೆ ಧರ್ಮೋಪದೇಶ ಸಂಕ್ಷೇಪದಿಂದ ಕೆಲವು ಪ್ರಶ್ನೆಗಳನ್ನು ಇಲ್ಲಿ ಕೊಟ್ಟಿದೆ;

ಸುಳ್ಳು ಹೇಳಿದೆಯಾ?
ಏಕೆ?
ಎಷ್ಟು ಸಲ?
ಭಾನುವಾರ ಪೂಜೆಯಲ್ಲಿ ಪೂರ್ಣವಾಗಿ ಭಾಗವಹಿಸಿದೆಯಾ?
(ಇಲ್ಲವಾದರೆ) ಕಾರಣವೇನು?
ಇತರರ ವಸ್ತುಗಳನ್ನು ಕದ್ದೆಯಾ?
ಏನನ್ನು ಕದ್ದೆ ?
ಎಷ್ಟು ಸಲ ಕದ್ದೆ?

ಇತ್ಯಾದಿ ಪ್ರಶ್ನೆಗಳಿಗೆ ಉತ್ತರಿಸುವ ಮೂಲಕ ಪಾಪ ನಿವೇದನೆಯ ಕ್ರಮವನ್ನು ಕಲಿಸುತ್ತಾರೆ. ಹೊಸದಾಗಿ ಮತಾಂತರಗೊಂಡ ಅವಿದ್ಯಾವಂತರಿಗೂ (ವಯಸ್ಕ) ಹಿಂದೆ ವಿದೇಶೀ ಗುರುಗಳು ಇದೇ ಕ್ರಮವನ್ನು ಅನುಸರಿಸಿರುವುದು ಕಂಡು ಬಂದಿದೆ. ಪ್ರಥಮ ಪರಮಪ್ರಸಾದ ವಿನಿಯೋಗದ ಹಿಂದಿನ ದಿನ ಮೊದಲ ಬಾರಿಗೆ ಪಾಪ ನಿವೇದನೆ ಮಾಡಿಸುತ್ತಾರೆ. ಪ್ರಸಾದ ವಿನಿಯೋಗದ ದಿನ ಪೂಜಾ ವೇಳೆಯಲ್ಲಿ ದೃಢೀಕರಣ ಸಂಸ್ಕಾರವನ್ನು ನೀಡಲಾಗುತ್ತದೆ. ಉರಿಯುತ್ತಿರುವ ಮೇಣದಬತ್ತಿಯನ್ನು ಹಿಡಿದು 'ಇನ್ನು ಮುಂದೆ ಕ್ರಿಸ್ತನ ಬೆಳಕಿನಲ್ಲಿ ಜೀವಿಸುತ್ತೇನೆ ' ಎಂದು ದೃಢಪ್ರತಿಜ್ಞೆ ಮಾಡುವುದೇ ದೃಢೀಕರಣ ಸಂಸ್ಕಾರ (Confirmation).

**4.6 ಪ್ರಥಮ ಪರಮಪ್ರಸಾದ ಸ್ವೀಕಾರ ಮತ್ತು ವಿನಿಯೋಗ** ಪ್ರಥಮ ಪರಮಪ್ರಸಾದ ವಿನಿಯೋಗವು ಯಾವುದಾದರೂ ಒಂದು ಹಬ್ಬದ ದಿನದಂದೇ ಜರುಗುತ್ತದೆ. ಸಾಮಾನ್ಯವಾಗಿ ಅದು ಆಯಾ ಚರ್ಚಿನ ಹಬ್ಬಗಳಂದು ನಡೆಯುತ್ತದೆ. ದೃಢೀಕರಣ ಸಂಸ್ಕಾರವನ್ನು ಕೊಡುವ ಅಧಿಕಾರ ಧರ್ಮಾಧ್ಯಕ್ಷರಿಗೆ ಮಾತ್ರ ಇರುತ್ತದೆ. (Bishop) ಇವರು ಊರಲ್ಲಿಲ್ಲದ ಅಥವಾ ಆ

ಸ್ಥಾನ ತೆರವಿದ್ದ ಪಕ್ಷದಲ್ಲಿ ಈ ಸಂಸ್ಕಾರವನ್ನು ನೀಡುವುದಿಲ್ಲ. ಪ್ರಥಮ ಪರಮಪ್ರಸಾದ ವಿನಿಯೋಗ ಗುರುಗಳಿಂದಲೇ ಆಗಬಹುದು.

ಪ್ರಾರ್ಥನೆಗಳನ್ನು ಕಲಿತು ಸಿದ್ಧರಾದ ಮಕ್ಕಳಿಗೆ ಪ್ರಸಾದ ಸ್ವೀಕಾರಕ್ಕೆ ಅಪ್ಪಣೆ ಚೀಟಿಯನ್ನು ಗುರುಗಳು ಕೊಡುತ್ತಾರೆ. ಆಗ ತಂದೆ-ತಾಯಿಗಳು ಬಟ್ಟೆಬರೆ ಇತ್ಯಾದಿಗಳ ಸಿದ್ಧತೆಗಳನ್ನು ಮಾಡಿಕೊಂಡು . ತಮ್ಮ ಬಂಧು ಬಳಗದವರಿಗೆ ತಿಳಿಸುವರು (ಅನುಕೂಲವಿದ್ದವರು ಪತ್ರವನ್ನೂ ಮಾಡಿಸುವುದುಂಟು). ಪ್ರಸಾದ ಸ್ವೀಕರಿಸುವ ಮಕ್ಕಳ್ಳು ಹೆಣ್ಣಾಗಲಿ ಅಥವಾ ಗಂಡಾಗಲಿ ಬಿಳಿಯ ಉಡುಪನ್ನು ತೊಡಿಸುವುದು ನಿಯಮ. ಬುಡಕಟ್ಟು ಕ್ರೈಸ್ತರ ಹೆಣ್ಣು ಮಕ್ಕಳಿಗೆ ಮಾತ್ರ ಕಿರೀಟವಿಡುವ ಪದ್ಧತಿ ಇದೆ. ಆದರೆ ಮಂಗಳೂರು, ಮಡಿಕೇರಿ ಮುಂತಾದ ಕಡೆಗಳಲ್ಲಿ ಗಂಡುಮಕ್ಕಳ ತಲೆಯ ಮೇಲೂ ಕಿರೀಟ ವನ್ನಿಡುತ್ತಾರೆ. ಕೈಯಲ್ಲಿ ಉದ್ದನೆಯ ಮೇಣದಬತ್ತಿಯನ್ನೂ ಕೊಡುತ್ತಾರೆ. ಅದನ್ನು ಬಿಳಿಯ ಟೇಪು ಅಥವಾ ಬಿಳಿಯ ಜರಿ ಕಾಗದದಿಂದ ಅಲಂಕರಿಸಿರುತ್ತಾರೆ.

ಪ್ರಥಮ ಬಾರಿಗೆ ಪರಮಪ್ರಸಾದ ಸ್ವೀಕರಿಸಿದ ಮಕ್ಕಳಿಗೆ ಚರ್ಚಿನ ಬಳಿಯೇ ಹಾಲುಹಣ್ಣಿನ ರಸಾಯನವನ್ನು ಕೊಡುತ್ತಾರೆ. ಗಂಡು ಮಕ್ಕಳನ್ನು ಬಿಳಿಯ ಕುದುರೆಯ ಮೇಲೆ ಕೂರಿಸಿ, ವಾದ್ಯ ಮೇಳಗಳೊಡನೆ ಕರೆದೊಯ್ಯುವ ಸಂಭ್ರಮವೂ ಉಂಟು. ಬಂದುಗಳು ಪರಮಪ್ರಸಾದ ಸ್ವೀಕರಿಸಿದ ಮಕ್ಕಳಿಗೆ ಹೂವಿನ ಹಾರವನ್ನು ಹಾಕಿ ಉಡುಗೊರೆಗಳನ್ನು ನೀಡುತ್ತಾರೆ. ಸಿದ್ಧಿ ಕ್ರೈಸ್ತರಲ್ಲಿ ಪರಮಪ್ರಸಾದ ಸ್ವೀಕರಿಸಿದ ಮಕ್ಕಳು ಮನೆಯ ಪ್ರತಿಯೊಬ್ಬ ಹಿರಿಯ ಸದಸ್ಯರ ಬಳಿಗೂ ಹೋಗಿ ನಮಸ್ಕರಿಸಿ ಆಶೀರ್ವಾದ ಪಡೆಯುವ ಪದ್ಧತಿ ಇದೆ. ಅಂದು ಬಂಧು ಬಳಗದವರೆಲ್ಲಾ ಔತಣ ಏರ್ಪಾಡು ಮಾಡುವರು.

**4.7 ಕನ್ಯಾನ್ವೇಷಣೆ** ವಿವಾಹ ಪೂರ್ವದಲ್ಲಿ ಕನ್ಯಾನ್ವೇಷಣೆ ಮಾಡುವುದು ಕ್ರೈಸ್ತರಲ್ಲಿರುವ ಪದ್ಧತಿ. ಎಷ್ಟೇ ಶ್ರೀಮಂತರಾಗಿರಲಿ ಬಡವರಾಗಿರಲಿ, ವರನ ಮನೆಗೆ ಮೊದಲು ವಧುವಿನ ಮನೆಯವರು ಹೋದರೆ ಗೌರವಕ್ಕೆ ಕುತ್ತು. ಅಲ್ಲದೆ ಹುಡುಗಿಯಲ್ಲೇನೋ ಕುಂದು ಇರಬೇಕೆಂದು ಭಾವಿಸುತ್ತಾರೆ. 'ಹೆಣ್ಣು ಹುಡುಕಲು ಏಳು ಜೊತೆ ಚಪ್ಪಲಿ ಸವೆಯಬೇಕು ' ಎಂಬುದು ಈ ಜನರ ಅನುಭವೋಕ್ತಿಯಾಗಿದೆ. ಹುಡುಗಿ ಒಪ್ಪಿಗೆಯಾದರೆ ಮೊದಲು ಮಾಡುವ ಕಾರ್ಯ ಹೂವು ಮುಡಿಸುವುದು. ಹೆಣ್ಣು ನೋಡಲು ಬಂದಿರುವ ಐದು ಜನ ಮುತ್ತೈದೆಯರು ಹೆಣ್ಣಿಗೆ ಹೂವು ಮುಡಿಸಿ ಒಪ್ಪಿಗೆಯನ್ನು ಸೂಚಿಸುತ್ತಾರೆ. ಅನಂತರ ಹಿರಿಯರೆಲ್ಲ ಸೇರಿ ನಿಶ್ಚಿತಾರ್ಥಕ್ಕೆ ಒಂದು ದಿನಾಂಕವನ್ನು ಗೊತ್ತು ಮಾಡುತ್ತಾರೆ.

**4.8 ನಿಶ್ಚಿತಾರ್ಥ** ನಿಶ್ಚಿತಾರ್ಥ ಹೆಣ್ಣಿನ ಮನೆಯಲ್ಲಿಯೇ ನಡೆಯಬೇಕಾದ ಕಾರ್ಯ. ಆಗ ವಿಚಾರಣಾ ಗುರುಗಳನ್ನು (Parish Priest) ಕರೆಸಲಾಗುತ್ತದೆ. ನಿಶ್ಚಿತಾರ್ಥಕ್ಕೆ ವರನಮನೆಯವರು ಸೀರೆ ರವಿಕೆ ಯನ್ನೂ, ತಮ್ಮ ಅನುಕೂಲಕ್ಕೆ ತಕ್ಕಂತೆ ಯಾವುದಾದರೊಂದು ಒಡವೆಯನ್ನೂ ತರುವುದುಂಟು ಸಾಮಾನ್ಯವಾಗಿ ಉಂಗುರವನ್ನು ತರುವುದು ಪದ್ಧತಿ. ಅಲ್ಲದೆ ತೆಂಗಿನಕಾಯಿ, ಎಲೆ ಅಡಿಕೆ, ಅವಲಕ್ಕಿ ಕಡಲೆ, ಬೆಲ್ಲ, ಸಿಹಿತಿಂಡಿಗಳು, ಸೀರೆ ರವಿಕೆಯನ್ನು ಏಳು ತಟ್ಟೆಗಳಲ್ಲಿ ತುಂಬಿಡುವರು ಆಗ ಎರಡೂ ಕಡೆ ಬಂಧು ಬಳಗದವರು ಕುಳಿತುಕೊಳ್ಳುವರು ಮದುವೆಗೆ ಕೇಳಿರುವ ಹೆಣ್ಣು ತಂಬಿಗೆ ತುಂಬಾ ನೀರನ್ನು ತಂದು ಸಭಿಕರ ಮುಂದೆ ಇಡುತ್ತಾಳೆ. ಎಲ್ಲರೂ ಹೆಣ್ಣನ್ನು ನೋಡಿದ ಮೇಲೆ ತಾವು ತಂದಿರುವ ಸೀರೆ, ರವಿಕೆ, ಹೂವು ಬಳೆಗಳನ್ನು ಅವಳ ಕೈಗೆ ಕೊಡುತ್ತಾರೆ. ಅವರು ತಂದಿರುವ ಸೀರೆ

ಉಡಿಸಿ, ಬಳೆತೊಡಿಸಿ, ಹೂ ಮುಡಿಸಿ, ಮತ್ತೆ ಹೆಣ್ಣನ್ನು ಕರೆತಂದು ವರನ ಮುಂದೆ ಕೂರಿಸುವರು. ಗುರುಗಳು ಪ್ರಾರ್ಥನೆಯನ್ನು ಪ್ರಾರಂಭಿಸುತ್ತಾರೆ. ವರನ ಕೈಯಲ್ಲಿ ಉಂಗುರವನ್ನು ಕೊಟ್ಟು ವಧುವಿಗೆ ತೊಡಿಸಲು ಹೇಳಿ ಹೂವಿನ ಹಾರಗಳನ್ನು ವಿನಿಮಯ ಮಾಡಿಸುತ್ತಾರೆ. ವಧುವರರ ಹೆಸರು, ವಿಳಾಸವನ್ನೂ, ಮದುವೆ ನಡೆಯಲಿರುವ ದಿನಾಂಕವನ್ನೂ ಬರೆದುಕೊಂಡು, ಇಬ್ಬರು ಸಾಕ್ಷಿದಾರರ ಕೈಯಲ್ಲಿ ರುಜುಮಾಡಿಸಿ ಕೊಳ್ಳುವುದು ಇವರಲ್ಲಿನ ಕ್ರಮ.

ಹಿಂದೆ ನಿಶ್ಚಿತಾರ್ಥಕ್ಕೆ ಗುರುಗಳನ್ನು ಕರೆಸುತ್ತಿರಲಿಲ್ಲ. ಬದಲಿಗೆ ಉಪದೇಶಿಯ ಸಮ್ಮುಖ ದಲ್ಲಿ ಬೀಗರು ತಾಂಬೂಲ ವಿನಿಮಯ ಮಾಡಿಕೊಳ್ಳುವುದರ ಮೂಲಕ ನಿಶ್ಚಿತಾರ್ಥವನ್ನು ಭದ್ರಗೊಳಿ ಸುತ್ತಿದ್ದರು. ಆದ್ದರಿಂದಲೇ ತಮಿಳು ಕ್ರೈಸ್ತರು ಇದಕ್ಕೆ ' ನಿಶ್ಚಯ ತಾಂಬೂಲಂ ' ಎಂದು ಕರೆಯುತ್ತಾರೆ. ಒಂದು ಪಕ್ಷ ನಿಶ್ಚಿತಾರ್ಥವೇನಾದರೂ ಮುರಿದು ಹೋದರೆ ಹೆಣ್ಣಿನ ಮನೆಯವರು ಅಂದಿನ ಭೋಜನಕ್ಕೆ ಮಾಡಿರುವ ಖರ್ಚನ್ನೆಲ್ಲಾ ಗಂಡಿನ ಮನೆಯವರು ಕಟ್ಟಿಕೊಡಬೇಕು. ಹಾಗೂ ವರನ ಕಡೆಯವರು ತಂದಿರುವ ವಸ್ತುಗಳನ್ನು ಹೆಣ್ಣಿನ ಮನೆಯವರು ಹಿಂತಿರುಗಿಸಬೇಕಾಗುತ್ತದೆ. ಎಂದು ಲಿಖಿತರೂಪದಲ್ಲಿ ಬರೆಸಿಕೊಳ್ಳುತ್ತಿದ್ದರು. ಆದರೆ ಈಗ ಈ ಸಮಾರಂಭ ಬರೀ ನಂಬಿಕೆಯ ಮೇಲೆ ಜರುಗುತ್ತದೆ.

**4:9 ವಿವಾಹ ಸಂಸ್ಕಾರ** ಮಾನವನ ಜೀವನಚಕ್ರದ ಪ್ರಮುಖ ಹಂತಗಳ ಪೈಕಿ ಕಟ್ಟುನಿಟ್ಟಿನ ಸಂಪ್ರದಾಯ ನಂಬಿಕೆ, ಹಾಗೂ ವಿಧಿ-ನಿಷೇಧಗಳಿಂದ ಕೂಡಿರುವ ಘಟ್ಟವೇ ವಿವಾಹ. ವಿವಾಹಕ್ಕೆ ಸಂಬಂಧಿಸಿದ ವಿಧಿ ವಿಧಾನಗಳು ಬೇರೆ ಬೇರೆ ಸಮಾಜದಲ್ಲಿ ಬೇರೆ ಬೇರೆ ತೆರನಾಗಿವೆ. ಇದಕ್ಕೆ ಬುಡಕಟ್ಟುಕ್ರೈಸ್ತರು ಹೊರತಾಗಿಲ್ಲ.

**4.10 ಮುಹೂರ್ತಕಂಬ ಅಥವಾ ಹಾಲುಕಂಬ** ಮನೆಯ ಮುಂದೆ ಚಪ್ಪರ ಹಾಕುವ ದಿನವೇ ಮುಹೂರ್ತ ಕಂಬವನ್ನು ನೆಡುತ್ತಾರೆ. ಉದ್ದನೆಯ ಬಿದಿರುಗಳುವಿಗೆ ಅರಿಸಿನ-ಕುಂಕುಮ ಹಚ್ಚಿ ಅದರ ಮೇಲ್ತುದಿಗೆ ಒಂದು ಸಣ್ಣ ಶಿಲುಬೆಯನ್ನು ಕಟ್ಟಿ ಅದಕ್ಕೆ ಹೂವಿಟ್ಟು ಮಾವಿನ ಎಲೆಗಳನ್ನು ಕಟ್ಟುತ್ತಾರೆ. ಕೊಳ್ಳೇಗಾಲ ಭಾಗದ ತಮಿಳರು ಮುಹೂರ್ತ ಕಂಬಕ್ಕೆ ಅರಳಿ ಎಲೆಗಳನ್ನು ಕಟ್ಟುವುದು ವಿಶೇಷವಾದುದು. ಅರಳಿ ಮರದಲ್ಲಿ ದೇವರು ಇದ್ದಾನೆಂಬ ನಂಬಿಕೆಯಿಂದ ಇಂದಿಗೂ ಅದೇ ಸಂಪ್ರದಾಯವನ್ನು ಉಳಿಸಿಕೊಂಡಿದ್ದಾರೆ.

ಡೋರ್ನಹಳ್ಳಿಯ ಕನ್ನಡ ಕ್ರೈಸ್ತರು ಮುಹೂರ್ತಕಂಬಕ್ಕೆ ಹೊಂಗೆ ಎಲೆಗಳನ್ನು ಕಟ್ಟುತ್ತಾರೆ, ಹೊಂಗೆಮರದ ನೆರಳಿನಂತೆ ಜೀವನ ತಂಪಾಗಿರಲೆಂಬ ಉದ್ದೇಶದಿಂದ ಹಿಂದೂ ಸಂಪ್ರದಾಯವು ಕ್ರೈಸ್ತರಲ್ಲಿಯೂ ಮುಂದುವರೆದಿದೆ. ಅಲ್ಲದೆ ಕಂಬದ ಎರಡೂ ಕಡೆ ಒಂದಡಿ ಎತ್ತರದ ಮೆಟ್ಟಿಲುಗಳನ್ನು ಕಟ್ಟಿ ಇದನ್ನು ' ಹಸೆಜಗಲಿ ' ಎಂದು ಕರೆಯುತ್ತಾರೆ. ಮೆಟ್ಟಿಲುಗಳ ಮೇಲೆ, ಹಸೆಜಗಲಿಯ ಮುಂದೆ ರಂಗೋಲಿ ಹಾಕುವರು.

ಮುಹೂರ್ತ ಕಂಬ ನೆಡುವ ಮುನ್ನ ಪ್ರಾರ್ಥನೆ ಸಲ್ಲಿಸಿ, ಧೂಪದಿಂದ ಕಂಬವನ್ನು ಪವಿತ್ರೀಕರಿಸಿ ಗುಳಿಯಲ್ಲಿ ನವಧಾನ್ಯಗಳನ್ನೂ, ಹಾಲು ಮತ್ತು ಕಾಸನ್ನು ( ನಾಣ್ಯ) ಹಾಕುವುದು ಪದ್ಧತಿ. ಅನಂತರ ಮುಹೂರ್ತ ಕಂಬವನ್ನು ನೆಡುತ್ತಾರೆ. ಅಕ್ಕಪಕ್ಕಗಳಲ್ಲಿ ಬಾಳೆಕಂಬವನ್ನು ನೆಟ್ಟು ಮುಹೂರ್ತ ಕಂಬ ನೆಡುವ ಮುನ್ನ, ಹಾಗೂ ತೆಗೆದ ಮೇಲೆ ತೋಡಿರುವ ಗುಂಡಿಯೊಳಗೆ ಹಾಲು ಹಾಕುವುದರಿಂದ ಇದಕ್ಕೆ ' ಹಾಲುಗಂಬ ' ಎಂದೂ ಕರೆಯುತ್ತಾರೆ.

ಇದೊಂದು ಪ್ರಮುಖವಾದ ಸಂಪ್ರದಾಯ. ಮುಹೂರ್ತಕಂಬ ನೆಡುವ ಈ ಸಮಾರಂಭವು ಮದುವೆ ಸಂಭ್ರಮದ ಪ್ರಾರಂಭದ ದಿನ ಕಂಬದ ತುದಿಯಲ್ಲಿರುವ ಶಿಲುಬೆಯು ವಿವಾಹ ಜೀವನಕ್ಕೆ ಕ್ರಿಸ್ತನ ಮಾರ್ಗದರ್ಶನವನ್ನು ಸೂಚಿಸುತ್ತದೆ. ಗುಂಡಿಯಲ್ಲಿ ಹಾಕುವ ನವಧಾನ್ಯಗಳು ವಧುವರರ ಸಂತಾನಾಭಿವೃದ್ಧಿಯನ್ನು ಪಡೆಯಲೆಂದು ಹಾರೈಸುವುದರ ಸಂಕೇತವಾಗಿರುತ್ತದೆ. ಹಾಲು ಮತ್ತು ಕಾಸು ಅವರು ಸಂಪದ್ಭರಿತವಾದ ಜೀವನವನ್ನು ನಡೆಸಲೆಂಬುದನ್ನು ಸೂಚಿಸುತ್ತದೆ. ಬಾಳೆಯ ಕಂಬ ಅದರ ಎಲೆ, ಕಾಯಿ, ಹಣ್ಣು, ದಿಂಡು, ನಾರು ಎಲ್ಲವೂ ಪರರಿಗೆ ಉಪಯುಕ್ತವಾಗಿರುವಂತೆ ವಧುವರರು ಪರೋಪಕಾರ ಗುಣವನ್ನು ತಮ್ಮ ಜೀವನದಲ್ಲೂ ಬೆಳೆಸಿಕೊಳ್ಳಲಿ ಎಂಬುದನ್ನು ಸೂಚಿಸುತ್ತದೆ.

ತೆಂಗಿನಗರಿಯ ಚಪ್ಪರ ಹಾಕುವುದು ಸಿದ್ಧಿ ಕ್ರೈಸ್ತರ ವಿಶೇಷ. ದೊಡ್ಡ ಚಪ್ಪರವನ್ನು ಹಾಕಿಸುವುದು ಅವರ ದೊಡ್ಡ ಮನಸ್ಸನ್ನು ಪ್ರತಿಬಿಂಬಿಸುತ್ತದೆ. ವಧುವರರು ಋಣಾನುಬಂಧ ದಿಂದ ಒಂದಾಗುವ ನಂಬಿಕೆಯನ್ನು ಹೊಂದಿರುವ ಇವರು ತಮ್ಮ ಮದುವೆಯ ಹಾಡುಗಳಿಗೆ "ವ್ಹೊವ್ಯೊ" ಎನ್ನುತ್ತಾರೆ. ಮದುವೆ ಸಂಭ್ರಮದ ಒಂದೆರಡು ಹಾಡುಗಳನ್ನು ಇಲ್ಲಿ ಉದಾಹರಿಸಬಹುದಾಗಿದೆ:

ಮುಲ್ಕೆ ಪೊಡ್ಲೆ ಮೊಡಾರ್
ಕಾರ್ಕೊಳ್ ವ್ಹೆಲೆಂ ವೊಡಿಕ್
ಥೈಂ ಅಸ್ಲೆ ಭಡಿತ್ ಅಮ್ಚಾ
ವೊಕ್ಲೆಕ್.
ಅಮ್ಚಾ ಫಿರಾ ಮುಕಾರ್
ಅಸಾ ವ್ಹೊಡ್ ಪಾಗಾರ್
ವ್ಹೊಡ್ ಅಸಾ ಆಧಾರ್
ಎಜ್ಮಾನ್ಯಾಕ್ ಜಾಂವ್ಯಾಂಗೆಲೋ

**4.11 ಮಂಗಳಸ್ನಾನ** ಕನ್ನಡ ಮತ್ತು ತಮಿಳು ಕ್ರೈಸ್ತರು ಮದುವೆಗೆ ಮೂರು ದಿನಗಳಿರುವಾಗ ವಧುವರರಿಗೆ ಮಂಗಳಸ್ನಾನ ಮಾಡಿಸುತ್ತಾರೆ. ಹೆಸರುಕಾಳನ್ನು ನುಣ್ಣಗೆ ಅರೆದು ಒಂದು ಬಟ್ಟಲಿನಲ್ಲಿಡುತ್ತಾರೆ. ಅರಿಸಿನ ಮತ್ತು ಗಂಧವನ್ನು ಇನ್ನೊಂದು ಬಟ್ಟಲಿನಲ್ಲಿಡುತ್ತಾರೆ. ಹೆಣ್ಣನ್ನು ಮಣೆಯ ಮೇಲೆ ಕೂರಿಸಿ ಮುತ್ತೈದೆಯರು ಒಬ್ಬೊಬ್ಬರಾಗಿ ಬಂದು ಬಟ್ಟಲಿನ ಮಿಶ್ರಣವನ್ನು ತೆಗೆದುಕೊಂಡು ಹೆಣ್ಣಿನ ಕೆನ್ನೆ, ಭುಜ ಮತ್ತು ಕಾಲಿಗೆ ಹಚ್ಚುತ್ತಾರೆ. ಗಂಡಿಗೂ ಅವರ ಮನೆಯಲ್ಲಿ ಇದೇ ಕ್ರಮವನ್ನು ಪಾಲಿಸಿ ಮಂಗಳಸ್ನಾನ ಮಾಡಿಸುತ್ತಾರೆ.

ಸಿದ್ಧಿ ಕ್ರೈಸ್ತರು ಮಂಗಳಸ್ನಾನಕ್ಕೆ 'ರೋಸ್' ಎಂದು ಕರೆಯುತ್ತಾರೆ. ' ರೋಸ್ ' ಎಂದರೆ ತೆಂಗಿನಹಾಲು ಎಂದರ್ಥ. ಮಂಗಳಸ್ನಾನ ಮಾಡಿಸುವ ಮೊದಲು ಹೆಣ್ಣನ್ನು ಮಣೆಯ ಮೇಲೆ ಕೂರಿಸಿ ಕೊಬ್ಬರಿಎಣ್ಣೆ ಹಚ್ಚುತ್ತಾರೆ. ಹಚ್ಚುವಾಗ ಸಾಂಪ್ರದಾಯಿಕ ಹಾಡುಗಳನ್ನು ಹಾಡುವುದು ರೂಢಿಯಲ್ಲಿದೆ:

ಕಾನಿಂ ತಾಳ್ವೆ ತೇಲ್ ಘಾಲ್ನೆ
ಸರ್ವ್ಯೆಂ ಅಂಗಾರ್ ದೆವ್ಲೆಂ
ಅಪುರ್ ಬಾಯ್ಚೆಂ ಬಾವ್ಲೆಂ
ಅಮ್ಚಿ ವ್ಹೊಕಾಲ್ ಬ್ಯಾ.[1]

ಎಣ್ಣೆ ಹಚ್ಚಿದ ಅನಂತರ ನೆತ್ತಿಗೆ, ಕಿವಿಗೆ, ಕೈಗಳಿಗೆ ತೆಂಗಿನಹಾಲನ್ನು ಹಚ್ಚುತ್ತಾರೆ. ಇದರಿಂದ ವಧುವಿನ ಸೌಂದರ್ಯ ಹೆಚ್ಚುತ್ತದೆ, ಮದುವೆಯ ಕಳೆ ಬರುತ್ತದೆ ಎಂದು ಹೇಳುತ್ತಾರೆ.

**4.12 ಸಂಧಿಸುವಿಕೆ** ಮದುವೆಯ ಹಿಂದಿನ ದಿನ ಹೂವು ಹಣ್ಣುಗಳೊಂದಿಗೆ ಒಂದು ಲಗ್ನಪತ್ರಿಕೆ ಇಟ್ಟು, ವಧುವರರ ಕಡೆಯವರು ಗುರುಗಳನ್ನು ಆಹ್ವಾನಿಸಲು ಹೋಗುತ್ತಾರೆ. ಇದಕ್ಕೆ 'ಸಂಧಿಸುವಿಕೆ' (ಸಂಧಿಷ್ಟು) ಎನ್ನುವರು.

ಡೋರ್ನಹಳ್ಳಿಯಲ್ಲಿ ಮದುವೆಗೆ ಹಿಂದಿನ ದಿನ ನಡೆಯುವ ಶಾಸ್ತ್ರಗಳಲ್ಲಿ ವಿಶೇಷತೆ ಕಂಡುಬರುತ್ತದೆ. ಮದುವೆಯ ಹಿಂದಿನ ದಿನ ಸಂಜೆ ವರನ ತಲೆಗೆ ಹೊಸವಸ್ತ್ರವನ್ನು ಕಟ್ಟಿ ಹೆಣ್ಣಿನ ಮನೆಗೆ ಕರೆತಂದು ಮಣೆಯ ಮೇಲೆ ಗಂಡು ಹೆಣ್ಣನ್ನು ಕೂರಿಸಿ ಮನೆಯವರೆಲ್ಲಾ ಅರಿಸಿನ ಹಚ್ಚುತ್ತಾರೆ. ಅನಂತರ ಅಲ್ಲಿ ನೆರೆದಿರುವ ಬಳಗದ ಜನರೂ, ನೆರೆಹೊರೆಯವರೂ ಇಬ್ಬರಿಗೂ ಅರಿಸಿನ ಹಚ್ಚುತ್ತಾರೆ. ಬಳಿಕ ಹೆಣ್ಣಿನ ಕಡೆಯವರು ಹೆಣ್ಣನ್ನು ಗಂಡಿನ ಮನೆಗೆ ಕರೆದುಕೊಂಡು ಬಂದು, ಅಲ್ಲಿಯೂ ಬಳಗದ, ಊರಿನ ಜನರೆಲ್ಲಾ ಇಬ್ಬರಿಗೂ ಅರಿಸಿನ ಹಚ್ಚುತ್ತಾರೆ. ಇದಕ್ಕೆ 'ಬಳಗದ ಅರಿಸಿನ' ಎಂದು ಹೇಳುತ್ತಾರೆ. ಅಗಸನನ್ನು ಕರೆಸಿ ವರನ ತಲೆಗೆ ಕಟ್ಟಿರುವ ವಸ್ತ್ರದಲದಲ್ಲಿ ಅಕ್ಕಿ, ಬೆಲ್ಲ, ಕಾಯಿ, ಎಲೆಅಡಿಕೆ ಇಟ್ಟು ವಧುವಿನ ಸೋದರ ಮಾವನಿಂದ ರೂಪಾಯಿಯನ್ನು ಅವನಿಗೆ ಕೊಡಿಸುವರು. ಈ ಹಣಕ್ಕೆ 'ಮಿರಾಜ್' ಎನ್ನುತ್ತಾರೆ. ವಧುವನ್ನು ತಾಯಿಯ ಮನೆಗೆ ಕರೆತಂದು ಮಂಗಳಸ್ನಾನ ಮಾಡಿಸುತ್ತಾರೆ. ಇಷ್ಟಾಗುವ ಹೊತ್ತಿಗೆ ಬೆಳಗಾಗಿರುತ್ತದೆ. ಬೆಳಗಿನ ಜಾವಕ್ಕೆ ವರನ ಕಡೆಯವರು ಹೆಣ್ಣಿಗೆ ತಂದಿರುವ ಒಡವೆ, ವಸ್ತ್ರಗಳನ್ನು ತೆಗೆದುಕೊಂಡು ವಾದ್ಯ ಸಹಿತ ವಧುವಿನ ಮನೆಗೆ ಬರುತ್ತಾರೆ. ವಧುವನ್ನು ಅಲಂಕರಿಸಿ ಚರ್ಚಿಗೆ ಕರೆದೊಯ್ಯುತ್ತಾರೆ.

ವಿವಾಹವನ್ನು ಚರ್ಚಿನಲ್ಲಿಯೇ ಗುರುಹಿರಿಯರ ಸಮ್ಮುಖದಲ್ಲಿ ನೆರವೇರಿಸಬೇಕಾಗುತ್ತದೆ. ವಧು-ವರರ ಕಡೆಯಿಂದ ಇಬ್ಬಿಬ್ಬರು ಸಾಕ್ಷೀದಾರರು ಸಹಿ ಮಾಡಬೇಕಾಗುತ್ತದೆ. ಸಿದ್ಧಿ ಕ್ರೈಸ್ತರು ತಾಳಿಯ ಬದಲಾಗಿ ಉಂಗುರವನ್ನೇ ಹಾಕುವರು. ಈ ಉಂಗುರವು ಸಮತಟ್ಟಾಗಿದ್ದು, ಅದರ ಮೇಲೆ ಒಂದು ಶಿಲುಬೆಯ ಗುರುತು ಇರುತ್ತದೆ. ಕೆಲವರು ಆ ಶಿಲುಬೆಯ ಮೇಲೆ ಸಣ್ಣದೊಂದು ಹರಳನ್ನೂ ಇರಿಸುತ್ತಾರೆ. ಆದರೆ ತಮಿಳು ಮತ್ತು ಕನ್ನಡ ಕ್ರೈಸ್ತರು ತಾಳಿಯನ್ನು ಅರಿಸಿನದ ದಾರದಲ್ಲಿ ಕಟ್ಟುವ ಸಂಪ್ರದಾಯವನ್ನೇ ಉಳಿಸಿಕೊಂಡಿದ್ದಾರೆ. ತಾಳಿಯನ್ನು ವರನ ಮನೆಯವರೇ ಮಾಡಿಸಬೇಕು. ಅದು ಹೃದಯಾಕಾರದಲ್ಲಿ ಅಥವಾ ಕಾಸಿನಂತೆ ದುಂಡಾದ ಆಕಾರದಲ್ಲಿರುತ್ತದೆ. ಸಾಮಾನ್ಯವಾಗಿ ವರನ ತಾಯಿ ಬಯಸುವ ಆಕಾರದಲ್ಲಿ ತಾಳಿಯನ್ನು ಮಾಡಿಸುವುದು ವಾಡಿಕೆ. ಅದರ ನಡುವೆ ಶಿಲುಬೆಯ ಗುರುತು ಇರುತ್ತದೆ. ಇಚ್ಛಿಸಿದವರು ಶಿಲುಬೆಯ ಗುರುತಿಗೆ ಪೂರ್ಣವಾಗಿ ಹರಳನ್ನಿಡಿಸುತ್ತಾರೆ. ಅಥವಾ ಒಂದೇ ಒಂದು ಹರಳನ್ನಿಡಿಸುವುದು ಉಂಟು. ಎಷ್ಟೇ ಒಡವೆಗಳನ್ನು ಹಾಕಿದರೂ ತಾಳಿಯನ್ನು ದಾರದಲ್ಲೇ ಕಟ್ಟುವ ಪದ್ಧತಿ ಇತ್ತು. ಇತ್ತೀಚೆಗೆ ಚಿನ್ನದ ಸರದಲ್ಲಿಯೂ ತಾಳಿಯನ್ನು ಪೋಣಿಸಿ ಕಟ್ಟುತ್ತಾರೆ.

ಸಿದ್ಧಿ ಕ್ರೈಸ್ತರು ತಾಳಿಕಟ್ಟುವ ಸಮಯದಲ್ಲಿ ಹೆಣ್ಣಿಗೆ ಬಿಳಿಯಸೀರೆ, ಬಿಳಿಯರವಿಕೆ ತೊಡಿಸುವುದು ರೂಢಿಯಲ್ಲಿದೆ. ಕೇಶಾಲಂಕಾರ ಮಾಡಿ ಬಿಳಿಯ ಹೂವಿನ ದಂಡೆ ಮುಡಿಸಿ ಬಿಳಿಯ ಮುಸುಕು ವಸ್ತ್ರವನ್ನು ಹೊದಿಸಿ, ತಲೆಯಮೇಲೆ ಬಿಳಿಯ ಮುತ್ತುಗಳಿಂದ ಮಾಡಿದ ಕಿರೀಟ (ರೀತ್) ವನ್ನಿಡುತ್ತಾರೆ. ಕಿವಿ, ಕೊರಳು, ಕೈಗಳಿಗೆ ಬಿಳಿಯ ಮುತ್ತಿನ ಅಥವಾ ಬಿಳಿಯ ಹರಳಿನ ಒಡವೆಗಳನ್ನು ತೊಡಿಸುತ್ತಾರೆ. ಅರತಕ್ಷತೆಯ ಸಮಯದಲ್ಲಿ ಬಿಳಿಯ

ಉಡುಪುಗಳನ್ನು ತೆಗೆದು, ಗಂಡಿನ ಮನೆಯವರು ತಂದಿರುವ ರೇಷ್ಮೆ ಸೀರೆಯನ್ನು ಉಡಿಸುತ್ತಾರೆ. ಆಗ ಸಾಂಪ್ರದಾಯಿಕ ಹಾಡುಗಳನ್ನು ಹಾಡುವುದು ರೂಢಿಯಲ್ಲಿದೆ.

ಸೊಡು ಸೊಡು ತುಜೆನೆಸಾಣ್
ಅಂಕ್ವಾರ್ ಪೊಣಾಚೆಂ ಸೆಸ್ ಅಡ್ಲಾ
ಹಮೀ ಪುಲ್ ಬಂಗಾರಾಚ[2]

ಬಿಳಿಯಬಣ್ಣ ಪರಿಶುದ್ಧತೆಯ ಸಂಕೇತವಾಗಿದೆ. ಕನ್ಯೆ ಪರಿಶುದ್ಧಳು ಎಂಬ ಅರ್ಥದಿಂದ ಈ ಹಾಡನ್ನು ಹಾಡುತ್ತಾರೆ. ಬಣ್ಣದ ಸೀರೆ ಉಡಿಸಿದ ಮೇಲೆ ಹೂ ಮುಡಿಸುವ ಶಾಸ್ತ್ರವಿದೆ. ವಧುವಿನ ಹೆರಳಿಗೆ ಕನಕಾಂಬರ ಹೂವನ್ನು ತೂಗುವಂತೆ ಮುಡಿಸುತ್ತಾರೆ. ಪ್ರತಿಯೊಬ್ಬರು ಮುಡಿಸುವಾಗಲೂ ಸಾಂಪ್ರದಾಯಿಕ ಹಾಡುಗಳನ್ನು ಹಾಡುತ್ತಾರೆ.

ಫುಲ್ ಬಂಗಾರ್ ಮಾಳ್ನೆವೊಕ್ಡಾ
ಸೊಬಿಲಿ ತಾಳ್ವೆರ್ ಅಬೊಲಿಂ
ಪುಲಾ ಬಾಂಗಾರಾಚೆಂ[3]

ಹೆಚ್ಚು ಮಂದಿ ಹೂ ಮುಡಿಸುವುದರಿಂದ ಹಗುರವಾಗಿರುವ ಕನಕಾಂಬರ ಹೂವನ್ನೇ ಮುಡಿಸುವುದು ಹಾಡಿನಲ್ಲಿ ವ್ಯಕ್ತವಾಗುತ್ತದೆ.

ಕನ್ನಡ, ತಮಿಳು ಕ್ರೈಸ್ತರಲ್ಲಿ, ಹೆಣ್ಣಿಗೊಪ್ಪುವ ಯಾವುದಾದರೂ ಬಣ್ಣದ ಜರಿಸೀರೆಯನ್ನು ಹಾಗೂ ಕೈತುಂಬಾ ಗಾಜಿನ ಬಳೆಗಳನ್ನೂ, ಕಾಲುಂಗುರುವನ್ನೂ ತೊಡಿಸುತ್ತಾರೆ.

**4.13 ದೇವಾಲಯದಲ್ಲಿ ವಿವಾಹ ಸಂಸ್ಕಾರ** ಚರ್ಚಿನ ಹೆಬ್ಬಾಗಿಲಿನ ಬಳಿಯಿಂದ ವಧೂವರರಿಗೆ ತೀರ್ಥ ಪ್ರೋಕ್ಷಿಸಿ, ಗುರುಗಳು ಪೀಠದ ಬಳಿಗೆ ಕರೆದೊಯ್ಯುತ್ತಾರೆ. ಪೀಠದ ಮುಂದೆ ಅಲಂಕರಿಸಿದ ಎರಡು ಕುರ್ಚಿಯಲ್ಲಿ ವರ ಆತನ ಎಡಪಕ್ಕದಲ್ಲಿ ವಧುವನ್ನು ಕೂರಿಸುತ್ತಾರೆ. ಅಂದಿನ ಪೂಜೆ ವಿವಾಹಕ್ಕೆಂದೇ ರಚಿಸಿರುವ ವಿಶೇಷ ಪ್ರಾರ್ಥನೆಗಳಿಂದ ಕೂಡಿರುತ್ತದೆ. ತಾಳಿಕಟ್ಟುವ ಮುನ್ನ ಗುರುಗಳು (Priest) ವಧೂವರರ ಪರಸ್ಪರ ಸಮ್ಮತಿಯನ್ನು ನೆರೆದಿರುವ ಸಭಿಕರ ಮುಂದೆ ಕೇಳುತ್ತಾರೆ. ವಧುವರರು ಪರಸ್ಪರರು ಕೈಹಿಡಿದು " ಜೀವನದ ಕಷ್ಟಗಳಲ್ಲೂ, ಸುಖಗಳಲ್ಲೂ ಸಮಭಾಗಿಯಾಗಿರುತ್ತೇನೆ " ಎಂದು ಹೇಳುವುದರ ಮೂಲಕ ಪ್ರಮಾಣವಚನ ಸ್ವೀಕರಿಸಿದ ಬಳಿಕ ವರನ ಕೈಗೆ ಗುರುಗಳು ಮಾಂಗಲ್ಯವನ್ನು ಕೊಡುವರು ಹಾಗೂ " ಪಿತ, ಸುತ ಮತ್ತು ಪವಿತ್ರಾತ್ಮನ ನಾಮದಲ್ಲಿ ಈ ತಾಳಿಯನ್ನು ಕಟ್ಟಿಸುವ ಮೂಲಕ ನಾನು ನಿಮ್ಮ ವಿವಾಹವನ್ನು ಜರುಗಿಸುತ್ತೇನೆ " ಎಂದು ಹೇಳುತ್ತಾರೆ.

ಪೂಜಾ ವೇಳೆಯಲ್ಲಿ ನವದಂಪತಿಗಳು ಸುಖಜೀವನ ನಡೆಸಲು ಬುದ್ಧಿಮಾತುಗಳನ್ನು ಹೇಳುವ ಮೂಲಕ ಹಾರೈಸುವರು. ಪೂಜೆ ಮುಗಿದ ಬಳಿಕ ವಧುವರರ ಹಾಗೂ ಸಾಕ್ಷೀದಾರರಿಂದ ನೋಂದಣಿ ಪುಸ್ತಕದಲ್ಲಿ ರುಜು ಮಾಡಿಸಿಕೊಂಡು, ಹೂವಿನ ಹಾರಗಳನ್ನು ನವದಂಪತಿಗಳ ಕೈಗೆ ಕೊಟ್ಟು ವಿನಿಮಯ ಮಾಡಿಸುತ್ತಾರೆ; ಅನಂತರ ನೆಂಟರಿಷ್ಟರೊಡನೆ ಮನೆಗೆ ತೆರಳುತ್ತಾರೆ.ಹಾಗೆಯೇ ಹೆಣ್ಣನ್ನು ಹಸುವಿಗೆ ಹೋಲಿಸುವುದು ಸಹಾ ಸತ್ ಸಂಪ್ರದಾಯವಲ್ಲ ಆದರೆ ಪುರುಷ ಪ್ರದಾನ ಸಮಾಜ ಯಾವುದೇ ದರ್ಮವಾಗಿರಲಿ ತನ್ನ ಹಿರಿಮೆಯನ್ನು ಮರೆಯುವುದನ್ನು ಕಾಣುತ್ತೇವೆ.

ವಧುವರರನ್ನು ಮನೆಗೆ ಕರೆತಂದಾಗ ವಧುವಿನ ಕಿರಿಯ ಸೋದರ ಬಾಗಿಲಿಗೆ ಒನಕೆಯನ್ನು ಅಡ್ಡ ಹಿಡಿದು " ಹೆಣ್ಣು ಕೊಡ್ತೀಯೊ ಹೊನ್ನು ಕೊಡ್ತೀಯೋ?" ಎಂದು ಕೇಳುತ್ತಾನೆ. ಆಗ ವಧು ನಾಚಿ ಏನೂ ಹೇಳದಿದ್ದರೆ ಅಲ್ಲಿರುವವರು ಬಲವಂತವಾಗಿ ಅವಳಿಂದ " ಹೆಣ್ಣು ಕೊಡ್ತೀನಿ" ಎಂದು ಹೇಳಿಸುತ್ತಾರೆ. ಒಳಗೆ ಬಂದ ಮೇಲೆ ಪ್ರಾರ್ಥನೆ ಸಲ್ಲಿಸಿ ಲಘು ಉಪಹಾರ ಸ್ವೀಕರಿಸಿ ಆರತಕ್ಷತೆಗೆ ಕೂರಿಸುತ್ತಾರೆ. ಬಂದಿರುವ , ಬಂಧುಮಿತ್ರರು ಉಡುಗೊರೆಗಳನ್ನು ನೀಡಿ ವಧು ವರರನ್ನು ಆಶೀರ್ವದಿಸಿ ಔತಣದಲ್ಲಿ ಪಾಲ್ಗೊಳ್ಳುತ್ತಾರೆ.

ಕನ್ನಡ ಕ್ರೈಸ್ತರಲ್ಲಿ ಚರ್ಚಿನಲ್ಲಿ ವಿವಾಹವಿಧಿ ಮುಗಿದ ಮೇಲೆ ವಧುವಿನ ಗೃಹಕ್ಕೆ ವಧುವರರನ್ನು ಕರೆತಂದು ಹತ್ತು-ಹನ್ನೆರಡು ವರ್ಷದ ಬಾಲಕಿಯ ಕೈಯಿಂದ ಅವರ ಕಾಲು ತೊಳೆಸಿ ಭೋಜನಕ್ಕೆ ಅಣಿಮಾಡುವರು. ಭೋಜನದ ತರುವಾಯ ವಧೂವರರನ್ನು ವಾದ್ಯದೊಡನೆ ಛತ್ರಿಯಡಿಯಲ್ಲಿ ಗಂಡಿನ ಮನೆಗೆ ಕರೆದೊಯ್ಯುತ್ತಾರೆ. ಅಲ್ಲಿ ಇಬ್ಬರಿಗೂ ಶಿಲುಬೆಯ ಗುರುತಿರುವ ಬಾಸಿಂಗವನ್ನು ಕಟ್ಟುತ್ತಾರೆ. ವಧುವರರ ನಡುವೆ ಒಂದು ತೆರೆಹಿಡಿದು ಮೂರುಸಲ ಒಂದೊಂದು ಬೊಗಸೆ ಅಕ್ಕಿಯನ್ನು ಪರಸ್ಪರರ ತಲೆಯ ಮೇಲೆ ಹಾಕಿಸುವುದು ಪದ್ದತಿ. ಹುಡುಗಿ ಕುಳ್ಳಗಿದ್ದರೆ ಸೋದರಮಾವ ಅವಳನ್ನು ಮೇಲೆ ಎತ್ತಿ ಹಿಡಿದು, ಅಕ್ಕಿಯನ್ನು ವರನ ತಲೆಯಮೇಲೆ ಹಾಕಿಸುತ್ತಾನೆ. ಇದಾದ ಮೇಲೆ "ತೆರವಿನ ಹಣ" ತೆಗೆದುಕೊಳ್ಳಿ ಎಂದು ವರನ ಕಡೆಯವರು ಹೇಳುತ್ತಾರೆ. 'ಬೇಡ ನಾವು ಹುಡುಗಿಯನ್ನು ಮಾರುತ್ತಿಲ್ಲ' ಎಂದು ವಧುವಿನ ಕಡೆಯವರು ಹೇಳುವರು, 'ನೀವು ತೆಗೆದುಕೊಳ್ಳಲೇ ಬೇಕು' ಎಂದು ಹೇಳಿ ದೃಢಕಾಯನಾಗಿರುವ ಒಬ್ಬನನ್ನು ನಿಲ್ಲಿಸಿ, ಕಂಚಿನತಟ್ಟೆ ಇಟ್ಟು ತೆರವಿನ ಹಣ ಹದಿನೈದು ರೂಪಾಯಿಗಳ ನಾಣ್ಯಗಳನ್ನು ಒಂದೊಂದಾಗಿ 'ಒಂದು ವರಹಾ, ಎರಡು ವರಹಾ' ಎಂದು ಹೇಳುತ್ತ ರಭಸವಾಗಿ ಕಂಚಿನ ತಟ್ಟೆಗೆ ಹಾಕುವುದು ಪದ್ಧತಿ'. ಹಾಕುವಾಗ ಧಣೀರ್, ಧಣೀರೆಂದು ಶಬ್ದವಾಗಬೇಕು. ಕೊನೆಯಲ್ಲಿ ಇದು 'ಹಗ್ಗದ ಕಾಸು' ಎಂದು ಮೂರುಕಾಸಿನ ನಾಣ್ಯವೊಂದನ್ನು ಹಾಕುತ್ತಾನೆ. ಹೀಗೆ ಮಾಡುವುದರಿಂದ 'ನಾವು ಹಣಕೊಟ್ಟು ಒಂದು ಹಸುವನ್ನು ಕೊಂಡೆವು. ಅದರ ಮೂಗುದಾರದ ಕಾಸನ್ನೂ ಕೊಟ್ಟು ಬಿಟ್ಟಿದ್ದೇವೆ' ಎಂದು ತಿಳಿಸುವುದು ಇದರ ಉದ್ದೇಶ.ಆರಂಬದ ದಿನಗಳಲ್ಲಿ ವಧುವಿನ ಮನೆ ಯವರಿಗೆ ಆರ್ಥಿಕ ನೆರವು ನೀಡುವ ಸಲುವಾಗಿ ಹುಟ್ಟಿಕೊಂಡಿರುವ ತೆರ ಪದ್ಧತಿ ಕ್ರಮೇಣ ಒಂದು ಆಚರಣೆಯಾಗಿ ಮಾತ್ರ ಉಳಿದುಕೊಂಡು ಬಂದಿದೆ. ಅಂದು ೯ ಅಥವಾ ೧೨ ಚಿನ್ನದ ನಾಣ್ಯಗಳನ್ನು ತೆರನೀಡಿದರೆ ಅದು ಕೇವಲ ನಂಬಿಕೆಯ ಆಚರಣೆಯಾಗುತ್ತದೆಂಬುದನ್ನು ಹೊರತು ಆದರಿಂದ ಯಾವ ಸಹಾಯವಾಗುವುದಿಲ್ಲ ಎಂಬುದು ಸ್ಪಷ್ಟ.[4]

ಈ ಸಂಪ್ರದಾಯಗಳು ಮದುವೆಯ ಸಂಭ್ರಮವನ್ನು ಹೆಚ್ಚಿಸುವ ಸಲುವಾಗಿಯೇ ಉಳಿದುಕೊಂಡು ಬಂದಿರುವಂಥದ್ದಾದರೂ ಇದರಲ್ಲೇನೂ ಹೆಚ್ಚು ಕಡಿಮೆಯಾಗುವಂತಿಲ್ಲ. ಆಗಿದ್ದಾದರೆ ದೊಡ್ಡ ಜಗಳಗಳಿಗೆ ಕಾರಣವಾಗಿ ಬಿಡುತ್ತದೆ. 'ತೆರ' ಕಟ್ಟುವಾಗ ಕಂಚಿನತಟ್ಟೆ ಬದಲು ಸ್ಟೀಲ್ ತಟ್ಟೆ ಇಟ್ಟರೆ, ಅಥವಾ ನಾಣ್ಯ ಹಾಕಲು ಇಳಿ ವಯಸ್ಸಿನವನನ್ನು ನಿಲ್ಲಿಸಿದರೆ ಹೆಣ್ಣಿನ ಕಡೆಯವರು ತಮ್ಮ ಪ್ರತಿಷ್ಠೆಗೆ ಭಂಗವಾಯಿತೆಂದು ತಿಳಿದು ವೈಮನಸಿಗೆ ಎಡೆ ಮಾಡಿಕೊಟ್ಟಿರುವ ಉದಾಹರಣೆಗಳು ಉಂಟು.

**4.14 ಧಾರೆ** ವಧು-ವರರನ್ನು ಎದುರು-ಬದುರಾಗಿ ಕೂರಿಸಿ ಇಬ್ಬರ ಹಸ್ತಗಳನ್ನೂ ಕೂಡಿಸಿ ಕೈಯಲ್ಲಿ ತೆಂಗಿನಕಾಯಿ, ವೀಳೆಯದೆಲೆ, ಅಡಿಕೆಯನ್ನು ಕೊಡುತ್ತಾರೆ. ಬಂದಿರುವ

ಬಂಧುಗಳೆಲ್ಲರೂ ಸಾಲಾಗಿ ಬಂದು ಒಬ್ಬೊಬ್ಬರಾಗಿ ಮೂರುಸಲ ಹಾಲನ್ನು ಅವರ ಕೈಗಳ ಮೇಲೆ ಹಾಕುತ್ತಾರೆ. ಆಗ ಅಲ್ಲೇ ನಿಂತಿರುವ ಉಪದೇಶಿ ಪ್ರತಿಸಲ " ಪಿತನಾಂ, ಸುತನಾಂ, ಪವಿತ್ರಾತ್ಮನಾಂ, ಆಮೆನ್" ಎಂದು ಹೇಳುತ್ತಾನೆ. ಆಹ್ವಾನಿತ ಬಂಧುಗಳೆಲ್ಲರೂ ಇದನ್ನೇ ಅನುಸರಿಸಿ ಧಾರೆ ಎರೆಯುತ್ತಾರೆ. ಹಿಂದೆ ಈ ಸಂದರ್ಭದಲ್ಲಿ 'ಪರಲೋಕದಲ್ಲಿರುವ ನಮ್ಮ ತಂದೆಯೇ (Our father in heaven) ಎಂಬ ಪ್ರಾರ್ಥನೆಯನ್ನು ಸಂಸ್ಕೃತದಲ್ಲಿ ಸಲ್ಲಿಸಲಾಗುತ್ತಿತ್ತು[5]. (ಅನುಬಂಧ 1 ನೋಡಿ) ಆದರೆ ಈಗ ಕನ್ನಡದಲ್ಲಿಯೇ ಹೇಳುತ್ತಾರೆ.

ಇಷ್ಟಾದ ಮೇಲೆ ಇಬ್ಬರನ್ನೂ ಕುರ್ಚಿಯಲ್ಲಿ ಕುಳ್ಳಿರಿಸಿ. ಬಂಧು ಬಳಗದವರೆಲ್ಲ ಉಡುಗೊರೆಗಳನ್ನು ನೀಡುತ್ತಾರೆ. ವಧುವರರನ್ನು ಆರತಕ್ಷತೆ ಮುಗಿಸಿ ಎಬ್ಬಿಸುವಾಗ ವರನು ವಧುವನ್ನು ಕುರಿತು " ಅತ್ತೆಯ ಮಗಳೇ, ಮಲ್ಲಿಗೆ ಹರಳೇ ನನ್ಜಾಗ ಬಿಟ್ಟು ನಿನ್ಜಾಗಕ್ಕೆ ಹೋಗು" ಎನ್ನುವನು. ವಧುವು ವರನನ್ನು ಉದ್ದೇಶಿಸಿ "ಮಾವನ ಮಗನೇ ಮುತ್ತಿನ ಚೆಂಡೇ ನನ್ಜಾಗ ಬಿಟ್ಟು ನಿನ್ಜಾಗಕ್ಕೆ ಹೋಗಿ" ಎನ್ನುವಳು. ಹೇಳಲು ನಾಚಿಕೊಂಡರೂ, ಹೇಳಲು ಬರುವುದಿಲ್ಲವೆಂದರೂ ಹೇಳುವತನಕ ಅಲ್ಲಿರುವ ಗುಂಪು ಬಿಡುವುದಿಲ್ಲ.

ಅಷ್ಟರಲ್ಲಿ, ಮಾಂಸದೂಟದ ಏರ್ಪಡಾಗಿರುತ್ತದೆ. ಇದನ್ನು ' ಖಾರದೂಟ ' ಎನ್ನುವರು. ಭೋಜನದ ತರುವಾಯ ಬೀದಿ ಮೆರವಣಿಗೆ, ವರನ ಕಡೆಯವರೊಂದು ಕಡೆ, ವಧುವಿನ ಕಡೆಯವರೊಂದು ಕಡೆ ಸೇರಿಕೊಳ್ಳುವರು. ಪರಸ್ಪರ ಜರಿದು ಹಾಡುತ್ತ ನಕ್ಕು ನಲಿದು ಸಮಾರಂಭಕ್ಕೆ ಸಂಭ್ರಮದ ಮೆರುಗು ಕೊಡುವರು.

4.15 **ಮರಣ ಸಂಸ್ಕಾರ** ಮಾನವನ ಜೀವನದಲ್ಲಿ ಹುಟ್ಟು-ಆಕಸ್ಮಿಕ ಸಾವು ಅನಿವಾರ್ಯ. ಹುಟ್ಟಿದವನು ಒಮ್ಮೆ ಸಾಯಲೇಬೇಕು ಎಂಬುದು ಸಾರ್ವತ್ರಿಕ ಸತ್ಯ. ಜೀವನದ ಪ್ರತಿಯೊಂದು ಹಂತದಲ್ಲಿಯೂ ಆಚರಿಸುವ ವಿಧ್ಥೀವಿಧಾನಗಳು ಸಮಾಜದಿಂದ ಸಮಾಜಕ್ಕೆ ಭಿನ್ನವಾಗಿರುವುದಲ್ಲದೇ ಸಾಮ್ಯತೆಗಳು ಕಂಡುಬರುತ್ತವೆ.

**4.16 ಅಂತಿಮ ಸಂಸ್ಕಾರ** ಕ್ರೈಸ್ತರು ಮರಣ ಸಂಸ್ಕಾರದಲ್ಲಿ ವಿಶಿಷ್ಟವಾದ ವಿಧಿ-ವಿಧಾನಗಳನ್ನು ಹೊಂದಿರುತ್ತಾರೆ. ಅವುಗಳಲ್ಲಿ 'ಅಂತಿಮ ಅಭ್ಯಂಗ' ಬಹು ಮುಖ್ಯವಾದದ್ದು. ಮರಣ ಸಮೀಪಿಸಿತೆಂದು ತಿಳಿದಾಗ ತಮ್ಮ ವಿಚಾರಣಾ ಗುರುಗಳಿಗೆ (Parish Priest) ಸುದ್ದಿ ತಲುಪಿಸುವರು. ಗುರುಗಳು ಮನೆಗೆ ಆಗಮಿಸಿ ವಿಶೇಷ ಪ್ರಾರ್ಥನೆಗಳನ್ನು ಸಲ್ಲಿಸಿ, ತೀರ್ಥ ಪ್ರೋಕ್ಷಿಸಿ, ಪವಿತ್ರೀಕರಿಸಿದ ಎಣ್ಣೆಯಿಂದ ಕಣ್ಣು, ಕಿವಿ, ಮೂಗು, ಬಾಯಿ, ಕೈಕಾಲುಗಳಿಗೆ ಅಭ್ಯಂಜನ ಮಾಡಿ " ಕರುಣಾಮಯಿಯಾದ ದೇವರು, ನಿನ್ನ ಜೀವಮಾನ ಕಾಲದಲ್ಲಿ ನೀನು ಕಣ್ಣು, ಕಿವಿ, ನಾಲಿಗೆ ಹಾಗೂ ಸ್ಪರ್ಶದಿಂದ ಮಾಡಿದ ಎಲ್ಲಾ ಪಾಪಗಳನ್ನು ಕ್ಷಮಿಸಲಿ " ಎಂದು ಹೇಳುತ್ತಾರೆ. ಸಾಯುತ್ತಿರುವ ವ್ಯಕ್ತಿ ಮಾತನಾಡಲು ಶಕ್ತನಾಗಿದ್ದರೆ ಅವನಿಂದ ಪಾಪನಿವೇದನೆ ಮಾಡಿಸಿ, ಪ್ರಸಾದವನ್ನು ನೀಡುವುದುಂಟು. ಹೀಗೆ ಅಂತಿಮ ಅಭ್ಯಂಗ ಸ್ವೀಕರಿಸಿ ಮೃತನಾಗುವ ವ್ಯಕ್ತಿ ಸ್ವರ್ಗಕ್ಕೆ ಹೋಗುತ್ತಾನೆಂಬ ನಂಬಿಕೆ ಇದೆ. ಕೆಲವೊಮ್ಮೆ ಅಂತಿಮ ಅಭ್ಯಂಗ ಸ್ವೀಕರಿಸಿದ ವ್ಯಕ್ತಿ ಸಾವಿನಿಂದ ಪಾರಾಗಿರುವ ಉದಹಾರಣೆಗಳು ಇವೆ ಎಂದು ತಿಳಿದುಬರುತ್ತದೆ.

ವ್ಯಕ್ತಿ ಮೃತನಾದನೆಂದು ವಿಚಾರಣಾ ಗುರುಗಳಿಗೆ ತಿಳಿಸಿದರೆ ಅವರು ಚರ್ಚಿನಿಂದ ಒಂದು ಶಿಲುಬೆ ಮತ್ತು ಎರಡು ಮೇಣದ ಬತ್ತಿಯ ಕಂಬಗಳನ್ನು ಕಳುಹಿಸುತ್ತಾರೆ. ಅದನ್ನು ಮೃತನ ತಲೆಯ ಹತ್ತಿರ ಇಡಲಾಗುತ್ತದೆ. ಹಳ್ಳಿಗಳಲ್ಲಿ ಸತ್ತವರ ಸುದ್ದಿಯನ್ನು ಭಂಧು ಭಳಗ

ದವರಿಗೆಲ್ಲ ತಿಳಿಸುವ ವ್ಯಕ್ತಿಗೆ ' ಕುಳುವಾಡಿ ' ಎಂದು ಕರೆಯುವರು. ಸಾವಿನ ಸಂಸ್ಕಾರದಲ್ಲಿ ಕುಳುವಾಡಿಯ ಪಾತ್ರ ಜವಾಬ್ದಾರಿಯುತವಾದದ್ದು.

ಮೈಸೂರು ಜಿಲ್ಲೆಯ ತಮಿಳು ಮತ್ತು ಕೊಂಕಣಿ ಮಾತನಾಡುವ ಕ್ರೈಸ್ತರು ವ್ಯಕ್ತಿ ಸತ್ತ ಕೂಡಲೇ ಪಾರ್ಥಿವ ಶರೀರಕ್ಕೆ ಸ್ನಾನ ಮಾಡಿಸುವ ಕ್ರಮವಿದೆ. ಮೊದಲು ಮಕ್ಕಳು ಹಾಗೂ ಮನೆಯವರು, ಅನಂತರ ಬಂಧು ಬಳಗದವರು ಶವದ ಮೇಲೆ ಒಂದೊಂದು ಚೆಂಬು ನೀರು ಹಾಕುವರು. ಬಳಿಕ ಶುಭ್ರವಾದ ಉಡುಪು ತೊಡಿಸಿ ನಡುಮನೆಯಲ್ಲಿ ಮಂಚದ ಮೇಲೆ, ಬಿಳಿಯ ಬಟ್ಟೆ ಹಾಸಿ ಮಲಗಿಸುತ್ತಾರೆ. ಆದರೆ ಕನ್ನಡ ಕ್ರೈಸ್ತರಲ್ಲಿ ಈ ಆಚರಣೆ ಭಿನ್ನವಾಗಿರುವುದನ್ನು ಕಾಣಬಹುದು. ಮನೆಯ ಮುಂದೆ ಬೆಂಕಿಹಾಕಿ, ಹಂಡೆಯಲ್ಲಿ ನೀರು ಕಾಯಿಸುತ್ತಾರೆ. ಅದರ ಸತ್ತ ಕೂಡಲೇ ಶವಕ್ಕೆ ಸ್ನಾನ ಮಾಡಿಸುವುದಿಲ್ಲ. ಹಾಗೆಯೇ ಮಲಗಿಸಿದ್ದು ಬಂಧು ಬಳಗದವರಲ್ಲಿ ಬಂದುದನ್ನು. ಖಚಿತ ಪಡಿಸಿಕೊಂಡು ಹೆಣ ಎತ್ತಲು ಇನ್ನೊಂದು ಗಂಟೆ ಸಮಯವಿದ್ದಾಗ ಮನೆಯ ಮುಂದೆಯೇ ತೆರೆಕಟ್ಟಿ, ಸ್ನಾನಮಾಡಿಸಿ, ಶುಭ್ರವಾದ ಉಡುಪು ಹಾಕಿ, ಶವದ ಪೆಟ್ಟಿಗೆಯಲ್ಲಿ ಮಲಗಿಸುತ್ತಾರೆ. ಆಗ ಶವವನ್ನು ಮತ್ತೆ ಮನೆಯೊಳಗೆ ಒಯ್ಯದೆ ಚರ್ಚಿಗೆ ಒಯ್ಯುತ್ತಾರೆ. ಮನೆಯ ಮುಂದೆ ಬೆಂಕಿ ಹಾಕುವುದು, ಹೊರಗೆ ಸ್ನಾನ ಮಾಡಿಸುವುದು ಇತ್ಯಾದಿಗಳು ಹಿಂದೂ ಧರ್ಮೀಯರಲ್ಲಿ ರೂಢಿಯಲ್ಲಿರುವ ಸಂಪ್ರದಾಯಗಳಾಗಿವೆ. ಕನ್ನಡ ಕ್ರೈಸ್ತರಲ್ಲಿ ಇಂದಿಗೂ ಈ ಪದ್ಧತಿಗಳು ಮುಂದುವರೆದಿರುವುದು ಇವರ ಪೂರ್ವಜರ ಅನುಕರಣೆಯಾಗಿದ್ದು ಕ್ರೈಸ್ತರಾದ ಬಳಿಕವೂ

"ಜನರ ಸಂಪ್ರದಾಯದ ಪ್ರಕಾರ ಸಾಯಲಿಕ್ಕಾದವನನ್ನು ಮಂಚದ ಮೇಲೆ ಇರಗೊಡದಿರ ಬಹುದು. ಏಕೆಂದರೆ ಹಾಗಾದರೆ ಅವನ ಬಂಧು ಬಳಗಕ್ಕೆ ಅಶುಭವೆಂಬ ಭಾವನೆಯಿರಬಹುದು" (ಪೈ: 1978:98). ಈ ಹೇಳಿಕೆಗೆ ತದ್ವಿರುದ್ಧವಾಗಿ ಮೈಸೂರು ಜಿಲ್ಲೆಯ ಕ್ರೈಸ್ತರ ಸಂಪ್ರದಾಯವಿದೆ. ಸಾಯಲಿರುವ ವ್ಯಕ್ತಿಯನ್ನು ನೆಲದ ಮೇಲಾಗಲೀ ಮನೆಯಿಂದ ಹೊರಗಾಗಲೀ ಮಲಗಿಸುವ ಪದ್ಧತಿ ಕ್ರೈಸ್ತರಲ್ಲಿಲ್ಲ. ಸತ್ತಮೇಲೆಯೂ ನಡುಮನೆಯಲ್ಲಿ ಮಂಚದ ಮೇಲೆಯೇ ಮಲಗಿಸುವ ಕ್ರಮವಿದೆ. ಬಂಧುಬಳಗದವರೂ, ನೆರೆ-ಹೊರೆಯವರೂ ಹೂವು, ಮೇಣದಬತ್ತಿ, ಸಾಂಬ್ರಾಣಿಯನ್ನು ತಂದುಕೊಟ್ಟು, ಪ್ರಾರ್ಥನೆ ಮಾಡಿ, ಶೋಕಗೀತೆಗಳನ್ನು ಹಾಡುತ್ತಾರೆ. ಸಾಮಾನ್ಯವಾಗಿ ಕ್ರೈಸ್ತರು ಶವವನ್ನು ಒಂದು ರಾತ್ರಿ ಮನೆಯಲ್ಲಿಡುವರು ಆದರೆ ಸತ್ತಾಗಿನಿಂದ ಇಪ್ಪತ್ನಾಲ್ಕು ಗಂಟೆಗಳ ನಿಯುಮಿತ ಅವಧಿ-ಯೊಳಗೆ ಶವಸಂಸ್ಕಾರವಾಗಬೇಕು. ಪ್ರತಿಯೊಬ್ಬರೂ ಎಚ್ಚರವಿದ್ದು ಶವದ ಸುತ್ತಲೂ ಕುಳಿತು ಪ್ರಾರ್ಥನೆ, ಭಜನೆಗಳನ್ನು ಮಾಡುತ್ತಾರೆ. ಮೇಣದ ಬತ್ತಿಗಳು ಕರಗಿ ಹೋದಂತೆ ಮತ್ತೆ ಮತ್ತೆ ಹಚ್ಚುತ್ತಾರೆ. ಧೂಪವನ್ನು ಹಾಕುವುದುಂಟು.

ಶವಸಂಸ್ಕಾರಕ್ಕೆ ಬೇಕಾದ ಪೆಟ್ಟಿಗೆಯನ್ನು ಮನೆಯ ಮುಂದೆಯೇ ಸಿದ್ಧಪಡಿಸಲಾಗುವುದು. ಈ ಕೆಲಸಕ್ಕೆ ಬಂಧು-ಬಳಗದವರೊಡನೆ ನೆರೆ-ಹೊರೆಯವರೂ ಸಹಕರಿಸುವುದುಂಟು ಶವದ ಪೆಟ್ಟಿಗೆಯ ಒಳಭಾಗಕ್ಕೆ ಬಿಳಿಬಟ್ಟೆಯ ಹೊದಿಕೆ ಹಾಗೂ, ಹೊರಭಾಗಕ್ಕೆ ಕಪ್ಪುಬಟ್ಟೆಯ ಹೊದಿಕೆಯೂ ಇರುತ್ತದೆ. ಹೊರ ಭಾಗದ ಕಪ್ಪುಬಟ್ಟೆಯ ಹೊದಿಕೆಯ ಅಂಚಿಗೆ ಜರಿ ಟೇಪನ್ನು ಹಚ್ಚುವರು. ಮುಚ್ಚುಹಲಗೆಯ ಮೇಲೆ ಶಿಲುಬೆಯ ಆಕಾರದಲ್ಲಿ ಜರಿ ಟೇಪನ್ನು ಹೊಂದಿಸಲಾಗಿರುತ್ತದೆ. ಅನುಕೂಲವಿದ್ದವರು ಬೆಲೆಬಾಳುವ ಮರದಪೆಟ್ಟಿಗೆಯನ್ನು ಮಾಡಿಸುತ್ತಾರೆ. ಇದಕ್ಕೆ ಬಟ್ಟೆಯ ಹೊದಿಕೆಯ ಅಗತ್ಯವಿರುವುದಿಲ್ಲ. ಆದರೆ ಇದು ಇತ್ತೀಚಿನ ಬದಲಾಣೆಯಾಗಿದ.

ಮೈಸೂರು ತಮಿಳು ಕ್ರೈಸ್ತರಲ್ಲಿ ಸತ್ತವ್ಯಕ್ತಿಯನ್ನು ನೆನಸಿಕೊಂಡು ಗುಣಗಾನಮಾಡಿ ದುಃಖಿಸುವ ಪದ್ಧತಿ ಕಂಡುಬರುತ್ತದೆ[6]. ಅಣ್ಣ ಸತ್ತಾನ ತನ್ನ ದುಃಖವನ್ನು ದೇವರೂ ಬಗೆಹರಿಸಲಾರ ಎಂಬ ನೋವು ತಂಗಿಯ ಹಾಡಿನಲ್ಲಿ ವ್ಯಕ್ತವಾಗಿದೆ.

ತೇಕ್ ಮರಂ ಪೊಳುಂದು
ತೇರುಕ್ಕೊರು ಪೊಟ್ಟಸೈದು
ಪೊಟ್ಟಿಕ್ಕೋರ್ ಸಣ್ಣ ಕಂಬಿ
ಪೋಗುದಯ್ಯ ಚಿನ್ನ ಕಂಬಿ
ಚಟ್ಟಿ ವಂಡಿ ಉಳ್ಳಾಲೇ
ಸೂರ್ಯರ್ ಎನ್ ಪೆರುಪ್ಪು
ನಾನೇಟ್ಟ ವರಲಾರೆ
ಸರಣಂ ಸಂಜೇನೆ
ಸರಣಂ ಸೈಯವೇಂಡಾ
ಉನ್ ಸಂಜಲಿಪ್ಪೆ ಸೊಲ್ಲಿಮುನ್ನೆ
ಸಾಯಂಗಾಲಂ ಆಗಿವಿಡುಂ[7]

ಹೀಗೆಯೇ ನಾಲ್ಕಾರು ಚರಣಗಳಲ್ಲಿ ಶವದ ಪೆಟ್ಟಿಗೆಗೆ ಉಪಯೋಗಿಸುವ ಮರಗಳ ಹೆಸರುಗಳು ತಿಳಿದುಬರುತ್ತವೆ. ಸ್ಮಶಾನಕ್ಕೆ ಶವವನ್ನು ಸಾಗಿಸಲು, ಚರ್ಚಿನಲ್ಲಿರುವ ಗಾಜಿನ ಕಿಟಕಿ ಗಳಿಂದ ಕೂಡಿದ ಗಾಡಿಯನ್ನು ಹಾಡಿನಲ್ಲಿ ಪ್ರಸ್ತಾಪಿಸಲಾಗಿದೆ.

ಗಂಡ ತೀರಿಕೊಂಡಾಗ ವಿಧವೆ ಅನೇಕ ವಿಶೇಷ ಆಚರಣೆಗಳಿಗೆ ಗುರಿಯಾಗಬೇಕಾಗುತ್ತದೆ. ಆಕೆಗೆ ಸ್ನಾನಮಾಡಿಸಿ ಕೆಂಪುಸೀರೆ ಉಡಿಸುವರು. ಆ ಸೀರೆಯನ್ನು ಹತ್ತಿರದ ಸಂಬಂಧಿಕರು ತಂದುಕೊಡುತ್ತಾರೆ. ತಲೆತುಂಬಾ ಹೂವು ಮುಡಿಸಿ, ಗಾಜಿನ ಬಳೆಗಳನ್ನು ಹಾಕಿ, ಅರಿಸಿನ ಕುಂಕುಮ ಹಚ್ಚುತ್ತಾರೆ. ಸತ್ತ ವ್ಯಕ್ತಿಗೆ ಮಗನಿದ್ದರೆ ಹೆಣ ಎತ್ತುವ ಮುನ್ನ ವಿಧವೆಯ ಮಾಂಗಲ್ಯವನ್ನು ತಿರುಗಿಸಿ ಹಾಕುವುದುಂಟು. ಆಗ ಮನೆಯ ಹೆಣ್ಣುಮಕ್ಕಳೂ, ಇತರ ಸ್ತ್ರೀಯರೂ ದುಖ ತಪ್ತರಾಗಿ ಅಳುತ್ತಾರೆ. ಈ ಸಂಪ್ರದಾಯಗಳು ಕೊಂಕಣಿ ಕ್ರೈಸ್ತರಲ್ಲಿ ಕಂಡುಬರುವುದಿಲ್ಲ. ಸತ್ತವಳು ಮುತ್ತೈದೆಯಾದರೆ ಅವಳಿಗೆ ಅರಿಸಿನ, ಕುಂಕುಮ ಹಚ್ಚಿ, ಆಕೆಯ ಪತಿಯಿಂದ ಅಂತಿಮವಾಗಿ ಹೂಮಾಲೆಯನ್ನು ಹಾಕಿಸಿ, ಮಾಂಗಲ್ಯದ ದಾರದಿಂದ ಮಾಂಗಲ್ಯವನ್ನು ಬಿಚ್ಚಿ ಅರಿಸಿನದ ಕೊನೆಯನ್ನು ಕಟ್ಟುತ್ತಾರೆ[8].

ಅವಿವಾಹಿತರು ಸತ್ತಾಗ ಅವರಿಗೆ ಬಿಳಿಯ ಉಡುಪನ್ನು ತೊಡಿಸಿ ಪೆಟ್ಟಿಗೆಗೂ ಬಿಳಿಯ ಬಟ್ಟೆಯನ್ನೇ ಉಪಯೋಗಿಸುತ್ತಾರೆ. ಅದರಿಂದಲೇ ಕೋಪ ನೆತ್ತಿಗೇರಿದಾಗ ಜಗಳದಲ್ಲಿ 'ನೀನು ಬಿಳೀ ಪೆಟ್ಟಿಗೇಲೆ ಹೋಗೋದು' ಎಂದು ಅವಿವಾಹಿತರನ್ನು ಶಪಿಸುವುದು ರೂಢಿಯಲ್ಲಿದೆ. ಸತ್ತವ್ಯಕ್ತಿ ಸ್ತ್ರೀಯಾಗಲೀ, ಪುರುಷನಾಗಲಿ ಅಂತಿಮ ಸಂಸ್ಕಾರಕ್ಕೆ ಬರುವ ಸಂಬಂಧಿಕರು ಎರಡು ಮೀಟರ್ ಬಿಳಿಯ ಬಟ್ಟೆಯನ್ನು ತಂದು ಶವದಮೇಲೆ ಹೊದಿಸುವುದು ಸಂಪ್ರದಾಯ[9]. ಇದಕ್ಕೆ 'ಕೋಡಿ' ಎನ್ನುವರು. ಹೀಗೆ 'ಕೋಡಿ' ಹೊದಿಸಿ ಸಂಬಂಧದ ಋಣ ತೀರಿಸಬೇಕೆಂಬ ನಂಬಿಕೆಯಿದೆ.

**4.17 ಸ್ಮಶಾನಯಾತ್ರೆ** ಶವ ತೆಗೆಯುವ ಸಮಯವನ್ನು ಚರ್ಚಿಗೆ ಮೊದಲೇ ತಿಳಿಸಿ, ಸಮಾಧಿಗೆ ಸ್ಥಳದ ಶುಲ್ಕವನ್ನು ಕಟ್ಟಿ ಅಪ್ಪಣೆ ಚೀಟಿಯನ್ನು ಪಡೆದಿರಬೇಕು. ಇಲ್ಲವಾದರೆ ಸಮಾದಿ ಹಳ್ಳ ತೆಗೆಯಲು ಅನುಮತಿ ನೀಡುವುದಿಲ್ಲ. ಜಿಲ್ಲಾ ಕೇಂದ್ರ ಪ್ರದೇಶದಲ್ಲಿರುವ ಚರ್ಚ್‌ಗಳಲ್ಲಿ ಶವವನ್ನು ಸ್ಮಶಾನಕ್ಕೆ ಒಯ್ಯಲು ವಾಹನ ಸೌಕರ್ಯ ಮಾಡಿದ್ದಾರೆ. ಆದರೆ ಗ್ರಾಮೀಣ ಪ್ರದೇಶಗಳಲ್ಲಿ ಮಾತ್ರ ಶವವನ್ನು ನಾಲ್ಕು ಮಂದಿ ಹೊತ್ತುಕೊಂಡೇ ಹೋಗಬೇಕು. ಇದರಿಂದಲೇ 'ತೋಳು ಕೊಡಲು ಒಬ್ಬ ಮಗನಿರಬೇಕು' ಎಂಬ ಮಾತು ರೂಢಿಯಲ್ಲಿದೆ. ಚರ್ಚಿನ ಶಿಷ್ಯನೊಬ್ಬ[10] ಶಿಲುಬೆಯನ್ನು ಹಿಡಿದುಕೊಂಡು ಮುಂದೆ ಹೋದರೆ (ಗುರುಗಳ ಪೂಜೆ ಸಲ್ಲಿಸುವಾಗ ಸಹಾಯಕನಾಗಿ ಕಾರ್ಯನಿರ್ವಹಿಸುತ ಓರ್ವ ಬಾಲಕ) ಅವನ ಹಿಂದೆ ಎರಡು ಸಾಲುಗಳಲ್ಲಿ ಜನರೂ, ಶವದ ಪಟ್ಟಿಗೆ ಹೊತ್ತವರು ಅಥವಾ ಶವಪೆಟ್ಟಿಗೆಯ ಗಾಡಿಯೂ ಸಾಗುವುದು ಕ್ರಮ. ದಾರಿಯುದ್ದಕ್ಕೂ ಜನರು ಪ್ರಾರ್ಥನೆಯನ್ನೂ, ಶೋಕ ಗೀತೆಗಳನ್ನೂ ಹೇಳುತ್ತಾ ಚರ್ಚಿಗೆ ಆಗ ಮಿಸುವರು. ಚರ್ಚಿನಲ್ಲಿ ಪೀಠದ ಮುಂದೆ ದೊಡ್ಡ ಮೇಜನ್ನಿರಿಸಿ, ಅದರ ಮೇಲೆ ಶವಪೆಟ್ಟಿಗೆಯನ್ನಿಟ್ಟು ಅಂದಿನ ಪೂಜಾ ಪ್ರಾರ್ಥನೆಗಳು ಶವಸಂಸ್ಕಾರಕ್ಕಾಗಿಯೇ ರಚಿಸಿದವುಗಳಾಗಿರುತ್ತವೆ. ಪೂಜೆಯ ಸಂದರ್ಭದಲ್ಲಿ ಗುರುಗಳು ಮೃತನಾಗಿರುವ ವ್ಯಕ್ತಿಯ ಬಗೆಗೆ ನಾಲ್ಕಾರು ಮಾತುಗಳನ್ನು ಹೇಳಿ ಅವರ ಆತ್ಮಕ್ಕೆ ಶಾಂತಿಯನ್ನು ಕೋರುತ್ತಾರೆ. ಪೂಜೆ ಮುಗಿದ ತರುವಾಯ ಗುರುಗಳು ಶವದ ಬಳಿ ಬಂದು ತೀರ್ಥ ಮತ್ತು ಧೂಪಗಳಿಂದ ಶವವನ್ನು ಪವಿತ್ರೀಕರಿಸುತ್ತಾರೆ. ಆ ಸಮಯದಲ್ಲಿ ಜನರೆಲ್ಲರೂ 'ಲೀಬೆರಾಮೇದೋಮೀನೆ'[11] ಎಂಬ ಲ್ಯಾಟಿನ್ ಹಾಡನ್ನು ಹಾಡುವುದು ಇಂದಿಗೂ ರೂಢಿಯಲ್ಲಿದೆ. ( ಮೂರು ದಶಕದ ಹಿಂದೆ ಚರ್ಚಿನ ಎಲ್ಲಾ ಪೂಜಾವಿಧಿಗಳು ಲ್ಯಾಟಿನ್ ಭಾಷೆಯಲ್ಲೆ ಇದ್ದುದರಿಂದ ಜನರಿಗೆ ಇಂದಿಗೂ ಅವುಗಳು ನೆನೆಪಿನಿಂದ ಮಾಸಿಲ್ಲಾ)

ಅನಂತರ ಶವವನ್ನು ವಾಹನದಲ್ಲಿರಿಸಿ ಅಥವಾ ಹೊತ್ತು ಶಿಸ್ತಿನಿಂದ ಎರಡು ಸಾಲುಗಳಲ್ಲಿ, ಪ್ರಾರ್ಥನೆ ಮಾಡುತ್ತ, ಶೋಕ ಗೀತೆಗಳನ್ನು ಹಾಡುತ್ತಬಂಧು ಬಳಗದವರೆಲ್ಲರು ಸ್ಮಶಾನಯಾತ್ರೆಯಲ್ಲಿ ಪಾಲ್ಗೊಳ್ಳುವರು. ಶವವನ್ನು ಹೂಳುವ ಮುನ್ನ ಗುರುಗಳು ಸಮಾಧಿಯ ಹಳ್ಳಕ್ಕೆ ತೀರ್ಥಪ್ರೇಕ್ಷಣೆಯಿಂದ ಪವಿತ್ರೀಕರಿಸಿ "ದೇವರೇ ಈತನ ಮೇಲೆ ದಯೆತೋರಿರಿ. ಈ ಲೋಕದಲ್ಲಿ ಬಾಳಿದಷ್ಟು ಕಾಲ ಈ ನಿಮ್ಮ ಸೇವಕ (ಹೆಸರನ್ನು ಹೇಳುವರು) ವಿಶ್ವಾಸದಿಂದಲೇ ಬದುಕಿದ್ದಾನೆ. ಸತ್ತ ಅನಂತರವೂ ಈತ ಪರಲೋಕದಲ್ಲಿ ನಿಮ್ಮ ದೇವದೂತರೊಡನೆ ಒಂದಾಗಲೆಂದು ನಮ್ಮ ಕರ್ತ ಯೇಸುಕ್ರಿಸ್ತರ ಮುಖಾಂತರ ಪ್ರಾರ್ಥಿಸುತ್ತೇವೆ ಆಮೆನ್" ಎಂದು ಪ್ರಾರ್ಥಿಸುತ್ತಾರೆ. ಆಗ ಎಲ್ಲರೂ ಕೊನೆಯ ಬಾರಿಗೆ ಮೃತನ ಮುಖವನ್ನು ನೋಡಿಕೊಳ್ಳುತ್ತಾರೆ. ಮಕ್ಕಳನ್ನೂ, ಒಡಹುಟ್ಟಿದವರನ್ನೂ ಮುಂದಕ್ಕೆ ಕರೆತಂದು ಮುಖ ತೋರಿಸುತ್ತಾರೆ. ಅನಂತರ ಗುರುಗಳ ಸಮ್ಮುಖದಲ್ಲಿ ಶವದ ಪೆಟ್ಟಿಗೆಯ ಮುಚ್ಚಳವನ್ನು ಮುಚ್ಚಿ ಮೊಳೆ ಹೊಡೆಯುತ್ತಾರೆ. ಹಗ್ಗಗಳ ಮೂಲಕ ಪೆಟ್ಟಿಗೆಯನ್ನು ಗುಳಿಯಲ್ಲಿ ಇಳಿಸಿದ ಬಳಿಕ ಮೊದಲಿಗೆ ಗುರುಗಳು ಗುಳಿಯಲ್ಲಿ ಮೂರು ಹಿಡಿ ಮಣ್ಣನ್ನು ಹಾಕಿದರು. ಅನಂತರ ಮಕ್ಕಳೂ, ಬಂಧು ಬಳಗದವರು ಗೆಳೆಯರೂ, ನೆರೆದಿರುವವರೆಲ್ಲರೂ ಮೂರು ಹಿಡಿ ಮಣ್ಣನ್ನು ಹಾಕುತ್ತಾರೆ[12]. " ನಾ ಸತ್ತಾಗ ಮೂರು ಹಿಡಿ ಮಣ್ಣುಕೊಟ್ಟರೆ ಸಾಕು" ಎಂದು ಮನಸ್ತಾಪವಿರುವವರ ಬಳಿ ಹೇಳುವುದುಂಟು. ಮಣ್ಣುಕೊಡುವುದು ಕರ್ತವ್ಯ ಮತ್ತು ಪುಣ್ಯದ ಕೆಲಸ ಎಂಬ ನಂಬಿಕೆ ಇವರಲ್ಲದೆ ಮಣ್ಣನ್ನೆಲ್ಲಾ ಎಳೆದು ಗುಳಿಯನ್ನು ಮುಚ್ಚಿ ತಂದಿರುವ

ಮರದ ಅಥವಾ ಕಬ್ಬಿಣದ ಶಿಲುಬೆಯನ್ನು ತಲೆಯ ಭಾಗದಲ್ಲಿ ನೆಟ್ಟು, ಎಲ್ಲಾ ಹೂವುಗಳನ್ನೂ, ಸಮಾಧಿಯ ಮೇಲೆ ಹಾಕಿ, ಉಳಿದಿರುವ ಮೇಣದ ಬತ್ತಿಗಳನ್ನು ಹಚ್ಚುತ್ತಾರೆ. ಆಗ ಮೂರನೇ ದಿನದ ಹಾಲು ತುಪ್ಪಕ್ಕೆ ಬರಬೇಕಾದ ಸಮಯವನ್ನು ಮೂರುಸಲ ಸಾರಿ ಹೇಳುವನು (ಹೀಗೆ ಹೇಳಲೇಬೇಕಾದ್ದು ಪದ್ಧತಿ). ಶವಸಂಸ್ಕಾರದಲ್ಲಿ ಪ್ರತಿಯೊಬ್ಬರು ಮೃತನ ಮನೆಗೆ ಬಂದು ದೀಪ ನೋಡಿ ಹೋಗಬೇಕು. ಆ ದೀಪ ಮೂರು ದಿನಗಳ ತನಕ ಆರದಂತೆ ಉರಿಸುವುದು ವಾಡಿಕೆ.ಈ ಕ್ರಮವೂ ಸಹ ಹಿಂದೂಗಳಲ್ಲಿ ಇರುವ ಸಂಪ್ರದಾಯವನ್ನೆ ಹೋಲುತ್ತದೆ.

ಮೃತನು ತನ್ನ ಜೀವಮಾನಕಾಲದಲ್ಲಿ ಆದರ್ಶ ಜೀವನ ನಡೆಸಿದ್ದರೆ ಈ ಎಲ್ಲಾ ಕಾರ್ಯಕ್ರಮಗಳೂ ಅಡ್ಡಿಯಿಲ್ಲದೆ ಜರುಗುತ್ತವೆ. ಅವನು ಅಕ್ರಮಜೀವನ ನಡೆಸಿದ್ದರೆ ಅಂದರೆ ವ್ಯಭಿಚಾರಿಯೋ, ಕೊಲೆಗಾರನೋ ಆಗಿದ್ದರೆ ಅಥವಾ ಆತ್ಮಹತ್ಯೆ ಮಾಡಿಕೊಂಡಿದ್ದರೆ ಅವನನ್ನು ಚರ್ಚಿಗೆ ತಂದು ಪೂಜಾ ವಿಧಿಗಳನ್ನು ಅರ್ಪಿಸುವುದಿಲ್ಲ. ಇಂಥವರ ಶವಸಂಸ್ಕಾರದಲ್ಲಿ ಗುರುಗಳ ಪಾತ್ರವೇನೂ ಇರುವುದಿಲ್ಲ. ಸ್ಮಶಾನದಲ್ಲಿ ಸ್ಥಳ ಮಾತ್ರ ಕೊಡುತ್ತಾರೆ. ಹಿಂದೆ ಇಂಥವರಿಗೆ ಇತರರ ಸಮಾಧಿಗಿಂತ ಎಂಟು ಅಡಿ ದೂರದಲ್ಲಿ ಸ್ಥಳಕೊಡುತ್ತಿದ್ದುದ್ದು ಸಾಮಾನ್ಯವಾಗಿತ್ತು. ಆದರೆ ಇತ್ತೀಚೆಗೆ ಇಂತಹ ಪ್ರತ್ಯೇಕತೆಯೇನೂ ಕಂಡುಬರುವುದಿಲ್ಲ. "ಆತ್ಮಹತ್ಯೆ ಮಹಾಪರಾಧ, ಆತ್ಮದೇವರ ಪ್ರತಿರೂಪ" ಎಂಬ ನಂಬಿಕೆ ಕ್ರೈಸ್ತರಲ್ಲಿ ಪ್ರಬಲವಾಗಿದೆ. ಸತ್ತಮೇಲೆ ಮತ್ತೊಂದು ಜೀವನ ಇದೆ ಎಂಬ ನಂಬಿಕೆ ಕ್ರೈಸ್ತರ ಎಲ್ಲ ಪ್ರಾರ್ಥನೆಗಳಲ್ಲೂ ಕಂಡುಬರುತ್ತದೆ.

1. ಮೂರು ಹಿಡಿಮಣ್ಣು ಮೂರು ಉದ್ದೇಶಗಳಿಗಾಗಿ ಎಂದು ಹೇಳುತ್ತಾರೆ.
   (1) ಧರ್ಮಸಭೆಯ ಪರವಾಗಿ (2) ವಿಚಾರಣೆಯ ಪರವಾಗಿ (3) ವೈಯಕ್ತಿಕವಾಗಿ.

**4.18 ಹಾಲುತುಪ್ಪ** ಮೂರನೇ ದಿನ 'ಹಾಲುತುಪ್ಪ' ಮಾಡುವ ಪದ್ಧತಿ ಹಿಂದೂಗಳಲ್ಲಿರುವಂತೆ ಮೈಸೂರು ಜಿಲ್ಲೆಯ ಕ್ರೈಸ್ತರಲ್ಲೂ ಇದೆ. ಮೂರನೇ ದಿನ ಬಂಧು ಬಳಗದವರು ಸಮಾಧಿಗೆ ಹೋಗಿ, ಮೇಣದ ಬತ್ತಿ ಹಚ್ಚಿ ಹೂವು ಅರ್ಪಿಸಿ ಪ್ರಾರ್ಥನೆ ಸಲ್ಲಿಸುವರು. ಅನಂತರ ಎಲ್ಲರೂ ಸ್ವಲ್ಪ ಸ್ವಲ್ಪ ಹಾಲನ್ನು ಸಮಾಧಿಯ ಮೇಲೆ ಹಾಕುತ್ತಾರೆ. ಗಂಡ ಸತ್ತಿದ್ದರೆ, ವಿಧವೆಯನ್ನು ಕರೆದೊಯ್ದು ಆಕೆಯ ಬಳೆಗಳನ್ನೆಲ್ಲಾ ಸಮಾಧಿಯ ಮೇಲೆ ಘಟ್ಟಿಸಿ ಒಡೆಯುವರು ಶವಸಂಸ್ಕಾರದಲ್ಲಿ ಪಾಲ್ಗೊಂಡಿದ್ದವರು ಮೂರನೇ ದಿನದ 'ಹಾಲುತುಪ್ಪ'ಕ್ಕೆ ಮೃತನ ಮನೆಯಲ್ಲಿ ಮಾಂಸಾಹಾರ ಭುಜಿಸದಿದ್ದರೆ ನಲವತ್ತು ದಿನಗಳ ತನಕ ಮಾಂಸಾಹಾರ ಮಾಡಬಾರದೆಂದು ನಿಯಮವಿದೆ. ಆದ್ದರಿಂದ ಸ್ವಲ್ಪವಾದರೂ ಮಾಂಸದಡುಗೆಯನ್ನು ಸಿದ್ದಪಡಿಸಿ ಬಂಧು ಬಳಗಕ್ಕೆ ಬಡಿಸುವರು.

'ಎಡೆ' ಇಕ್ಕುವ ಪದ್ಧತಿ ಕ್ರೈಸ್ತರಲ್ಲೂ ರೂಢಿಯಲ್ಲಿದೆ. ಮಾಡಿದ ಅಡುಗೆಯನ್ನು ಸತ್ತ ವ್ಯಕ್ತಿಯ ಭಾವಚಿತ್ರದ ಮುಂದೆ ಬಡಿಸಿ ಸಾಮೂಹಿಕ ಪ್ರಾರ್ಥನೆ ಸಲ್ಲಿಸುತ್ತಾರೆ. ಪ್ರಾರ್ಥನೆ ಮುಗಿದ ಬಳಿಕ ಕುಳುವಾಡಿಯು ದೀಪವನ್ನು ಆರಿಸಿ, ಚರ್ಚಿನಿಂದ ಕೊಟ್ಟಿರುವ ಶಿಲುಬೆ ಮತ್ತು ಮೇಣದಬತ್ತಿಯ ಕಂಬಗಳನ್ನು ತೆಗೆದುಕೊಂಡು ಹೋಗುತ್ತಾನೆ. ಅವನು ಹೋಗುವಾಗ ಯಾರೂ ನೋಡಬಾರದೆಂದು ಮನೆಯ ಎಲ್ಲಾ ದೀಪಗಳನ್ನು ಆರಿಸುತ್ತಾರೆ. ಅವನು ಹೊರಟು ಹೋದದನ್ನು ಖಚಿತ ಪಡಿಸಿ ದೀಪ ಹಚ್ಚಬೇಕು ಆ ದೀಪವು ನಲವತ್ತು ದಿನಗಳವರೆಗೆ ಆರಿಹೋಗದೆ ಉರಿಯುತ್ತಲೇ ಇರುವಂತೆ ಎಚ್ಚರಿಕೆವಹಿಸುವರು.

**4.19 ಮೋಕ್ಷ ದೀಪ** ನಲವತ್ತನೇ ದಿನದ ಪೂಜೆಗೆ 'ಮೋಕ್ಷದೀಪ' ಎನ್ನುತ್ತಾರೆ. ಮೃತನ ಭಾವಚಿತ್ರದ ಹಿಂದೆ ಜನನ-ಮರಣದ ದಿನಾಂಕವನ್ನೂ, ಆತ್ಮಶಾಂತಿಯನ್ನು ಕೋರುವ ಸಣ್ಣ ಪ್ರಾರ್ಥನೆಯನ್ನೂ ಮುದ್ರಿಸಿ ಬಂದುಬಳಗದವರಿಗೆ ಹಂಚುವರು ಚರ್ಚಿನಲ್ಲಿ ಪೂಜೆ ಅರ್ಪಿಸಿದ

ಮೇಲೆ ಮನೆಯಲ್ಲಿ ಬಂಧುಗಳೆಲ್ಲ ಒಂದುಗೂಡಿ ಮೃತನ ಭಾವಚಿತ್ರದ ಮುಂದೆ ಮೇಣದಬತ್ತಿಗಳನ್ನು ಉರಿಸಿ, ಒಂದು ಗಂಟೆಯ ಕಾಲ ಸಾಮೂಹಿಕ ಪ್ರಾರ್ಥನೆ ಮಾಡುತ್ತಾರೆ. ಸತ್ತವರಿಗೆ ಪೂಜೆ ಅರ್ಪಿಸಿದರೆ ಅವರ ಆತ್ಮಕ್ಕೆ ಶಾಂತಿ ಲಭಿಸುತ್ತದೆ ಎಂಬ ನಂಬಿಕೆ ಇದೆ. ಕೆಲವರು ಪ್ರತಿತಿಂಗಳೂ ಪೂಜೆ ಅರ್ಪಿಸುವುದೂ ಉಂಟು. ವರ್ಷಕ್ಕೊಮ್ಮೆ ಸ್ಮಾರಕ ತಿಥಿಯನ್ನು ಮಾಡುವಾಗ. ಕುಟುಂಬದ ಸದಸ್ಯರು ಮಾತ್ರ ಒಂದುವರು.

ನಲವತ್ತನೇ ದಿವಸ ಸಾಮೂಹಿಕ ಪ್ರಾರ್ಥನೆ ಮುಗಿದ ಬಳಿಕ ಎಲ್ಲರಿಗೂ ಊಟದ ವ್ಯವಸ್ಥೆ ಉಂಟು . ಸತ್ತವರ ಬಗೆಗೆ ಕ್ರೈಸ್ತರಿಗೆ ಭಕ್ತಿಭಾವನೆ ಇರುತ್ತದೆ. ಅವರನ್ನು ಪ್ರಾರ್ಥಿಸಿದರೆ ಬೇಡಿದ ವರಗಳು ಲಭಿಸುತ್ತವೆ ಎಂದು ನಂಬುವರು. ಕ್ರೈಸ್ತರು ನಲವತ್ತು ದಿನಗಳ ಕಾಲದ ಅವಧಿಯನ್ನು ಶೋಕಾಚರಣೆ ಎಂದು ಭಾವಿಸುತ್ತಾರೆ. 'ಸೂತಕ'ವನ್ನು ಪಾಲಿಸುವುದೂ ಉಂಟು. ಆದರೆ ನೆರೆಹೊರೆಯ ಇತರ ಧರ್ಮೀಯರು ಹನ್ನೊಂದು ದಿನಗಳ ತನಕ ಸಾವು ಸಂಭವಿಸಿರುವ ಮನೆಗೆ ಬರುವುದಿಲ್ಲ. ಹನ್ನೊಂದು ದಿನ ಕಳೆದ ಮೇಲೆ ಬರುವುದು ಕಂಡುಬರುತ್ತದೆ.

ಕೆಲವು ಹಿಂದುಗಳಲ್ಲಿ ಶವವನ್ನು ಹೂಳುವ ಪದ್ಧತಿ ರೂಢಿಯಲ್ಲಿದೆ. ಆದರೆ ಶವವನ್ನು ಪೆಟ್ಟಿಗೆಯಲ್ಲಿಟ್ಟು ಹೂಳುವುದು ಹಾಗೂ ಧಾರ್ಮಿಕ ಮಂದಿರಗಳಿಗೆ ಕೊಂಡೊಯ್ಯುವ ಪದ್ಧತಿ ಹಿಂದುಗಳಲ್ಲಿಲ್ಲ. ಮುಸ್ಲಿಮರಲ್ಲೂ ಶವಪೆಟ್ಟಿಗೆ ಮಾಡುವ ಪದ್ಧತಿ ಇಲ್ಲ ಆದರೆ ಮಸೀದಿಯಲ್ಲಿ ಶವವನ್ನು ಸಮಾದಿಗೆ ಸಾಗಿಸಲು ಬಳಸುವ ಪೆಟ್ಟಿಗೆಯನ್ನು ಎಲ್ಲರೂ ಬಳಸುತ್ತಾರೆ. ಪ್ರತ್ಯೇಕವಾಗಿ ವೃತನ ಕುಟುಂಬದವರು ಪೆಟ್ಟಿಗೆ ಸಿದ್ದಪಡಿಸುವುದಿಲ್ಲ. ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳ ಆಚರಣೆಯ ಸಾಮ್ಯತೆಯನ್ನು ಇಲ್ಲಿ ಗುರುತಿಸಬಹುದಾಗಿದೆ. ಹೀಗೆ ಮೈಸೂರು ಜಿಲ್ಲೆಯ ಕ್ರೈಸ್ತರು ಶವಸಂಸ್ಕಾರಗಳಲ್ಲಿ ಇತರ ಧರ್ಮೀಯರು ಭಿನ್ನವಾದ ಸಂಪ್ರದಾಯಗಳು ಇದ್ದರೂ ಸಾಮ್ಯತೆಗಳೂ ಕಂಡುಬರುತ್ತವೆ..

**4.20 ಹುಟ್ಟು ಸಾವು ಕುರಿತ ನಂಬಿಕೆ ಮತ್ತು ನಿಷೇಧಗಳು**

1. ಗಂಡ ಸತ್ತಮೇಲೆ ವಿಧವೆಗೆ ಕೆಂಪು ಸೀರೆ ಉಡಿಸುತ್ತಾರೆ.
2. ಮಾರ್ಟಳ್ಳಿಯ (ತಮಿಳು ಕ್ರೈಸ್ತರಲ್ಲಿ) ವಿಧವೆ ರವಿಕೆಯನ್ನು ಧರಿಸುವುದಿಲ್ಲ.
3. (ತಮಿಳರಲ್ಲಿ) ವಿಧವೆಯ ತಾಳಿಯನ್ನು ಮಗ ತಿರುಗಿಸಿಹಾಕಬೇಕು.
4. ಮುತ್ತೈದೆ ಸತ್ತರೆ ತಾಳಿಯನ್ನು ಬಿಚ್ಚಿಕೊಂಡು ಅರಿಸಿನದ ಕೊನೆಯನ್ನು ಕಟ್ಟುತ್ತಾರೆ.
5. ಅವಿವಾಹಿತರಿಗೆ ಬಿಳಿಯ ಉಡುಪು ತೊಡಿಸಿ, ಬಿಳಿಯ ಪೆಟ್ಟಿಗೆ ಮಾಡಿಸುತ್ತಾರೆ.
6. ಶವದ ಮೇಲೆ ಬಟ್ಟೆಯನ್ನು ಹಾಸುತ್ತಾರೆ.
7. ಶವಸಂಸ್ಕಾರದಲ್ಲಿ ಪಾಲ್ಗೊಂಡ ಸಂಬಂಧಿಕರು ಮೃತನ ಮನೆಗೆ ಬಂದು ದೀಪ ನೋಡಿಕೊಂಡು ಹೋಗಬೇಕು.
8. ಅನೈತಿಕ ಜೀವನ ನಡೆಸುತ್ತಿದ್ದ ಕ್ರೈಸ್ತರು ಸತ್ತಾಗ ಸ್ಮಶಾನದಲ್ಲಿ ಇತರರ ಸಮಾಧಿಗಿಂತ ಎಂಟು ಅಡಿ ದೂರದಲ್ಲಿ ಸಮಾದಿ ಮಾಡಬೇಕು (ಹಾಗೆ ಇದೇ ಪದ್ದತಿ)
9. ಮನೆಯಲ್ಲಿ ಹಸಿರು ಮಿಡತೆ ಕಾಣಿಸಿಕೊಂಡರೆ ಸತ್ತವರಿಗೆ ಪೂಜೆ ಅರ್ಪಿಸಬೇಕು.

(ಕೊಂಕಣಿ ಕ್ರೈಸ್ತರಲ್ಲಿ) ವಿಧವೆ ಕೆಂಪು ಸೀರೆ ಉಡಬಾರದು. ಈ ನಂಬಿಕೆ ಕನ್ನಡ, ತಮಿಳು ಕ್ರೈಸ್ತರಲ್ಲಿ ಮಾತ್ರ ರೂಢಿಯಲ್ಲಿದೆ. 'ಕೆಂಪು ಬೆಂಕಿಯನ್ನು ಸೂಚಿಸುವ ಬಣ್ಣ, ವಿಧವೆ ಅಗ್ನಿಯಂತೆ; ಆಕೆಯ ಮೇಲೆ ಯಾರ ವಕ್ರ ದೃಷ್ಟಿಯೂ ಬೀಳಬಾರದು[13]. ಆಕೆ ಅನುಕಂಪಕ್ಕೆ

ಅರ್ಹಳು. ಅಂದರೆ ವಿಧವಾ ವಿವಾಹಕ್ಕೆ ಈ ಸಮಾಜದಲ್ಲಿ ಪ್ರಾಶಸ್ತ್ಯವಿಲ್ಲ ಎಂಬುದು ತಿಳಿದುಬರುತ್ತದೆ. ವಿಧವಾ ವಿವಾಹವನ್ನು ಧರ್ಮಸಭೆ ಸಮ್ಮತಿಸುತ್ತದೆಯಾದರೂ ಮೈಸೂರಿನ ಕ್ರೈಸ್ತ ಸಮಾಜದಲ್ಲಿ ವಿಧವಾ ವಿವಾಹಕ್ಕೆ ಪ್ರೋತ್ಸಾಹವಿಲ್ಲ. ವಿಧವಾ ವಿವಾಹ ಮೈಸೂರು ಜಿಲ್ಲೆಯಲ್ಲಿ ಬಹುವಿರಳ. ಶಾರೀರಿಕ ಆಸೆ ಆಕಾಂಕ್ಷೆಗಳನ್ನು ಸುಟ್ಟುಹಾಕಿ, ವೈಭವ ಜೀವನದಿಂದ ದೂರವಿರಬೇಕೆಂಬ ಉದ್ದೇಶದಿಂದ ಗಂಡ ಸತ್ತ ವಿಧವೆಗೆ ಕೆಂಪು ಸೀರೆ ಉಡಿಸುತ್ತಾರೆ.

ತಮಿಳು ಕ್ರೈಸ್ತರಲ್ಲಿ ವಿಧವೆ ರವಿಕೆಯನ್ನು ಧರಿಸುವಂತಿಲ್ಲ.(ಮಾರ್ಟಳ್ಳಿ-ಕೊಳ್ಳೇಗಾಲ) ಈ ನಂಬಿಕೆ ಮೇಲಿನ ಆಚರಣೆಗೆ ವಿರುದ್ಧವಾಗಿದೆ. ಕೊಂಕಣಿ ಕ್ರೈಸ್ತರು ವಿಧವೆ ಕೆಂಪು ಸೀರೆ ಉಡಬಾರದು ಎಂಬ ನಂಬಿಕೆಯನ್ನು ರೂಢಿಸಿಕೊಂಡಿದ್ದಾರೆ. ಏಕೆಂದರೆ ಮದುವೆಯ ಆರತಕ್ಷತೆಗೆ ಅವರು ತರುವುದು ಕೆಂಪುಬಣ್ಣದ ಜರಿ ಸೀರೆ. ಅವರು ಕೆಂಪುಬಣ್ಣವನ್ನು ಸಂಭ್ರಮದ ಸಂಕೇತವಾಗಿ ಬಳಸುತ್ತಾರೆ.[14]

ವಿಧವೆಯ ತಾಳಿಯನ್ನು ಮಗ ತಿರುಗಿಸಿ ಹಾಕಬೇಕು ಎಂಬ ನಂಬಿಕೆಯು ಮಾರ್ಟಹಳ್ಳಿಯ ತಮಿಳರಲ್ಲಿ ಮಾತ್ರ ರೂಢಿಯಲ್ಲಿದೆ. ವಿಧವೆ ಆಕರ್ಷಣೀಯಳಾಗಿರಬಾರದು, ತನ್ನ ಅಂದವನ್ನು ಕಡಿಮೆಮಾಡಿಕೊಳ್ಳಲು ರವಿಕೆಯನ್ನು ಹಾಕುವುದಿಲ್ಲ[15]. ನೋಡಿದಾಕ್ಷಣ ಆಕೆ ವಿಧವೆಯೆಂದು ಗುರುತಿಸಲು ಸಾಧ್ಯವಾಗುವುದರ ಮೂಲಕ ಇತರರ ಅನುಕಂಪಕ್ಕೆ ಅರ್ಹಳಾಗಿರುತ್ತಾಳೆ. ಇದೂ ಪರೋಕ್ಷವಾಗಿ ವಿಧವಾ ವಿವಾಹಕ್ಕೆ ವಿರೋಧವನ್ನೇ ಸೂಚಿಸುತ್ತದೆ. ಇತ್ತೀಚೆಗೆ ಇದು ಕಡಿಮೆಯಾಗಿದೆ. ವೃದ್ಧವಿಧವೆಯರು ಮಾತ್ರ ಇಂದಿಗೂ ರವಿಕೆ ತೊಡದೆ ಇರುವುದನ್ನು ಕಾಣಬಹುದಾಗಿದೆ. ವಿಧವೆಯ ತಾಳಿಯನ್ನು ಹಿರಿಯ ಮಗ ತಿರುಗಿಸಿ ಹಾಕುವ ನಂಬಿಕೆಯು, ತಂದೆಯ ಜವಾಬ್ದಾರಿಯನ್ನು ಮಗ ವಹಿಸಿಕೊಳ್ಳುವುದನ್ನು ಸೂಚಿಸುತ್ತದೆ. ಅಂದಿನಿಂದ ತಾಯಿಯ ಮೇಲಿನ ಸಂಪೂರ್ಣ ಜವಾಬ್ದಾರಿಯು ಮಗನ ಮೇಲೆ ಬೀಳುತ್ತದೆ. ಇವರದು ಪುರುಷ ಪ್ರಧಾನ ಕುಟುಂಬವೆಂಬುದನ್ನು ಸೂಚಿಸುತ್ತದೆ.

ಮುತ್ತೈದೆ ಸತ್ತರೆ ತಾಳಿಯನ್ನು ಬಿಚ್ಚಿ ಅರಿಶಿನ'ದ ಕೊನೆಯನ್ನು ಕಟ್ಟಬೇಕು ಈ ನಂಬಿಕೆಯು ಮುತ್ತೈದೆಗೆ ಸಮಾಜದಲ್ಲಿರುವ ಸ್ಥಾನಮಾನಗಳನ್ನು ತಿಳಿಸುತ್ತದೆ. ಮುತ್ತೈದೆ ಬರಿ ಕೊರಳಿನಲ್ಲಿ ಹೋಗಬಾರದೆಂದು ತಾಳಿಯನ್ನು ತೆಗೆದು ಅರಿಸಿನದ ಕೊನೆಯನ್ನು ಕಟ್ಟುವುದು ರೂಢಿಗೆ ಬಂದಿದೆ. ಬದುಕಿರುವವರೆಗೆ ಸ್ತ್ರೀಗೆ ಸೌಭಾಗ್ಯದ ಚಿಹ್ನೆಗಳಾದ ಅರಿಸಿನ, ಕುಂಕುಮ, ಹೂವು, ಬಳೆ, ತಾಳಿಯು ಸದಾ ಶೋಭಿತವಾಗಿರಬೇಕೆಂಬುದು ಹಿಂದೂಗಳಲ್ಲಿರುವ ನಂಬಿಕೆಯಾದರೂ ಕ್ರೈಸ್ತ ಮಹಿಳೆಯರೂ ಅದನ್ನು ರೂಢಿಸಿಕೊಂಡಿದ್ದಾರೆ. 'ಸುಮಂಗಲೆ'ಯಾಗಿ ಸಾಯುವುದು ಪುಣ್ಯವೆಂಬ ಭಾವನೆ ಮೈಸೂರು ಜಿಲ್ಲೆಯ ಕ್ರೈಸ್ತರಲ್ಲಿಯೂ ಇದೆ.

ಅವಿವಾಹಿತರು ಸತ್ತರೆ ಬಿಳಿಯ ಉಡುಪನ್ನೂ, ಬಿಳಿಯ ಪೆಟ್ಟಿಗೆಯನ್ನೂ ಮಾಡಿಸುತ್ತಾರೆ. ಬಿಳಿಯ ಬಣ್ಣವು ಪರಿಶುದ್ಧತೆಗೆ ಸಂಕೇತವಾಗಿದೆ. ಆದ್ದರಿಂದಲೇ ಕ್ರೈಸ್ತರು ದೀಕ್ಷಾಸ್ನಾನ, ದೃಢೀಕರಣ, ಪ್ರಥಮ ಪರಮಪ್ರಸಾದ ವಿನಿಯೋಗ, ವಿವಾಹ ಸಂದರ್ಭಗಳಲ್ಲಿ ಬಿಳಿಯ ಉಡುಪನ್ನು ಉಪಯೋಗಿಸುವುದು. ಈ ಹಿನ್ನೆಲೆಯಲ್ಲೇ ಮೇಲಿನ ನಂಬಿಕೆ ಹುಟ್ಟಿಕೊಂಡಿದೆ.

ಋಣ ತೀರಿಸಿಕೊಳ್ಳುವುದು ಕರ್ತವ್ಯವೆಂಬ ನಂಬಿಕೆಯಿಂದ ಸಂಬಂಧಿಕರು 'ಕೋಡಿ' ಬಟ್ಟೆ ಹಾಕುತ್ತಾರೆ. ಆದರೆ ಶವ ಸಂಸ್ಕಾರದಲ್ಲಿ ಬಿಳಿಯಬಟ್ಟೆ ಬಹಳ ಉಪಯುಕ್ತವಾಗಿದೆ. ಶವದಪೆಟ್ಟಿಗೆಯ ಒಳಭಾಗಕ್ಕೆಲ್ಲಾ ಒತ್ತಾಗಿ ಬಿಳಿಯ ಬಟ್ಟೆಯನ್ನು ಉಪಯೋಗಿಸುತ್ತಾರೆ. ಶವವನ್ನು ಮಲಗಿಸಲು, ಅದರ ಮೇಲೆ ಹೊದಿಸಲು ಬಿಳಿಯ ಬಟ್ಟೆಯನ್ನೇ ಉಪಯೋಗಿಸುತ್ತಾರೆ. ಈ ಉದ್ದೇಶದಿಂದ 'ಕೋಡಿ' ಹಾಕುವ ಪದ್ಧತಿ ಹುಟ್ಟಿಕೊಂಡಿರುವ ಸಾಧ್ಯತೆ ಇದೆ ಆಮೂಲಕ ಮೃತನ ಮನೆಯವರ ಆರ್ಥಿಕ ಹೊರೆಯನ್ನು ಕಡಿಮೆ ಮಾಡುವ ಉದ್ದೇಶವಿರುವುದನ್ನು ಗಮನಿಸಬಹುದಾಗಿದೆ.

ಶವಸಂಸ್ಕಾರದಲ್ಲಿ ಭಾಗವಹಿಸಿದ ಸಂಬಂಧಿಕರು ಮೃತನ ಮನೆಗೆ ಬಂದು 'ದೀಪ'ವನ್ನು ನೋಡಿಕೊಂಡು ಹೋಗಬೇಕೆಂಬ ನಂಬಿಕೆ. ದುಃಖತಪ್ತರಾಗಿರುವ ಮನೆಯ ಸದಸ್ಯರು ಮನೆಗೆ ಬಂದಾಗ, ಕಳೆದುಕೊಂಡ ವ್ಯಕ್ತಿಯಿಂದಾಗಿ ಮನೆ ಬರಿದಾಗಿ ಕಾಣಿಸಿ ದುಃಖ ಅಧಿಕವಾಗುವುದು ಸಹಜ. ಇದರಿಂದ ಅವರೊಡನೆ ಮನೆಯತನಕ ಬಂದು ಸಾಂತ್ವನ ಹೇಳಿ ಹೋಗುವುದು ಸೌಜನ್ಯತೆ. ಇದಕ್ಕಾಗಿ ಈ ನಂಬಿಕೆಯೂ ರೂಢಿಗೆ ಬಂದಿದೆ.

'ಅನೈತಿಕ ಜೀವನ ನಡೆಸಿದವರಿಗೆ ಅಥವಾ ಆತ್ಮಹತ್ಯೆ ಮಾಡಿಕೊಂಡವರಿಗೆ ಸಮಾದಿಗೆ ದೂರದಲ್ಲಿ ಸ್ಥಳಕೊಡುವ ಪದ್ಧತಿ', ತಪ್ಪುಗಳನ್ನು ಮಾಡುವುದನ್ನು ತಪ್ಪಿಸುವ ಸಲುವಾಗಿ ಹುಟ್ಟಿಕೊಂಡಿದ್ದಾಗಿದೆ. ಏಕೆಂದರೆ ಸತ್ತಮೇಲೆಯೂ ಹೆಸರು ಹಾಳಾಗದಿರಲಿ ಎಂಬುದು ಎಲ್ಲರ ಅಭಿಪ್ರಾಯವಾಗಿರುತ್ತದೆ. 'ದೂರವಿಡುತ್ತಾರೆ', ಎಂಬ ಭಯದಿಂದಲಾದರೂ ಅನೈತಿಕ ಜೀವನದಿಂದ ದೂರವಿರಲಿ ಎಂಬುದು ಇದರ ಕಾರಣಹೊಂದಿರಬಹುದಾಗಿದೆ.

ಹಸಿರು ಮಿಡತೆಗೂ, ಮೃತರಿಗೂ ಯಾವ ಸಂಬಂಧವೂ ಇಲ್ಲದಿರುವುದರಿಂದ ಅದು ಮೂಢನಂಬಿಕೆಯೇ ಆಗಿ ಉಳಿದು ಬಂದಿದೆ ಎನ್ನಬಹುದು.

ಹೀಗೆ ಮೈಸೂರು ಜಿಲ್ಲೆಯ ಕ್ರೈಸ್ತರು ಶವಸಂಸ್ಕಾರದಲ್ಲಿ ಇತರ ಧರ್ಮೀಯರಿಗಿಂತ ವಿಶಿಷ್ಟವಾದ ಧಾರ್ಮಿಕ ನಂಬಿಕೆಗಳನ್ನು ಹೊಂದಿದ್ದಾರೆ. ಸಾಮಾಜಿಕವಾಗಿ ರೂಢಿಯಲ್ಲಿರುವ ನಂಬಿಕೆಗಳು ಹಿಂದೂ ಧರ್ಮೀಯರಲ್ಲೂ ಕಂಡು ಬರುತ್ತವೆ. ಮುತ್ತೈದೆಯ ಸೌಭಾಗ್ಯಗಳೂ, ವಿಧವಾ ವಿವಾಹಕ್ಕೆ ಪ್ರೋತ್ಸಾಹವಿಲ್ಲದಿರುವುದೂ, ಶೋಕಾಚರಣೆಯ ಅವಧಿ, ಇತ್ಯಾದಿಗಳು ಮೈಸೂರಿನ ಕ್ರೈಸ್ತರ ನಂಬಿಕೆಗಳು ಎನ್ನುವ ಬದಲು ಹಿಂದೂ ಸಂಪ್ರದಾಯದ ನಂಬಿಕೆಗಳು ಎಂದೇ ಹೇಳಬಹುದು.

ಹುಟ್ಟಿನಿಂದ ಸಾಯುವವರೆಗಿನ ಸಂಪ್ರದಾಯಗಳ ಈ ವಿವರಗಳಲ್ಲಿ ಕ್ರೈಸ್ತರ ಜೀವನಕ್ಕೆ ಬೆನ್ನೆಲುಬಾಗಿರುವ ನಂಬಿಕೆ ವಿಧಿಗಳ ಪ್ರಸ್ತಾಪ, ಅವರ ಸಾಮಾಜಿ, ಧಾರ್ಮಿಕ ಜೀವನದ ಮೌಲ್ಯಗಳ ಮೇಲೆ ಬೆಳಕು ಚೆಲ್ಲಲು ಯತ್ನಿಸಿದೆ.

## ಅಂತ್ಯ ಟಿಪ್ಪಣಿಗಳು

1. ಮರಿಯಾನ್ ಸಿದ್ದಿ ವಯಸ್ಸು 70 ಮೈನಹಳ್ಳಿ.ಕನ್ನಡ ರೂಪಾಂತರ : ನೆತ್ತಿಗೆ,ಕಿವಿಗೆ ಹಚ್ಚಿದ ಎಣ್ಣೆ ಮೈಮೇಲೆಲ್ಲಾ ಹರಿಯಿತು, ಸುಂದರಿಯಾದ ನಮ್ಮ ವಧುವಿಗೆ.
2. ಲೂಸಿಯನ್ ಸಂತಾನ್ ಸಿದ್ದಿ, ವಯಸ್ಸು 70 ಮೈನಹಳ್ಳಿ ಕನ್ನಡ ರೂಪಾಂತರ : ಬಿಡುಬಿಡು ನಿನ್ನಯ ಕನ್ಯೆಯ ಉಡುಪು (ಬಿಳಿಯ) ನಾವು ನಿನಗೆ ಬಂಗಾರ ಮಾಂಗಲ್ಯ ಮತ್ತು ಹೂಗಳನ್ನು ತಂದಿದ್ದೇವೆ.
3. ಬಂಗಾರ ಜಡೆ ಜಿಲ್ಲೆಗಳಿಂದಲೂ, ತೂಗುತ್ತಿರುವ ಕನಾಕಾಂಬರ ಹೂಗಳಿಂದಲೂ ಶೋಭಿಸುತ್ತಿರುವವಳೇ,
4. ವಕ್ತೃ : ಮದಲೈಮರಿಯಮ್ಮ, ವಯಸ್ಸು 75, ಹಾರೋಬೆಲೆ.
5. ಸಂಸ್ಕೃತ ಪ್ರಾರ್ಥನೆಯನ್ನು ಅನುಭಂದದಲ್ಲಿ ಕೊಟ್ಟಿದೆ.
6. ಶವವನ್ನು ರಾತ್ರಿಯಿಡೀ ಇಟ್ಟುಕೊಳ್ಳುವ ಹಾಗೂ ಹೆಣ್ಣು ಮಕ್ಕಳು ಎದೆ, ಹಣೆ ಬಡೆದು ಕೊಳ್ಳುತ್ತಾ ಆತನ ವ್ಯಕ್ತಿತ್ವ, ಶೀಲ, ಚಾರಿತ್ರೆಗಳನ್ನು ಸ್ಮರಿಸಿಕೊಂಡು ಗುಣಗಾನ ಮಾಡಿ ದುಖಿ:ಸುವ ಪದ್ದತಿ.
7. ವಕ್ತೃ ಮರಿಯ ಪೆರಿಯಾ ನಾಯಕಿ, ವಯಸ್ಸು ೩೮, ಸಂದನಪಾಳ್ಯ.
8. ವಕ್ತೃ: ಅಮರೊರ್ಫಮೇರಿ, ವಯಸ್ಸು ೬೦, ಮಾರ್ಟಳ್ಳಿ.

9. ಕೋಡಿ ಒಟ್ಟಿಗೆ ಮೂಡುದಾರು ಎಂದು ಹೇಳುವುದು.

10. ಶಿಷ್ಯ: ಚರ್ಚಿನಲ್ಲಿ ಪೂಜೆಗೆ ಸಹಾಯಮಾಡುವ ಹುಡುಗರಿಗೆ 'ಶಿಷ್ಯ' ರೆನ್ನುತ್ತಾರೆ.

11. ಮೂರು ದಶಕದ ಹಿಂದೆ ಚರ್ಚಿನ ಎಲ್ಲಾ ಪ್ರಾರ್ಥನೆಗಳೂ ಲ್ಯಾಟಿನ್‌ಭಾಷೆಯಲ್ಲಿದ್ದವು. ಇದರಿಂದ ಜನರಿಗೆ ಆ ಪ್ರಾರ್ಥನೆಗಳು ಕಂಠಪಾಠವಾಗಿವೆ.

12. ಮೂರು ಹಿಡಿ ಮಣ್ಣು ಮೂರು ಉದ್ದೇಶಗಳಿಗಾಗಿ ಎಂದು ಹೇಳುತ್ತಾರೆ. ಧರ್ಮಸಭೆಯ ಪರವಾಗಿ (2) ವಿಚಾರಣೆಯ ಪರವಾಗಿ (3) ವೈಯಕ್ತಿಕವಾಗಿ.

13. ವಕ್ತೃ : ಮರಿಯಮ್ಮ, ವಯಸ್ಸು 70, ಮೈಸೂರು.

14. 14. ವಕ್ತೃ : ಮೆಲ್ವಿನ್ ಡಿಸೋಜ, ವಯಸ್ಸು 40 ಮೈಸೂರು.

15. ವಕ್ತೃ : ವೇಳಾಂಗಣ್ಣಿ ಮೇರಿ, ವಯಸ್ಸು 50, ಮೈಸೂರು.

## ಅಧ್ಯಾಯ - ಐದು

### ಬುಡಕಟ್ಟು ಕ್ರೈಸ್ತರ ಹಬ್ಬ ಜಾತ್ರೆ ಉತ್ಸವಗಳು

**5.1 ಸಾರ್ವಜನಿಕ ಹಬ್ಬಗಳು** ಕ್ರೈಸ್ತರಲ್ಲಿ ಸಾರ್ವತ್ರಿಕ ಆಚರಣೆಯಲ್ಲಿರುವ ಹಬ್ಬಗಳು ಎರಡೇ ಆದರೂ ಅವುಗಳನ್ನು ತಮ್ಮ ಶಕ್ತ್ಯಾನುಸಾರ ಆಡಂಬರದಿಂದಲೇ ಆಚರಿಸುತ್ತಾರೆ. ನಗರ ಪ್ರದೇಶಗಳನ್ನು ಬಿಟ್ಟರೆ ಹಳ್ಳಿಗಳಲ್ಲಿ ನೆಲಸಿರುವ ಬುಡಕಟ್ಟು ಕ್ರೈಸ್ತರಲ್ಲಿ ಅನೇಕರು ಆಯಾದಿನದ ದುಡಿಮೆಯಿಂದ ಜೀವನಸಾಗಿಸುವವರೇ ಆಗಿದ್ದಾರೆ. ಹೀಗಾಗಿ ಆರ್ಥಿಕ ಮುಗ್ಗಟ್ಟು ಒಂದು ಕಡೆಯಾದರೆ, ತಮ್ಮ ಸಮಾಜದಲ್ಲಿ ಇತರರಂತೆ ತಾವೂ ಬದುಕಬೇಕೆಂಬ ಹಂಬಲ ಇನ್ನೊಂದು ಕಡೆ ಅವರಿಗೆ ಒತ್ತಡ ನೀಡುತ್ತದೆ. ಸಾಲ ಮಾಡಿಯಾದರೂ ಹಬ್ಬಗಳನ್ನು ಆಚರಿಸುತ್ತಾರೆ. ದೇವರು ಕಾಪಾಡುತ್ತಾನೆ ಎಂಬ ಪ್ರಬಲ ನಂಬಿಕೆಯೇ ಅದಕ್ಕೆ ಪ್ರೇರಣೆ. ಒಟ್ಟಿನಲ್ಲಿ ಸಂಭ್ರಮದಿಂದ ಆಚರಿಸುವ ಇವರ ಹಬ್ಬಗಳ ವೈಶಿಷ್ಟ್ಯಗಳನ್ನು ಹೀಗೆ ಪಟ್ಟಿ ಮಾಡಬಹುದು:

1. ಬತ್ತ, ರಾಗಿ, ಗೋಧಿಯ ಕಾಳುಗಳನ್ನು ಗೇಣುದ್ದ ಬೆಳೆಸಿ 'ಕ್ರಿಸ್ಮಸ್' ಗೋದಲಿಯಲ್ಲಿಡಬೇಕು.
2. ಸಾಕುಪ್ರಾಣಿಗಳ ಪ್ರತಿಮೆಗಳನ್ನು ಜೋಡಿಸಿಕೊಳ್ಳಬೇಕು.
3. ಗೋದಲಿಯನ್ನು ನಿರಂತರವಾಗಿ ಮೂರು ವರ್ಷಗಳ ಕಾಲ ಜೋಡಿಸಲೇಬೇಕು. ಒಂದು ವರ್ಷ ಗೋದಲಿ ಜೋಡಿಸಿ ನಿಲ್ಲಿಸಿದರೆ ತೊಂದರೆಗಳು ಬರುತ್ತವೆ.(ಗಣೇಶನನ್ನು ಕೂರಿಸದಾಗ ೩ ಸತತವಾಗಿ ಕೂರಿಸುವುದು ಕಡ್ಡಾಯ).
4. ಮೂರು ರಾಯರ ಹಬ್ಬದಂದು ಪೊಂಗಲ್ ಮಾಡಬೇಕು.
5. ತಪಸ್ಸುಕಾಲದ ಪ್ರಾರಂಭದ ದಿನವಾದ ಬುಧವಾರದಂದು ಹಣೆಗೆ ಬೂದಿ ಹಚ್ಚಿಸಿಕೊಳ್ಳಬೇಕು.
6. ತಪಸ್ಸುಕಾಲದ ಆರನೆಯ ಭಾನುವಾರ ಗರಿಗಳನ್ನು ಹಿಡಿದು ಚರ್ಚಿನ ಸುತ್ತ ಮೆರವಣಿಗೆ ಮಾಡಬೇಕು.

7. ತಪಸ್ಸುಕಾಲದಲ್ಲಿ ಶುಕ್ರವಾರದ ದಿನ ಕಡ್ಡಾಯವಾಗಿ ಉಪವಾಸ, ಮಾಂಸಹಾರ ತ್ಯಜಿಸಬೇಕು.
8. ಪವಿತ್ರ ಶುಕ್ರವಾರದಂದು ಮಧ್ಯಾಹ್ನ ಊಟ ಮಾಡಬೇಕು.
9. ಪವಿತ್ರ ಶುಕ್ರವಾರ ಮತ್ತು ಪವಿತ್ರ ಶನಿವಾರದಂದು ಚರ್ಚುಗಳಲ್ಲಿ ಗಂಟೆ ಬಾರಿಸಬಾರದು.
10. ಕನ್ನಡಿಗ ಕ್ರೈಸ್ತರು ಈಸ್ಟರ್ ಹಬ್ಬದ ದಿನ 'ಜೂದರ ಖಂಡ' ಮತ್ತು 'ಚಿದಕವರೆ ಸಾರು' ಅಣಿಗೊಳಿಸುವರು.

(ಮೌದೂದಿ 1993:81). ಆದರೆ ಉಪವಾಸದ ಕ್ರಮದಲ್ಲಿ ಭಿನ್ನತೆ ಕಂಡು ಬರುತ್ತದೆ. ಮುಸ್ಲಿಮರು ದಿನವೆಲ್ಲಾ ಉಪವಾಸವಿದ್ದು ನಿಗದಿತ ಸಮಯಕ್ಕೆ ಉಪವಾಸ ತೊರೆದಾಗ ಪೌಷ್ಟಿಕ ಆಹಾರಗಳನ್ನು ಸೇವಿಸುತ್ತಾರೆ. ಶುಕ್ರವಾರದಲ್ಲಿ ಮಾಂಸಹಾರ ನಿಷೇಧವಿಲ್ಲ. ಹೀಗೆ ಸಾಮ್ಯತೆಗಳಿದ್ದಂತೆಯೇ ಭಿನ್ನತೆಗಳನ್ನೂ ಕಾಣಬಹುದು.

ಪವಿತ್ರ ಶುಕ್ರವಾರದಿಂದ ಮಧ್ಯಾಹ್ನ ಊಟ ಮಾಡಬೇಕು.

ಈ ಆಚರಣೆಯು ದುಃಖಸೂಚಕವಾದುದು. ಮರಣ ಸಂಸ್ಕಾರದಲ್ಲಿ ಮೂರನೆಯ ದಿನ ಗಂಜಿ ಊಟ ಮಾಡುವ ಪದ್ಧತಿಯನ್ನು ಇಲ್ಲಿ ಸ್ಮರಿಸಬಹುದು. ಅತಿ ಕಡಿಮೆ ಖರ್ಚಿನಲ್ಲಾಗುವ ರುಚಿಕರವಲ್ಲದ ಸರಳ ಊಟ ಮಾಡುವುದರ ಮೂಲಕ ನಾಲಿಗೆಯ ಚಪಲತೆಯನ್ನು ತ್ಯಾಗಮಾಡುವುದು ಹಾಗು ಕುಟುಂಬದ ಸದಸ್ಯನೋರ್ವನ ಸಾವಿನ ನೋವಿನ ಆಚರಣೆಯನ್ನು ರೂಢಿಸಿಕೊಂಡಿರುವುದು ಕಾಣುತ್ತದೆ.

ಪವಿತ್ರ ಶುಕ್ರವಾರ & ಪವಿತ್ರ ಶನಿವಾರ ಚರ್ಚುಗಳಲ್ಲಿ ಗಂಟೆ ಬಾರಿಸಬಾರದು.

ಚರ್ಚುಗಳಲ್ಲಿ ಗಂಟೆ ಬಾರಿಸುವುದು ವಿಶೇಷ ಪೂಜೆಗಳಿದ್ದಾಗ ಇಲ್ಲವೆ ಮುಖ್ಯವಾದ ಸಂದೇಶವನ್ನು ತಿಳಿಸಬೇಕಾದ ಸಂದರ್ಭಗಳಲ್ಲಿ ಮಾತ್ರ. ಆದರೆ ಶುಭಶುಕ್ರವಾರ ಸಾಂಗ್ಯಗಳ ಅನಂತರ ಹಾಗೂ ಶನಿವಾರದ ದಿನ ಚರ್ಚಿನಲ್ಲಿ ಯಾವುದೇ ಸಂಭ್ರಮದ ಆಚರಣೆಗಳಿರುವುದಿಲ್ಲವಾದ ಕಾರಣ ಚರ್ಚಿನ ಗಂಟೆಗಳ ನಿನಾದ ಕೇಳಿಬರುವುದಿಲ್ಲ ಎಂಬ ತಿಳಿವಳಿಕೆ ವ್ಯಾಪಕವಾಗಿದೆ.

ಹೀಗೆ ಬುಡಕಟ್ಟು ಕ್ರೈಸ್ತರ ಹಬ್ಬಗಳು ವೈವಿಧ್ಯಮಯವಾಗಿದ್ದು, ವಿಶಿಷ್ಟತೆಯನ್ನೂ ಹೊಂದಿವೆ. ಇತರ ಧರ್ಮೀಯರ ಹಬ್ಬಗಳೊಡನೆ ಹೋಲಿಸಿದಾಗ ಸಂಖ್ಯೆಯಲ್ಲಿ ಕಡಿಮೆಯಾದರೂ ತೀರಾ ಭಿನ್ನವಾದ ಆಚರಣೆಗಳನ್ನೂ ಕೆಲವೆಡೆ ಧಾರ್ಮಿಕ ಸಾಮರಸ್ಯವನ್ನೂ ಹೊಂದಿರುವುದು ಕಂಡುಬರುತ್ತದೆ.

ಇದುವರೆಗೂ ಪ್ರಸ್ತಾಪಿಸಿದ ಪ್ರಮುಖ ಹಬ್ಬಗಳೇ ಅಲ್ಲದೆ ಇಲ್ಲಿನ ಕ್ರೈಸ್ತರೂ ಕೆಲವು ಸ್ಥಳೀಯ ಸಂತರ ಹಬ್ಬಗಳನ್ನು ಆಚರಿಸುವುದುಂಟು. ಅವುಗಳಲ್ಲಿ ಮಾತೆ ಮರಿಯಮ್ಮನ ಹಬ್ಬವು ಗಮನಾರ್ಹವಾದುದು. ಮಾತೃದೇವತೆಯ ಕಲ್ಪನೆ ಹಿಂದೂಗಳಲ್ಲಿರುವಂತೆ ಕ್ರೈಸ್ತರಲ್ಲಿಯೂ ಇದೆ (ಮಾಡ್ತ: 1990:87) ಹಿಂದೂಗಳು ಮಾತ್ರದೇವತೆಯ ಪೂಜೆಗೆ, ಆರಾಧನೆಗೆ ಪ್ರಾಶಸ್ತ್ಯ ಕೊಡುತ್ತಾರೆ. ಮಾರಮ್ಮನಿಗೆ ಕೋಣಗಳ ಬಲಿಕೊಡುವುದು ಇಂದಿಗೂ ರಾಜ್ಯದಾದ್ಯಂತ ಕಂಡುಬರುತ್ತದೆ. ಆದರೆ ಕ್ರೈಸ್ತರ ಮಾತೃದೇವತೆಗೆ ಈ ಬಗೆಯ ಆರಾಧನೆ ಇಲ್ಲ. ಆಕೆ ಸಂತರರಾಣಿ ಎಂಬ ಉನ್ನತಿಕೆಯನ್ನು ಪಡೆದಿದ್ದಾಳೆ.

**5.1.1 ಕ್ರಿಸ್ಮಸ್** ಕ್ರಿಸ್ಮಸ್ ಆಚರಣೆಯು ವಿಶ್ವಾಸಿ ಜಗತ್ತಿನಲ್ಲಿ ಹುಟ್ಟಿರುವ ದೈವಶಿಶು ತಮ್ಮ ಮೂಲ ಅವಶ್ಯಕತೆಗಳ ಆಹಾರಬೆಳೆಗಳನ್ನು ಸಮೃದ್ಧಿಯಾಗಿ ಕರುಣಿಸಲಿ ಎಂಬ ಉದ್ದೇಶದಿಂದ ಭತ್ತ, ರಾಗಿ, ಗೋಧಿಯ ಕಾಳುಗಳನ್ನು ಬಿತ್ತಿ ಬೆಳೆದು ಗೋದಲಿಯಲ್ಲಿಡುತ್ತಾರೆ.

ಸಾಕು ಪ್ರಾಣಿಗಳನ್ನು ಗೋದಲಿಯಲ್ಲಿ ಜೋಡಿಸಬೇಕು ಈ ಆಚರಣೆಯು ಪಶುಪಾಲನೆಗೆ ಸಂಬಂಧಿಸಿದುದಾಗಿದೆ. ಯೇಸುಕ್ರಿಸ್ತನು ದನದ ಕೊಟ್ಟಿಗೆಯಲ್ಲಿ ಹುಟ್ಟಿದನೆಂದು ಬೈಬಲಿನಲ್ಲಿ ಲಿಖಿತವಾಗಿದೆ. ನಡುರಾತ್ರಿಯಲ್ಲಿ ದೇವದೂತನಿಂದ ಸಂದೇಶ ಪಡೆದ ಗೊಲ್ಲರು, ಕುರುಬರು ನಡುಗುವ ಚಳಿಯಲ್ಲಿ, ದೈವ ಶಿಶುವನ್ನು ಆರಾಧಿಸಲು ಬಂದಾಗ ಅವರೊಡನೆ ಒಂದೆರಡು ಕುರಿಗಳೂ, ಹಸುಗಳೂ ಬಂದಿರಬಹುದು. ಕೊರೆಯುವ ಚಳಿಯಲ್ಲಿ ಮಲಗಿದ್ದ ಶಿಶುವಿಗೆ ಆ ಪ್ರಾಣಿಗಳ ಉಸಿರಾಟದಿಂದ ಶಾಖ ದೊರೆಯಿತು ಎಂಬ ನಂಬಿಕೆಯಿಂದ ಗೋದಲಿ ಜೋಡಿಸಿದರೆ ಅದು ಹಾಗೆಯೇ ಮುಂದುವರೆಯುತ್ತದೆ ಎಂಬ ಉದ್ದೇಶವಿರಬಹುದು.

**5.1.2 ಹೊಸವರ್ಷ** ಇದೊಂದು ಜಾಗತಿಕ ಹಬ್ಬವೇ ಸರಿ. ದಿ ಗ್ರೇಟ್ ಬ್ರಿಟನ್ ಎಂದೆ ಕರೆದುಕೊಳ್ಳುವ ಇಂಗ್ಲೆಂಡ್ ಸೂರ್ಯ ಮುಳುಗದ ಸಾಮ್ರಾಜ್ಯವಾಗಿತ್ತು ಎಂಬುವುದು ಇತಿಹಾಸ. ಆ ಹಿನ್ನಲೆಯಲ್ಲಿ ಹುಟ್ಟಿದ ಬಹುತೇಕ ರಾಷ್ಟ್ರಗಳು ತಾವು ಅನುಸರಿಸುವ ಕ್ಯಾಲೆಂಡರ್ ಇಂಗ್ಲೆಂಡ್ ಮೂಲದ್ದು ಆದ ಕಾರಣ ಹೊಸ ವರ್ಷ ಎಂಬುವುದು ಕ್ರೈಸ್ತ ವರ್ಷಾರಾಂಭವೇ ಆಗಿದೆ.ಅದರಲ್ಲಿಯೂ ಕ್ರೈಸ್ತರಿಗೆ ಮಹತ್ವದ ಹಬ್ಬವಾಗಿದೆ. ಕರ್ನಾಟಕದ ಹಿಂದೂಗಳು ಮಹಾ ಸಂಕ್ರಾಂತಿಯನ್ನು 'ಪೊಂಗಲ್' ಎಂದು ಆಚರಿಸುತ್ತಾರೆ. ಇದರಲ್ಲಿ ಹಸು, ಎತ್ತುಗಳ ಪೂಜೆ ವಿಶೇಷವಾಗಿರುತ್ತದೆ. "The third day is called the Pongal of the cows". (ಅಬ್ಬೆ ದುಬಾಯ್ಸ್: 1906:573) ಹಸು ಎತ್ತುಗಳಿಗೆ ಮನೆಯಲ್ಲಿ ಮಾಡಿದ ಅಡುಗೆಯನ್ನು ತಿನ್ನಿಸುವುದು ರೂಢಿ. ಅದು ಸಸ್ಯಾಹಾರವೇ ಆಗಿರುತ್ತದೆ. ಇದನ್ನು ಅನುಸರಿಸಿ ಕ್ರೈಸ್ತರೂ ಮೂರುರಾಯರ ಹಬ್ಬಕ್ಕೆ 'ಪೊಂಗಲ್' ಎಂದು ಕರೆದು ಸಸ್ಯಾಹಾರವನ್ನು ಮಾಡುತ್ತಾರೆ. ಜನವರಿ ತಿಂಗಳಿನಲ್ಲಿಯೇ ಇವೆರಡು ಹಬ್ಬಗಳನ್ನು ಆಚರಿಸುವುದರಿಂದ ಮೂಲತಃ ಹಿಂದುಗಳಾಗಿದ್ದ ಕ್ರೈಸ್ತರು ತಮ್ಮ ಹಳೆಯ ಸಂಪ್ರದಾಯವನ್ನು ಬಿಟ್ಟು ಕೊಡಲಾಗಿದೆ. ಈ ಆಚರಣೆಗಳು ಸಂಸ್ಕೃತೀಕರಣಕ್ಕೊಳಗಾಗಿರುವುದನ್ನು ಕಾಣಬಹುದಾಗಿದೆ.

**5.1.3 ಈಸ್ಟರ್ ಸಂಡೇ (ಪುನರುತ್ಥಾನದ ಹಬ್ಬ)** ಯೇಸುಕ್ರಿಸ್ತನು ಸಮಾಧಿಯಿಂದ ಮೃತ್ಯುಂಜಯನಾಗಿ ಎದ್ದ ದಿನವನ್ನು 'ಈಸ್ಟರ್' ಎನ್ನುತ್ತಾರೆ. ಈಸ್ಟರ್ ಸಂಡೆಯ ಪ್ರಯುಕ್ತವೇ ಭಾನುವಾರವನ್ನು 'ಪವಿತ್ರದಿನ'ವೆಂದು ಘೋಷಿಸಲಾಗಿದೆ. (Encyclopedia 1979-VI). ಶನಿವಾರ ರಾತ್ರಿ ಹನ್ನೆರಡು ಗಂಟೆಗೆ ಚರ್ಚಿನ ದೊಡ್ಡ ಗಂಟೆಯನ್ನು ಬಾರಿಸುವುದರ ಮೂಲಕ ಪೂಜೆ ಪ್ರಾರಂಭವಾಗುತ್ತದೆ. ಪೂಜೆಯಲ್ಲಿ ಯೇಸುಕ್ರಿಸ್ತನ ತ್ಯಾಗ ಜೀವನದ ಸಂಕೇತವಾಗಿಯೂ, ಪಾಪದ ಕತ್ತಲಿಂದ ವಿಮುಕ್ತಗೊಂಡು ಬೆಳಕನ್ನು ಕಂಡಿರುವ ಸಂಕೇತಕ್ಕಾಗಿಯೂ ಒಂದು ದೊಡ್ಡ ಮೇಣದಬತ್ತಿಯನ್ನು ಹಚ್ಚುತ್ತಾರೆ. ಜನರು ತಮ್ಮ ತಮ್ಮ ಕೈಯಲ್ಲಿರುವ ಮೇಣದಬತ್ತಿಗಳನ್ನು ಹಚ್ಚಿ ಹಿಡಿದು ಪ್ರಾರ್ಥಿಸುತ್ತಾರೆ.

ತಪಸ್ಸಿನಿಂದ ಪ್ರಕಾಶದತ್ತ ಸಾಗುವ ಅರ್ಥವನ್ನೊಳಗೊಂಡ ಈ ಹಬ್ಬದಲ್ಲಿ ಕ್ರಿಸ್ಮಸ್ ಹಬ್ಬದ ಸಂಭ್ರಮಗಳು ಇಲ್ಲದಿದ್ದರೂ ಸರ್ವರಿಗೂ ಶಾಂತಿ, ಸಮಾಧಾನ ನೀಡುವ ಹಬ್ಬ ಇದಾಗಿದೆ. ಕ್ರಿಸ್ಮಸ್ ಹಬ್ಬದಲ್ಲಿ ಮಾಡುವಂತಹ ನಿಗಧಿತ ತಿಂಡಿಗಳನ್ನು ಮಾಡುವುದಿಲ್ಲವಾದರೂ ಹೊಸಬಟ್ಟೆ ಧರಿಸಿ, ಹಬ್ಬದಡುಗೆ ಮಾಡಿ ನೆಂಟರಿಷ್ಟರೊಡಗೂಡಿ ಭೋಜನ ಮಾಡುತ್ತಾರೆ. ಆ ದಿನ ಮಾಡುವ ಮಾಂಸದಡುಗೆಯನ್ನು "ಜೂದರಖಂಡ" ಎಂದು ಕರೆಯುತ್ತಾರೆ. 'ಚಿದಕದವರೆ' ಕೂಡ ಅಂದಿನ ವಿಶೇಷವಾಗಿರುತ್ತದೆ. ಈ ಹಬ್ಬದಲ್ಲಿ ಪ್ರಾರ್ಥನೆಗೆ ಹೆಚ್ಚು ಪ್ರಾಶಸ್ತ್ಯವಿರುತ್ತದೆ.

**5.1.4 ವಿಭೂತಿ ಬುಧವಾರ (Ash Wenesday)** ಈಸ್ಟರ್ ಬೂದಿ ಬುಧವಾರದಿಂದ ಪ್ರಾರಂಭವಾಗುತ್ತದೆ. ಅಂದು ಬೆಳಿಗ್ಗೆ ಪೂಜೆಯಲ್ಲಿ ಪವಿತ್ರೀಕರಿಸಿದ, ನುಣುಪಾದ

ಬೂದಿಯನ್ನು ತುಂಬಿಟ್ಟಿರುತ್ತಾರೆ. ಈ ಬೂದಿಯು ಒಣಗಿದ ಗರಿ, ಹರಿದುಹೋದ ಪವಿತ್ರ ಚಿತ್ರಪಟಗಳು, ಪ್ರಾರ್ಥನೆಯ ಪುಸ್ತಕಗಳನ್ನು ಉರಿಸಿ ತೆಗೆದದ್ದಾಗಿರುತ್ತದೆ. ಕ್ರೈಸ್ತರು ಮನೆಗಳಲ್ಲಿ ಉಪಯೋಗಿಸಲು ಸಾಧ್ಯವಾಗದಷ್ಟು ಹರಿದು ಹೋಗಿರುವ ಪುಸ್ತಕಗಳನ್ನು ಕಂಡಲ್ಲಿ ಎಸೆಯದೆ ತೆಗೆದಿಟ್ಟಿರುತ್ತಾರೆ. ಅದನ್ನೆಲ್ಲಾ ತಂದು ಚರ್ಚಿನಲ್ಲಿ ಸಂಬಂಧಪಟ್ಟವರಿಗೆ ಒಪ್ಪಿಸುತ್ತಾರೆ. ಆ ಸಂಗ್ರಹವನ್ನೂ, ಒಣಗಿದ ಗರಿಗಳನ್ನೂ ಉರಿಸಿದ ಬೂದಿ ಬುಧವಾರದ ವಸ್ತು ವಾಗಿರುತ್ತದೆ. ಪೂಜಾ ವೇಳೆಯಲ್ಲಿ ಗುರುಗಳು ಇದನ್ನು ಪ್ರತಿಯೊಬ್ಬ ಕ್ರೈಸ್ತನ ಹಣೆಗೂ ಹಚ್ಚುತ್ತಾ " ಮಣ್ಣಿನಿಂದ ಹುಟ್ಟಿದ ಮನುಜನು ಮಣ್ಣಿಗೇ ಹಿಂತಿರುಗಬೇಕು " ಎಂದು ಹೇಳುತ್ತಾರೆ. ಕ್ರಿಸ್ತನು ಹುಟ್ಟುವ ಮೊದಲೇ ಮಾನವನ ಸೃಷ್ಟಿಯ ಸಮಯದಲ್ಲಿ ಈ ವಾಕ್ಯವು ದೈವವಾಣಿಯಾಗಿತ್ತು. ಅವಿಧೇಯತೆಯಿಂದ ವರ್ತಿಸಿದ ಮಾನವನಿಗೆ ದೇವರು ವಿಧಿಸಿದ ಶಾಪ. (ಇದನ್ನು 'ಜಗತ್ತಿನ ಸೃಷ್ಟಿ ' ಪುರಾಣದಲ್ಲಿ ವಿವರವಾಗಿ ನಿರೂಪಿಸಲಾಗಿದೆ). ಪ್ರತಿಯೊಬ್ಬ ಕ್ರೈಸ್ತನೂ ಬೂದಿ ಬುಧವಾರದಂದು ಪೂಜೆಯಲ್ಲಿ ಭಾಗವಹಿಸಿ ತಮ್ಮ ಮರಣದ ದಿನವನ್ನು ಕಲ್ಪಿಸಿಕೊಂಡು ಕ್ರಿಸ್ತನ ಮರಣ ಹಾಗೂ ಪುನರುತ್ಥಾನ ದಿನಕ್ಕಾಗಿ ಸಿದ್ಧತೆ ಮಾಡಿಕೊಳ್ಳುವರು. ಅಂದಿನಿಂದ ನಲವತ್ತು ದಿನಗಳ ಕಾಲದ ಅವಧಿಯನ್ನು 'ತಪಸ್ಸುಕಾಲ' ಎಂದು ಕರೆಯುತ್ತಾರೆ.

**5.1.5 ತಪಸ್ಸುಕಾಲ (Lent season)** ಬೂದಿ ಬುಧವಾರದಿಂದ ಈಸ್ಟರ್ ಹಬ್ಬದವರೆಗಿನ ಅವಧಿಯಲ್ಲಿ ಯಾವ ಸಡಗರ-ಸಂಭ್ರಮ ಕಾರ್ಯಗಳೂ ಜರುಗುವುದಿಲ್ಲ. ತ್ಯಾಗ, ಉಪವಾಸ, ಪ್ರಾರ್ಥನೆ ಮತ್ತು ಪರೋಪಕಾರ ಇತ್ಯಾದಿ ಸತ್ಕಾರ್ಯಗಳಿಗೆ ಪ್ರಾಶಸ್ತ್ಯ ಉಂಟು. ಧರ್ಮಸಭೆ ಈ ಕಾಲವನ್ನು 'ವಿಘ್ನಕಾಲ' ಎಂದು ಕರೆದು, ಈ ಕಾಲದಲ್ಲಿ ವಿವಾಹ ಸಂಸ್ಕಾರವನ್ನು ನಡೆಸಬಾರದೆಂದು ಕಟ್ಟಳೆ ವಿಧಿಸಿದೆ.

ಕ್ರೈಸ್ತರು ಪ್ರತಿದಿನ ಚರ್ಚಿನಲ್ಲಿ ಒಂದುಗೂಡಿ ಕ್ರಿಸ್ತನ ಶಿಲುಬೆ ಮರಣವನ್ನು ಧ್ಯಾನಿಸುತ್ತಾರೆ. ಈ ಸಾಮೂಹಿಕ ಧ್ಯಾನಕ್ಕೆ ' ಶಿಲುಬೆಯ ಹಾದಿ ' (Way of the Cross) ಎಂದು ಕರೆಯುತ್ತಾರೆ. ಕ್ರಮವಾಗಿ ಹದಿನಾಲ್ಕು ಸ್ಥಳಗಳಲ್ಲಿ ಯೇಸುವಿನ ಪಾಡುಗಳನ್ನೂ, ಮರಣವನ್ನೂ ಸೂಚಿಸುವ ಚಿತ್ರಪಟಗಳನ್ನು ಹಾಕಿರುತ್ತಾರೆ. ಪ್ರತಿಯೊಂದು ಸ್ಥಳದಲ್ಲೂ ಮೊಣಕಾಲೂರಿ, ನಮಸ್ಕರಿಸಿ ಕ್ರಿಸ್ತನ ಪಾಡುಗಳನ್ನು ಸ್ಮರಿಸುತ್ತಾರೆ. ಶಿಲುಬೆಯ ಹಾದಿಗೆಂದೇ ಹದಿನಾಲ್ಕು ಚರಣಗಳ ಶೋಕಗೀತೆ ರಚನೆ ಯಾಗಿರುತ್ತದೆ.

ತಪಸ್ಸು ಕಾಲದ ಶುಕ್ರವಾರಗಳಲ್ಲಿ ವಿಶೇಷ ಪ್ರಾರ್ಥನೆ, ಉಪವಾಸವನ್ನು ಮಾಡುತ್ತಾರೆ. ಶುಕ್ರವಾರದ ದಿನ ಯೇಸು ಪ್ರಾಣತ್ಯಾಗ ಮಾಡಿದ ದಿನವಾದ್ದರಿಂದ ಅಂದು ವಿಶೇಷ ದಿನ ವಾಗಿರುತ್ತದೆ. ಮೂಲದಲ್ಲಿ ಈ ವ್ರತ ಸ್ವಲ್ಪ ಕಠಿಣವಾಗಿಯೇ ಇತ್ತು. ತಪಸ್ಸು ಕಾಲದ ಉಪವಾಸವೆಂದರೆ ಒಪ್ಪೊತ್ತಿನ ಊಟ ಮಾಡುವುದು. ಅದೂ ಶಾಖಾಹಾರವಾಗಿರಬೇಕು. ಪ್ರಾಣಿಮೂಲದ ಆಹಾರವಾದ ಮೊಟ್ಟೆ, ಹಾಲು, ಬೆಣ್ಣೆ ಇತ್ಯಾದಿಗಳನ್ನು ತಿನ್ನಕೂಡದು.[1] ಆದರೆ ಇತ್ತೀಚೆಗೆ ಈ ಕಠಿಣತೆ ಸ್ವಲ್ಪ ಸಡಿಲಗೊಂಡಿದೆಯಾದರೂ ಹೆಚ್ಚು ಸಮಯವನ್ನು ಪ್ರಾರ್ಥನೆಯಲ್ಲಿ ಕಳೆಯುತ್ತಾರೆ.

ಬುಡಕಟ್ಟು ಕ್ರೈಸ್ತರು ತಮ್ಮ ಶಕ್ತ್ಯಾನುಸಾರ ತಪಸ್ಸು ಕಾಲದಲ್ಲಿ ಉಪವಾಸ ತ್ಯಾಗಗಳನ್ನು ಮಾಡುತ್ತಾರೆ. ಉದಾಹರಣೆಗೆ ಮಧ್ಯಪಾನ, ಧೂಮಪಾನಗಳನ್ನು ನಲವತ್ತು ದಿನಗಳ ತನಕ ತ್ಯಜಿಸುವುದು, ಮನೋರಂಜನ ಕಾರ್ಯಕ್ರಮಗಳಿಂದ ದೂರವಿರುವುದು ಇತ್ಯಾದಿ. ಸ್ತ್ರೀಯರಲ್ಲಿ ಅನೇಕರು ನಲವತ್ತು ದಿನಗಳ ಕಾಲ ಹೂ ಮುಡಿದುಕೊಳ್ಳುವುದಿಲ್ಲ, ಅಲ್ಲದೆ ಬಾಹ್ಯ ಆಕರ್ಷಣೆಗಳಿಂದ ದೂರವಿರುತ್ತಾರೆ. ನಲವತ್ತು ದಿನಗಳ ಕಾಲ

ಮಾಂಸಾಹಾರವನ್ನು ತ್ಯಜಿಸುವ ಕುಟುಂಬಗಳೂ ಇವೆ. ಆದರೆ ಧರ್ಮಸಭೆ ಮಾಂಸಾಹಾರ ನಿರೋಧವನ್ನು ಶುಕ್ರವಾರಗಳಿಗೆ ಮಾತ್ರ ಸೀಮಿತಗೊಳಿಸಿದೆ. ಈ ನಲವತ್ತು ದಿನಗಳ ಅವಧಿಯಲ್ಲಿ ಬರುವ ಆರನೆಯ ಭಾನುವಾರದಂದು ವಿಶೇಷ ಆಚರಣೆ ಇರುತ್ತದೆ.[2]

**5.1.6 ಗರಿಗಳ ಭಾನುವಾರ (Palm Sunday)** ತಪಸ್ಸು ಕಾಲದ ಅವಧಿಯಲ್ಲಿ ಬರುವ ಆರನೆಯ ಭಾನುವಾರವನ್ನು 'ಗರಿಗಳ ಭಾನುವಾರ' ಎನ್ನುತ್ತಾರೆ. ಅಂದು ಬೆಳಿಗ್ಗೆ ಬುಡಕಟ್ಟು ಕ್ರೈಸ್ತರು ತಮ್ಮ ತಮ್ಮ ವಿಚಾರಣೆಗೆ (Parish) ಸೇರಿದ ಚರ್ಚಿಗೆ ಹೋಗುತ್ತಾರೆ. ತೆಂಗಿನಮರದ ಎಳಸಾದ ಗರಿಗಳನ್ನು ಹರಿದು ತಂದು, ಪವಿತ್ರೀಕರಿಸಿ ಗುರುಗಳು ಎಲ್ಲರಿಗೂ ಒಂದೊಂದು ಗರಿಯನ್ನು ನೀಡುವರು. ಎಲ್ಲರೂ ಗರಿಹಿಡಿದು ಗುರುಗಳೊಂದಿಗೆ ಚರ್ಚಿನ ಸುತ್ತಲೂ ಮೆರವಣಿಗೆಯಲ್ಲಿ ಪಾಲ್ಗೊಳ್ಳುವುದುಂಟು ಆಗ ಸಂಪ್ರದಾಯಸ್ಥ ಕುಟುಂಬದವರು ಗುರುಗಳಿಗೆ ನಡೆಮಡಿ ಹಾಸುವ ಪದ್ಧತಿ ಇದೆ. ಧಾರ್ಮಿಕ ವಿಧಿಗಳಲ್ಲಿ ಪಾಲ್ಗೊಳ್ಳುವಾಗ ಗುರುಗಳ ಸ್ಥಾನದಲ್ಲಿ ಯೇಸುವೇ ಇರುತ್ತಾನೆಂಬ ನಂಬಿಕೆ ಕ್ರೈಸ್ತರಲ್ಲಿದೆ. 'ಹೋಸಾನ್ನ, ದೇವರಿಗೆ ಸ್ತುತಿಯಾಗಲಿ' ಎಂಬ ಉದ್ಗಾರದ ಹಾಡುಗಳನ್ನು ಹಾಡುತ್ತಾ ಮೆರವಣಿಗೆಯಲ್ಲಿ ಸಾಗುತ್ತಾರೆ. ಪೂಜೆ ಮುಗಿದ ಬಳಿಕ ಗರಿಗಳನ್ನು ಶಿಲುಬೆಯಾಕಾರದಲ್ಲಿ ಮಾಡಿ ಮನೆಯಲ್ಲಿಡುತ್ತಾರೆ. ಮತ್ತೆ ಮುಂದಿನ ವರ್ಷದ ಬೂದಿ ಬುಧವಾರದ ಸಮಯಕ್ಕೆ ಅದನ್ನು ತಂದು ಚರ್ಚಿನ ಉಪದೇಶಿಯ ಬಳಿಗೊಪ್ಪಿಸುವುದು ಕ್ರಮ.

**5.1.7 ಪವಿತ್ರ ಗುರುವಾರ (Maundy Thursday)** ತಪಸ್ಸುಕಾಲದ ಕೊನೆಯ ಏಳು ದಿವಸಗಳನ್ನು 'ಪವಿತ್ರವಾರ' ಎಂದು ಪರಿಗಣಿಸುತ್ತಾರೆ. ಪವಿತ್ರ ಗುರುವಾರವನ್ನು 'ಕಡೆಯ ಭೋಜನದ ದಿನ' (Last supper) ಎಂದೂ ಕರೆಯುತ್ತಾರೆ. ಅಂದಿನ ಪೂಜಾವಿಧಿಗಳು ವಿಶೇಷವಾಗಿರುತ್ತವೆ. ಈ ಸಂಬಂಧ ಪ್ರಚಲಿತವಿರುವ ಒಂದು ಐತಿಹ್ಯ ಹೀಗಿದೆ:

"ಕ್ರಿಸ್ತನ ಕಡೆಯ ಭೋಜನದ ದಿನವಾದ ಗುರುವಾರ ಭೋಜನ ನಡೆಯುತ್ತಿದ್ದಂತೆಯೇ ಶಿಷ್ಯರ ಜೊತೆಯಲ್ಲಿ ಅಸೀನನಾಗಿದ್ದ ಯೇಸು ಎದ್ದು ಸೊಂಟಕ್ಕೆ ಒಂದು ವಸ್ತ್ರವನ್ನು ಬಿಗಿದು ಒಂದು ಪಾತ್ರೆಯಲ್ಲಿ ನೀರನ್ನು ತೆಗೆದುಕೊಂಡು ಶಿಷ್ಯರ ಪಾದಗಳನ್ನು ತೊಳೆದು, ವಸ್ತ್ರದಿಂದ ಒರೆಸಿದನು. ಶಿಷ್ಯರು ತಮ್ಮ ಗುರುವಿನ ಈ ವರ್ತನೆಯನ್ನು ಕಂಡು ಚಕಿತರಾದರು.

ಹೀಗೆ ಶಿಷ್ಯರಪಾದಗಳನ್ನು ತೊಳೆದ ಬಳಿಕ ಯೇಸು ಹೀಗೆಂದನು: "ನಾನೇನು ಮಾಡಿದೆನೆಂದು ನಿಮಗೆ ತಿಳಿದಿದೆಯೇ? ಗುರುಗಳೇ, ಪ್ರಭೂ ಎಂದು ನೀವು ನನ್ನನ್ನು ಸಂಬೋಧಿಸುತ್ತೀರಿ, ಅದು ಸರಿಯಾದದ್ದೇ. ಏಕೆಂದರೆ ನಾನು ನಿಮ್ಮ ಗುರುವೂ ಪ್ರಭುವೂ ಆಗಿದ್ದೇನೆ. ಹೀಗಿರುವಾಗ ನಾನೇ ನಿಮ್ಮ ಪಾದಗಳನ್ನು ತೊಳೆದಿದ್ದೇನೆ, ಎಂದ ಮೇಲೆ ನೀವೂ ಪರಸ್ಪರರ ಪಾದಗಳನ್ನು ತೊಳೆಯತಕ್ಕದ್ದು. ನಿಮಗೋಸ್ಕರ ನಾನು ಇದನ್ನು ಮಾಡಿ ತೋರಿಸಿದ್ದೇನೆ" ಎಂದನು. (ಯೋವಾನ್ನ 13:1–15).

ಈ ಘಟನೆಯ ಪ್ರತೀಕವಾಗಿ ಪವಿತ್ರ ಗುರುವಾದಂದು ಪೂಜಾವಿಧಿಗಳಲ್ಲಿ (ಕಡೆಯ ಭೋಜನದಲ್ಲಿ) ಪಾಲ್ಗೊಳ್ಳಲು ಕ್ರೈಸ್ತರು ಚರ್ಚಿನಲ್ಲಿ ಸೇರುತ್ತಾರೆ. ಅವರಲ್ಲಿ ಹನ್ನೆರಡು ಮಂದಿಯನ್ನು ಆರಿಸಿಕೊಂಡು ಸಾಲಾಗಿ ಕುರ್ಚಿಗಳ ಮೇಲೆ ಕೂರಿಸಿ ಗುರುಗಳು ಅವರ ಪಾದಗಳನ್ನು ತೊಳೆದು, ಒರೆಸಿ, ಮುತ್ತಿಕ್ಕುತ್ತಾರೆ. ಪ್ರಧಾನ ದೇವಾಲಯಗಳಲ್ಲಿ ಆಯಾ ಧರ್ಮಾಧ್ಯಕ್ಷರೇ[3] (Bishop) ಈ ಸಾಂಗ್ಯವನ್ನು ನೆರವೇರಿಸುತ್ತಾರೆ. ಆನಂತರ ಆ ಹನ್ನೆರಡು ಮಂದಿಗೂ ಬನ್ನು, ಬಾಳೆಹಣ್ಣು ಕೊಟ್ಟು ಗೌರವದಿಂದ ಕಳುಹಿಸಿಕೊಡುತ್ತಾರೆ.

ಗುರುವಾರದ ಪೂಜೆಯ ಅನಂತರ ಉಪವಾಸ, ತಪಸ್ಸು, ಆಚರಣೆಗಳು ಇನ್ನೂ ತೀವ್ರಗೊಳ್ಳುತ್ತವೆ. ಅಂದು ರಾತ್ರಿ ಯೇಸು ಕಟುಕರ ಕೈಗೆ ಒಪ್ಪಿಸಲ್ಪಟ್ಟ ದಿನವಾಗಿದೆ. ಅಂದು ಚರ್ಚಿನ ಒಂದು ಭಾಗದಲ್ಲಿ ಪೀಠವನ್ನು ಬಿಳಿಯ ವಸ್ತ್ರಗಳಿಂದಲೂ, ಪುಷ್ಪಗಳಿಂದಲೂ ಅಲಂಕರಿಸಿ, ಪರಮ ಪ್ರಸಾದವನ್ನು ಪ್ರತಿಷ್ಠಾಪಿಸುತ್ತಾರೆ. ಪರಮ ಪ್ರಸಾದದಲ್ಲಿ 'ಕ್ರಿಸ್ತ ಯೇಸು' ಇದ್ದಾನೆಂಬ ನಂಬಿಕೆಯಿದೆ. ಜನರು ಗುಂಪು ಗುಂಪಾಗಿ ಬಂದು ಆರಾಧನೆ ಸಲ್ಲಿಸುತ್ತಾರೆ. ಬುಡಕಟ್ಟು ಕ್ರೈಸ್ತರ ಚರ್ಚಿನಲ್ಲಿ ಇಡೀ ರಾತ್ರಿ ಚರ್ಚಿನ ಬಾಗಿಲು ತೆರೆದಿರುತ್ತದೆ. ಪ್ರತಿಯೊಂದು ಬಡಾವಣೆಯ ಜನರಿಗೂ ಒಂದೊಂದು ಗಂಟೆ ಆರಾಧನಾ ವೇಳೆಯನ್ನು ಗೊತ್ತುಮಾಡಿರುತ್ತಾರೆ. ಅದರ ಪ್ರಕಾರ ಜನರು ಇಡೀ ರಾತ್ರಿ ಚರ್ಚಿಗೆ ಬಂದು ಪ್ರಾರ್ಥನೆ ಸಲ್ಲಿಸುತ್ತಾರೆ. ಅನೇಕರು ಬೆಳಗಿನ ಜಾವದವರೆಗೆ ಚರ್ಚಿನಲ್ಲೇ ಉಳಿಯುತ್ತಾರೆ.

ಪ್ರಾಣತ್ಯಾಗ ಮಾಡುವ ಹಿಂದಿನ ರಾತ್ರಿ ತನ್ನ ಶಿಷ್ಯರನ್ನು ಕುರಿತು ಯೇಸುಕ್ರಿಸ್ತ "ನಿದ್ರೆ ಮಾಡದೆ ನನಗಾಗಿ ಪ್ರಾರ್ಥಿಸಿರಿ" ಎಂದು ಕೇಳಿಕೊಂಡು ಪ್ರಾರ್ಥನೆಯನ್ನೂ ಕಲಿಸಿದ್ದನು. ಅದಕ್ಕಾಗಿ ಹೀಗೆ ನಿದ್ರೆತೊರೆದು ಸತತವಾಗಿ ಪ್ರಾರ್ಥಿಸುವುದು ರೂಢಿಯಾಗಿದೆ ಎಂಥು ಹೇಳುತ್ತಾರೆ. ಹಳ್ಳಿಗಳಲ್ಲಿ ರಾತ್ರಿಯಲ್ಲಾ ಪ್ರಾರ್ಥನೆ ಇಲ್ಲದಿದ್ದರೂ ಸಂಜೆಯೇ ಕಡ್ಡಾಯವಾಗಿ ಸಾಮೂಹಿಕ ಪ್ರಾರ್ಥನೆ ಸಲ್ಲಿಸುತ್ತಾರೆ.

**೫.೧.೮ ಪವಿತ್ರ ಶುಕ್ರವಾರ (Good Friday)** ಅಂದು ಮಧ್ಯಾಹ್ನ ಮೂರು ಗಂಟೆಗೆ ಯೇಸುಕ್ರಿಸ್ತ ಶಿಲುಬೆಯ ಮೇಲೆ ಪ್ರಾಣನೀಗಿದ ಶೋಕಾಚರಣೆಗಾಗಿ ಕ್ರೈಸ್ತರು ಚರ್ಚಿನಲ್ಲಿ ಸೇರಿ 'ಶಿಲುಬೆಯ ಹಾದಿ' (Way of the cross) ಮಾಡುತ್ತಾರೆ. ಅನಂತರ ಯೇಸುಕ್ರಿಸ್ತನ ವೇದನೆ ಮತ್ತು ಬೋಧನೆಯ ಬಗ್ಗೆ ಪವಿತ್ರ ಗ್ರಂಥವಾಚನ ಮಾಡಿ ಧ್ಯಾನಿಸುತ್ತಾರೆ. ಹೀಗೆ ಅನೇಕ ಶೋಕಗೀತೆಗಳನ್ನು ಹಾಡಿ ಎರಡುಸಾವಿರ ವರ್ಷಗಳ ಹಿಂದಿನ ವಾತಾವರಣವನ್ನು ನೆನೆದುಕೊಳ್ಳುತ್ತಾರೆ. ಯೇಸುಕ್ರಿಸ್ತನು ಪ್ರಾಣತ್ಯಾಗ ಮಾಡಿದ ಶಿಲುಬೆಯನ್ನು ಇಳಿಸಿ ಶವಸಂಸ್ಕಾರಕ್ಕೆ ಮುನ್ನ ಪಾರ್ಥಿವ ಶರೀರವನ್ನು ಸರ್ವರ ದರ್ಶನಕ್ಕೆ ಇಡುವಂತೆ ಪೀಠದ ಮುಂಭಾಗದಲ್ಲಿ ಇಟ್ಟಿರುತ್ತಾರೆ. ಇಕ್ಕಲೆಗಳಲ್ಲಿ ಗುರುಗಳು ಕುಳಿತಿರುತ್ತಾರೆ. ಜನರು ಸಾಲಾಗಿ ಬಂದು ಆರಾಧಿಸಿ ಶಿಲುಬೆಯ ಯೇಸುವಿನ ಪಾದಕ್ಕೆ ಮುತ್ತಿಟ್ಟು ಹೋಗುತ್ತಾರೆ.

ಇಂದಿನ ದಿನವನ್ನು 'ಶುಭ ಶುಕ್ರವಾರ' ಎಂದು ಕರೆಯುತ್ತಾರೆ. ಇದು 'ಕ್ರಿಸ್ತ' ಮರಣ ಹೊಂದಿದ ದುಃಖದ ದಿನವಾಗಿದ್ದರೂ 'ಶುಭ' ಎಂಬ ಪದವನ್ನು ಬಳಸಲಾಗಿದೆ. ಕಾರಣ ಮಾನವನಿಗೆ ಪಾಪದಿಂದ ರಕ್ಷಣೆ ದೊರೆತ ದಿನ ಅದು. ಇತರರಿಗಾಗಿ ತನ್ನ ಜೀವನವನ್ನೇ ಸಮರ್ಪಿಸಿದ ಯೇಸುವಿನಂತೆ ತಮ್ಮ ಜೀವನದಲ್ಲೂ ಎದುರಾಗುವ ಸಂಕಷ್ಟಗಳನ್ನು ಸಮರ್ಪಣ ಭಾವದಿಂದ ಎದುರಿಸಿದರೆ ಅದು ಸಂತೋಷವಾಗಿ ಪರಿವರ್ತನೆ ಹೊಂದುತ್ತದೆ ಎಂಬ ನಂಬಿಕೆ ಬುಡಕಟ್ಟು ಕ್ರೈಸ್ತರಲ್ಲಿದೆ. ಆದ್ದರಿಂದ ಪವಿತ್ರ ಶುಕ್ರವಾರ ಶೋಕಾಚರಣೆಯ ದಿನವಾದರೂ 'ಶುಭ ಶುಕ್ರವಾರವಾಗಿದೆ. "The friday before easter on which is commemorate the crusifixion of Jesus Christ. The name probably from God's Friday" (Encyclopedia: 1980:259)
ಮೇಲಿನ ಹೇಳಿಕೆಯಂತೆ 'God's Friday' ಎಂಬುದು ಅಷ್ಟೇನೂ ಸಮಂಜಸವಲ್ಲವೆನಿಸುತ್ತದೆ. ಕ್ರೈಸ್ತಧರ್ಮದ ಅಸ್ತಿತ್ವವಿರುವುದು ಯೇಸುವಿನ ಪುನರುತ್ಥಾನದಲ್ಲಿ. ಪುನರುತ್ಥಾನದ ಪರಮಾನಂದವನ್ನು ನೀಡುವ ಸಂದರ್ಭದ ಹಿನ್ನೆಲೆಯಲ್ಲಿ ಇದು 'ಶುಭಶುಕ್ರವಾರ' ವೇ ಆಗಿರಲು ಸಾಧ್ಯ. ಪವಿತ್ರ ಶುಕ್ರವಾರ ಮತ್ತು ಶನಿವಾರ ಚರ್ಚುಗಳಲ್ಲಿ ಗಂಟೆ ಬಾರಿಸುವುದಿಲ್ಲ. ಈ ನಿಷೇಧವು ಹೊರದೇಶಗಳಲ್ಲಿ ಗಂಟೆಗಳನ್ನು ಬಾರಿಸದಿರುವ ಸಂಪ್ರದಾಯವನ್ನು ಬೆಳೆಸಿದೆ. "In

some countries of Europe bells are tied on good Friday, so that they cannot ring" (ಅದೇಪುಟ: 260)

ಶನಿವಾರ ಮನೆಮಂದಿಯೆಲ್ಲಾ ಸ್ನಾನಮಾಡಿ ಮನೆಯನ್ನು ಸಾರಿಸಿ ಶುಚಿಗೊಳಿಸಿ ಮರುದಿನದ ಹಬ್ಬಕ್ಕೆ ಸಿದ್ಧತೆ ಮಾಡಿಕೊಳ್ಳುವುದು ಕ್ರಮ. ವರ್ಷಕ್ಕೊಮ್ಮೆಯಾದರೂ ಪಾಪ ವೇದನೆಯನ್ನು ಮಾಡಬೇಕೆಂಬ ಧರ್ಮಸಭೆಯ (Church) ಕಟ್ಟಳೆಯಂತೆ, ಎಲ್ಲರೂ ಪಾಪ ನಿವೇದನೆ ಮಾಡಿ ಆತ್ಮಶುದ್ಧಿಮಾಡಿಕೊಳ್ಳುತ್ತಾರೆ. ಇದಕ್ಕೆ ಗುರುಗಳು ಬೇಕಾದ ಸಿದ್ಧತೆಗಳನ್ನು ಮಾಡಿ ನೆರೆಯ ಧರ್ಮಕೇಂದ್ರದ ಗುರುಗಳನ್ನು ಸಹಾಯಕ್ಕೆ ಕರೆಸಿಕೊಳ್ಳುವುದುಂಟು.

**5.1.9 ಮೃತರ ಸ್ಮರಣೆಯ ದಿನ** ಮೃತರ ಸ್ಮರಣೆಯ ದಿನದಂದು ಸಾಮಾಜಿಕ ವಿಧಿಗಳಿಗೆ ಪ್ರಮುಖ ಸ್ಥಾನವಿದೆ. ಕುಟುಂಬದಲ್ಲಿ ಸತ್ತವರ ಆತ್ಮಗಳಿಗೆ ಶಾಂತಿ ಸಿಗಲೆಂಬ ಉದ್ದೇಶದಿಂದ ಸಾಮೂಹಿಕ ಪೂಜಾ ವಿಧಿಗಳನ್ನು ನಡೆಸಲಾಗುತ್ತದೆ. ಕ್ರೈಸ್ತೇತರರಲ್ಲಿಯೂ ಈ ಆಚರಣೆಗಳು ರೂಢಿಯಲ್ಲಿವೆ. ಹಿಂದುಗಳು ಪಿತೃಪೂಜೆ, ಪಕ್ಷ ಇತ್ಯಾದಿಗಳನ್ನು ಮೃತರ ಸ್ಮರಣೆಗಾಗಿ ಮಾಡುತ್ತಾರೆ. ಮುಸ್ಲಿಮರು "ಶಾಬೆ ಬಾರಾತ್" ಹಬ್ಬದಂದು ಗೋರಿಗಳಿಗೆ ಸಂದರ್ಶನವಿತ್ತು, ಮೃತರ ಆತ್ಮಗಳಿಗೆ ಶಾಂತಿ ಕೋರುತ್ತಾರೆ (ದೇಸಾಯಿ: 1992:161). ಹೀಗೆ ಗೋರಿಗಳನ್ನು ಸಂದರ್ಶಿಸಿ ಪ್ರಾರ್ಥಿಸುವುದಕ್ಕೆ ಅವರು 'ಕಬರ್‌ಝಿಯಾರತ್' ಎಂದು ಹೇಳುತ್ತಾರೆ.

ಬುಡಕಟ್ಟು ಕ್ರೈಸ್ತರಲ್ಲಿಯೂ ಮೃತರ ದಿನಾಚರಣೆ ರೂಢಿಯಲ್ಲಿದೆ. ಇದು ಮೃತರ ಆತ್ಮಕ್ಕೆ ಶಾಂತಿಯನ್ನು ಕೋರುವ ಪ್ರಾರ್ಥನಾದಿನ. ಆದರೆ ರೂಢಿ, ವಿಧಿ, ನಿಷೇಧಗಳಿಂದ ಕೆಲವು ಕಡೆ ಇದು ಹಬ್ಬವಾಗಿ ಪರಿವರ್ತನಗೊಂಡಿದೆ. ಪ್ರಾರ್ಥನೆಗಿಂತಲೂ ಹೆಚ್ಚು ಪ್ರಾಮುಖ್ಯತೆ ಆಚರಣೆಗಳಲ್ಲಿ ಕಂಡುಬರುತ್ತದೆ. ಇದನ್ನು ಇಲ್ಲಿಯ ಕ್ರೈಸ್ತರು 'ಗೋರಿಹಬ್ಬ' ಎಂದು ಕರೆಯುತ್ತಾರೆ.[4]

ನವೆಂಬರ್ 2ರಂದು ಮೃತರ ಸ್ಮರಣೆಯ ದಿನವನ್ನಾಗಿ ಆಚರಿಸುವುದು ವಾಡಿಕೆ. ಹಬ್ಬಕ್ಕೆ ವಾರದ ಮುಂಚಿತವಾಗಿಯೇ ಗೋರಿಗಳ ಮೇಲೆ ಬೆಳೆದುಕೊಂಡಿರುವ ಹುಲ್ಲು ಕಿತ್ತುಹಾಕಿ, ಮಣ್ಣು ಮೆತ್ತಿ ಸಮಮಾಡಿ, ಸಾರಿಸಿ, ಒಣಗಿದ ಮೇಲೆ ಸುಣ್ಣ ತುಂಬಿ ಬೆಳ್ಳಗೆ ಮಾಡುತ್ತಾರೆ. ಸಮಾಧಿಯ ಬಗೆಗೆ ಯೇಸುಕ್ರಿಸ್ತನ ನಿಂದನೆಯ ಧ್ವನಿ ಇದೆ (ಮತ್ತಾಯ 23:27–28). ಡಂಭಾಚಾರಿಗಳಾದ ಕ್ರೈಸ್ತಪುರೋಹಿತರು ನೀಲಿಯ ಅಂಗಿಗಳನ್ನು ತೊಟ್ಟಿದ್ದರೂ ಅವರ ಜೀವನ ಲೌಕಿಕ ಆಸೆಗಳಿಗೆ ಅಧೀನವಾಗಿರುವುದನ್ನು ಕಂಡು ಅವರನ್ನು ಸುಣ್ಣ ಬಳಿದ ಸಮಾಧಿಗೆ ಹೋಲಿಸಿದ್ದಾರೆ. ಆತ್ಮದ ವಿಚಾರದಲ್ಲಿ ಬುಡಕಟ್ಟು ಕ್ರೈಸ್ತರ ಅನಿಸಿಕೆ ಏನೇ ಇದ್ದರೂ ಮಣ್ಣಿನ ಆಳದಲ್ಲಿ ಹುದುಗಿರುವುದು ತಮ್ಮ ಹಿರಿಯರ, ಪ್ರಿಯರ ಅವಶೇಷ ಎಂಬ ಭಾವನಾತ್ಮಕ ಸಂವೇದನೆ ಇದ್ದೇ ಇರುತ್ತದೆ. ಬುಡಕಟ್ಟು ಕ್ರೈಸ್ತರು ಆತ್ಮಿಕ ವ್ಯವಹಾರಕ್ಕಿಂತಲೂ ಲೌಕಿಕವಾದ ಆಚರಣೆಗೆ ಹೆಚ್ಚು ಮಹತ್ವ ನೀಡಿರುವುದು ಕಂಡುಬರುತ್ತದೆ.

ಮೃತರ ಸ್ಮರಣೆಯ ದಿನವನ್ನು ಸಂಭ್ರಮದಿಂದ ಆಚರಿಸುವುದರಲ್ಲಿ ವೈಶಿಷ್ಟ್ಯವಿದೆ. ಹಿಂದುಗಳಲ್ಲಿರುವಂತೆ ಪುನರ್ಜನ್ಮದ ನಂಬಿಕೆ ಕ್ರೈಸ್ತರಲ್ಲಿ ಇಲ್ಲವಾದರೂ, ಮೂಲತಃ ಹಿಂದೂಗಳಾಗಿದ್ದ ಈ ಜನರು ಅಕ್ಟೋಬರ್ ತಿಂಗಳಿನಲ್ಲಿ ಬರುವ ಪಕ್ಷದ ಆಚರಣೆಯನ್ನೂ ದಶಕದ ಹಿಂದೆ ಕೂಡಲೂರಿನ ಕ್ರೈಸ್ತರು ಸಮಾಧಿಯ ಮೇಲೆ ಎಡೆ ಹಾಕುವುದು.[5] ರೂಢಿಯಲ್ಲಿತ್ತು ಎಂದು ತಿಳಿದು ಬರುತ್ತದೆ. ಆದರೆ ಇತ್ತೀಚೆಗೆ ಅದು ರೂಢಿಯಲಿಲ್ಲ. ಇದನ್ನೆ

ಹೋಲುವ ಕಾಡುಗೊಲ್ಲರ ಸಂಪ್ರದಾಯವನ್ನು ಇಲ್ಲಿ ಸ್ಮರಿಸಬಹುದು: 'ಮಹಾಲಯ ಅಮಾವಾಸ್ಯೆಯ ದಿನ ಅವರು ಕರಿಯ ಕಂಬಳಿ ಸೀರೆ, ಪಂಚೆ, ರುಮಾಲನ್ನು ಹಾಗೂ ಅಂದು ಮನೆಯಲ್ಲಿ ಮಾಡಿದ ಅಡುಗೆಯ ಎಡೆಯನ್ನು ತೆಗೆದುಕೊಂಡು ಸಮಾಧಿಯ ಬಳಿಗೆ ಹೋಗಿ, ಆ ಸಮಾಧಿ ಮೇಲೆ ತಾವು ಒಯ್ದಿರುವ ಬಟ್ಟೆಗಳನ್ನಿಟ್ಟು ಪೂಜೆಮಾಡಿ, ಎಡೆಹಾಕಿ, ನಮಸ್ಕಾರ ಮಾಡಿ ಹಿಂತಿರುಗಿ ಬರುತ್ತಾರೆ" (ಶಂಕರನಾರಾಯಣ: 1982:163).

ಪುನರ್ಜನ್ಮದಲ್ಲಿ ನಂಬಿಕೆ ಇರುವ ಹಿಂದುಗಳು ಎಡೆ ಹಾಕುವುದು ಅರ್ಥಪೂರ್ಣವಾಗಿದೆ. ಆದರೆ ಸಿದ್ದಿ ಕೊರಗ ಈ ನಂಬಿಕೆ ಇಲ್ಲದಿದ್ದರೂ ಪಿತೃಗಳನ್ನು ತೃಪ್ತಿಪಡಿಸದಿದ್ದಲ್ಲಿ ಏನಾದರೂ ತೊಂದರೆ ಸಂಭವಿಸಬಹುದೆಂಬ ಭಯದಿಂದಲೋ ಏನೋ ಈ ಸಂಪ್ರದಾಯವನ್ನು ಉಳಿಸಿಕೊಂಡು ಬಂದಂತೆ ಕಾಣುತ್ತದೆ. ಮನೆಯ ಹೊಸ್ತಿಲಿನ ಎರಡೂ ಬದಿಗಳಲ್ಲಿ ಮಣ್ಣಿನ ಹಣತೆಗಳನ್ನು ಹಚ್ಚಿಡುತ್ತಾರೆ. ಹಳ್ಳಿಗಳಲ್ಲಿ ಮನೆ ಕಟ್ಟುವಾಗಲೇ ಮುಂಬಾಗಿಲಿನ ಇಕ್ಕೆಲಗಳಲ್ಲಿ ಗೋಡೆಯ ಮೇಲೆ ದೀಪದ ಗೂಡುಗಳನ್ನು ನಿರ್ಮಿಸಿರುತ್ತಾರೆ. ಅದರೊಳಗೆ ಹಣತೆಗಳನ್ನು ಹಚ್ಚಿಡುತ್ತಾರೆ. ಅಂದು ಮನೆ ಮಂದಿಯೆಲ್ಲಾ ಧೂಪಹಾಕಿ ಮೃತರಿಗಾಗಿ ಪ್ರಾರ್ಥಿಸುತ್ತಾರೆ. ನಿಧನ ಹೊಂದಿದ ಮಾವನಿಗೆ ಹಿರಿಯಸೊಸೆ ಧೂಪ ಹಾಕಲೇಬೇಕೆಂಬ ನಿಯಮವಿದೆ. ಇಲ್ಲದಿದ್ದರೆ ಅವರ ಆತ್ಮಕ್ಕೆ ಶಾಂತಿ ಸಿಗುವುದಿಲ್ಲ, ಎಂಬುದು ಕೆಲವು ಕ್ರೈಸ್ತರ ನಂಬಿಕೆ. ಪ್ರಾರ್ಥನೆ ಮುಗಿದ ಬಳಿಕ ಮಕ್ಕಳು ಪಟಾಕಿಗಳನ್ನು ಸಿಡಿಸುವುದು ಇತ್ತೀಚಿನ ಹೊಸ ಸೇರ್ಪಡೆಯಾಗಿದೆ. ದಾನ ಮಾಡುವುದು ಆ ದಿನದ ಪುಣ್ಯದ ಕೆಲಸ. ಮೂವರು ಅಥವಾ ಒಬ್ಬ ಭಿಕ್ಷುಕನಿಗಾದರೂ ಊಟ ಹಾಕುವುದು ರೂಢಿ. ಕ್ರೈಸ್ತರು ರೂಢಿಯಲ್ಲಿಟ್ಟುಕೊಂಡಿರುವ ಈ ಆಚರಣೆಗಳಿಂದಾಗಿ ಮೃತರ ಸ್ಮರಣೆಯ ದಿನ ' ಗೋರಿಹಬ್ಬ ' ವಾಗಿ ಮಾರ್ಪಟ್ಟಿದೆ.

**ಈ ಹಬ್ಬದ ಬಗೆಗಿನ ನಂಬಿಕೆಗಳು**

1. ಮೃತರ ಆತ್ಮಶಾಂತಿಗಾಗಿ ಬಲಿ ಪೂಜೆಯನ್ನರ್ಪಿಸಬೇಕು.
2. ಹಿರಿಯ ಸೊಸೆ ಧೂಪ ಹಾಕದಿದ್ದಲ್ಲಿ ಮೃತನಾದ ಮಾವನ ಆತ್ಮಕ್ಕೆ ಶಾಂತಿ ಸಿಗುವುದಿಲ್ಲ.
3. ಹಬ್ಬದ ದಿನದಂದು ಎಡೆಹಾಕಬೇಕು. ಇಲ್ಲದಿದ್ದರೆ ಮನೆಯವರಿಗೆ ಕಷ್ಟಗಳು ಬರುತ್ತವೆ.
4. ಎಡೆಹಾಕುವಾಗ ' ಸರಾಪು ' ಬಾಟಲಿನ ಮುಚ್ಚಳ ತೆಗೆದಿಡಬೇಕು.
5. ಸಮಾಧಿಯ ಮೇಲೆ ಮತ್ತು ಮನೆಯ ಮುಂದೆ ದೀಪಗಳನ್ನು ಹಚ್ಚಿಡಬೇಕು.
6. ಅಂದು ಪಟಾಕಿ ಸುಡಬೇಕು. ಇಲ್ಲದಿದ್ದರೆ ಮೃತರು ಸಂತುಷ್ಟರಾಗುವುದಿಲ್ಲ.

ಮೊದಲನೆಯ ನಂಬಿಕೆಯು ಮಾವನ ಮೃತನಾದ ಆನಂತರವೂ ಪ್ರಾರ್ಥನೆಗಳ ಅವಶ್ಯಕತೆ ಇದೆ ಎಂಬುದನ್ನು ಸೂಚಿಸುತ್ತದೆ. ಕ್ರೈಸ್ತರಲ್ಲಿ ಆಧ್ಯಾತ್ಮಿಕ ಶ್ರದ್ಧೆ ಬೆಳೆಯುತ್ತಿರಬೇಕೆಂಬ ಉದ್ದೇಶದಿಂದ ಈ ನಂಬಿಕೆ ಹುಟ್ಟಿಕೊಂಡಿದೆ. ತನ್ನ ಜೀವಿತದ ಅವಧಿಯಲ್ಲಿ ಅವನು ಮಾಡಿದ ತಪ್ಪಿಗೆ ಪ್ರಾಯಶ್ಚಿತ್ತವಾಗಿ ಮೃತನಾದ ಬಳಿಕವೂ ಅವನಿಗೆ ಮುಕ್ತಿ ದೊರೆತಿರುವುದಿಲ್ಲ. ಪೂಜಾ ಪ್ರಾರ್ಥನೆಗಳನ್ನು ಅರ್ಪಿಸುವುದರಿಂದ ಅಂಥವರಿಗೆ ಬೇಗ ಮುಕ್ತಿ ಸಿಗುತ್ತದೆ ಎಂಬುದು ಇದರ ಹಿಂದಿರುವ ಉದ್ದೇಶ.

ಎರಡನೆಯ ನಂಬಿಕೆಯು ಕುಟುಂಬ ಒಡೆಯದಿರಲೆಂಬ ಉದ್ದೇಶದಿಂದ ಹುಟ್ಟಿಕೊಂಡಿದೆ. ಅವಿಭಕ್ತ ಕುಟುಂಬಗಳಲ್ಲಿ ಹಿರಿಯ ಸೊಸೆಯ ಪಾತ್ರ ಎಷ್ಟು ಜವಾಬ್ದಾರಿಯುತವಾದುದು ಎಂಬುದನ್ನು ಇದು ಸ್ಪಷ್ಟಪಡಿಸುತ್ತದೆ.

ಮೂರನೆಯ ಮತ್ತು ನಾಲ್ಕನೆಯ ನಂಬಿಕೆಗಳು ಹಿಂದುಗಳ ‘ ಪಿತೃ ಪಕ್ಷ ’ ಪದ್ಧತಿಯ ಪರಿಣಾಮವಾಗಿವೆ. ಎಡೆಯಿಕ್ಕುವುದು ಹಿಂದುಗಳಲ್ಲಿ ಬಹುಹಿಂದಿನಿಂದಲೂ ರೂಢಿಯಲ್ಲಿರುವ ಪದ್ಧತಿಯಾಗಿದೆ. ‘ಪಕ್ಷ’ ಮಾಡುವಾಗ ಮನೆಗೆ ಸುಣ್ಣ ಬಳಿದು, ಮನೆಯಲ್ಲಿ ಬಳಸುವ ಒಂದೊಂದೂ ಸಲಕರಣೆಗಳನ್ನು ತೊಳೆದು ಶುಚಿಮಾಡಿ, ಮಡಿಯಿಂದ ಎಡೆಯಿಕ್ಕುವುದು ಕಂಡು ಬರುತ್ತದೆ. ಕ್ರೈಸ್ತರು ಹಿಂದುಗಳಷ್ಟು ‘ ಮಡಿ ’ ಆಚರಿಸದಿದ್ದರೂ ಪದ್ಧತಿಯನ್ನು ಬಿಟ್ಟುಕೊಡದೆ ಪಾಲಿಸಿಕೊಂಡು ಬಂದಿದ್ದಾರೆ. ‘ ಸರಾಪು ’ ಬಾಟಲಿನ ಮುಚ್ಚಳವನ್ನು ತೆಗೆದಿರಿಸುವುದು ದೂತನು ಸರಾಪು ಕುಡಿಯಲು ಮುಚ್ಚಳತೆಗೆದಿರಬೇಕೆಂಬ ನಂಬಿಕೆಯೇ ಆಗಿದೆ. ಎಡೆಯಿಕ್ಕಿದ ಊಟವನ್ನು ಯಾರಾದರೂ ಭಿಕ್ಷುಕರಿಗೆ ದಾನ ಮಾಡಿಬಿಡುತ್ತಾರೆ.

ಐದನೆಯ ಮತ್ತು ಆರನೆಯ ನಂಬಿಕೆಗಳು ದೀಪಾವಳಿ ಹಬ್ಬದ ಅಂಗವಾಗಿ ರೂಢಿಯಲ್ಲಿವೆ. ಹಿಂದುಗಳು ಆಚರಿಸುವ ದೀಪಾವಳಿ ಹಬ್ಬದಂದು ಮಕ್ಕಳು ಸಿಡಿಮದ್ದುಗಳನ್ನು ಸುಡುವುದು ಸಂಭ್ರಮ. ತಮ್ಮ ಮಕ್ಕಳಿಗೆ ಆ ಮನೋರಂಜನೆ ತಪ್ಪಿಹೋಗಬಾರದೆಂದು ನವೆಂಬರ್ ತಿಂಗಳಲ್ಲೇ ಆಚರಿಸುವ ಮೃತರ ಸ್ಮರಣೆಯ ದಿನದಂದು ಸಿಡಿಮದ್ದುಗಳನ್ನು ಸುಡುವುದು ರೂಢಿಗೆ ಬಂದಿದೆ.

## 5.2 ಸ್ಥಳೀಯ ಹಬ್ಬಗಳು

**5.2.1 ಆರೋಗ್ಯಮಾತೆಯ ಹಬ್ಬ** ಆರೋಗ್ಯಮಾತೆಯ ಹಬ್ಬವನ್ನು ಬುಡಕಟ್ಟುಕ್ರೈಸ್ತರ ಎಲ್ಲಾ ಚರ್ಚುಗಳಲ್ಲಿಯೂ ಆಚರಿಸಲಾಗುತ್ತದೆ. ಇದರ ಹಿಂದಿನ ಐತಿಹ್ಯ ಹೀಗಿದೆ: ತಮಿಳುನಾಡಿನ ನಾಗಪಟ್ಟಣದ ವೆಳ್ಳಾಂಗಣ್ಣಿ ಎಂಬ ಗ್ರಾಮದಲ್ಲಿ ಕುಂಟ ಹುಡುಗನೊಬ್ಬನಿಗೆ ಆಕೆ ಕಾಣಿಸಿಕೊಂಡು ಆತನಿಗೆ ಎದ್ದು ನಡೆದುಕೊಂಡು ಬರಲು ಹೇಳಿದಾಗ ಆತ ನಡೆದುಬಂದನೆಂಬುದು ಐತಿಹ್ಯ. ಹೀಗೆ ಅನೇಕ ಪವಾಡಗಳು ನಡೆದಿರುವ ಹಿನ್ನೆಲೆಯಲ್ಲಿ ಜನರು ಆಕೆಯನ್ನು "ಆರೋಗ್ಯಮಾತೆ" ಎಂದು ಗೌರವಿಸುತ್ತಾರೆ. ಸೆಪ್ಟೆಂಬರ್ ಎಂಟನೆ ತಾರೀಖು ವೆಳ್ಳಾಂಗಣ್ಣಿಯಲ್ಲಿ ನಡೆಯುವ ಹಬ್ಬಕ್ಕೆ ದೇಶದ ಮೂಲೆ ಮೂಲೆಗಳಿಂದಲೂ ಜನರು ಆಗಮಿಸುತ್ತಾರೆ. ಅಲ್ಲಿ ದಿನವೂ ಜಾತ್ರೆಯಾಗಿರುತ್ತದೆ.

ಇದೇ ಹಬ್ಬವನ್ನು ಸಿದ್ದಿ ಮತ್ತು ಕೊರಗ ಕ್ರೈಸ್ತರು ಸೆಪ್ಟೆಂಬರ್ ಎಂಟನೆಯ ತಾರೀಖು ಆಚರಿಸುತ್ತಾರೆ. ಹಬ್ಬಕ್ಕೆ ಮುನ್ನ ಒಂಬತ್ತು ದಿನಗಳ ವ್ರತವನ್ನು ಆಚರಿಸಲಾಗುತ್ತದೆ. ದೇವ ಮಾತೆಯ ಪ್ರತಿಮೆಯನ್ನಿಟ್ಟು ಹೂವುಗಳಿಂದ ಅಲಂಕರಿಸುತ್ತಾರೆ. ಪ್ರತಿದಿನ ಮಕ್ಕಳು ತಟ್ಟೆಗಳಲ್ಲಿ ಬಿಡಿ ಹೂವುಗಳನ್ನು ತಂದು ಮಾತೆಗರ್ಪಿಸುತ್ತಾರೆ. ಈ ಪದ್ಧತಿ ಮಂಗಳೂರಿನ ಕೊಂಕಣಿ ಕ್ರೈಸ್ತರಿಂದ ಬಂದದ್ದಾಗಿದೆ. ಇವರ ಸಂಪ್ರದಾಯದಲ್ಲಿ ಪ್ರತ್ಯೇಕ ವಿಶೇಷತೆಯನ್ನು ಗುರುತಿಸಬಹುದು. ನವದಂಪತಿಗಳಿದ್ದಲ್ಲಿ ಹಬ್ಬದ ಹಿಂದಿನ ದಿನ ತವರಿಗೆ ಕರೆತಂದು ಹೊಸಸೀರೆ ಉಡಿಸಿ, ಮಾಂಸದಡುಗೆ ಮಾಡಿ ಬಡಿಸುತ್ತಾರೆ. ಹಬ್ಬದ ದಿನ ಮಾಂಸಾಹಾರ ನಿಷಿದ್ಧವಾಗಿರುತ್ತದೆ. ಬೇರೆ ಕ್ರೈಸ್ತರಲ್ಲಿ ಮಾಂಸಹಾರ ಊಟವಿರುತ್ತದೆ. ಸಿದ್ಧಿ ಕ್ರೈಸ್ತರಿಗೆ ಮಾಂಸಹಾರ ನಿಷಿದ್ಧವಾಗಿರುತ್ತದೆ. ವಿವಿಧ ಬಗೆಯ ತರಕಾರಿ ಪಲ್ಯಗಳನ್ನು ಅಣಿಗೊಳಿಸುತ್ತಾರೆ. ಚರ್ಚಿನಲ್ಲಿ ಪೂಜೆಯ ಅನಂತರ ಹೊಸಬತ್ತದ ತೆನೆಗಳನ್ನು ಹಂಚುತ್ತಾರೆ. ಬತ್ತ ಮಂಗಳೂರಿನ ಪ್ರಮುಖ ಬೆಳೆ; ಆಹಾರ ಬೆಳೆಯೂ ಹೌದು. ನವದಂಪತಿಗಳಿಗೆ ತವರು ಮನೆಯಿಂದ ಹೊಸ ಬತ್ತವನ್ನು ಕೊಟ್ಟು ಕಳುಹಿಸುವುದು ರೂಢಿಯಾಗಿದೆ. ತಮಿಳು ಮತ್ತು ಕನ್ನಡ ಕ್ರೈಸ್ತರಲ್ಲಿ ಈ ಪದ್ಧತಿ ಇಲ್ಲವಾದರೂ ನವದಿನಗಳ ವ್ರತದಲ್ಲಿ ಸಕ್ರಿಯ

ಪಾತ್ರವಹಿಸುತ್ತಾರೆ. ತೋಟ, ಹಿತ್ತಲುಗಳಲ್ಲಿ ಬೆಳೆದ ಪುಷ್ಪಗಳನ್ನು ತಂದು "ಮಾತೆ"ಗರ್ಪಿಸುತ್ತಾರೆ. ಕೆಳಗಿನ ಗೀತೆಯಲ್ಲಿ ಅವರ ದೀನತೆಯನ್ನು ಕಾಣಬಹುದು.

ಮರಿತಾಯಿ ಮಠಕ್ಕೆ ಬರಿಗೈ ನಾನೋದೆ
ಹಿಡಿ ತುಂಬಿದ್ದೊನ್ನು ಜಪಸರ ದೇವರತಾಯಿ
ನಿಮ್ಮ ತೇರಿನ ಮೇಲಿಟ್ಟೆ ಹಿಡಿಹೊನ್ನ
ಮಲ್ಲಿಗೆ ಹೂವ ಅಲ್ಲಿಟ್ಟೆ ಇಲ್ಲಿಟ್ಟೆ
ನಿಮ್ಮ ತೇರಿನ ಮೇಲಿಟ್ಟೆ ಮರಿಯವ್ವ (ತಲ್ವಾಡಿ:1983:110)

ಜಪಸರವು ದೇವಮಾತೆಗೆ ಅರ್ಪಿತವಾದ ಪ್ರಾರ್ಥನಾಮಾಲೆ ಎಂಬುದು ಬುಡಕಟ್ಟು ಕ್ರೈಸ್ತರ ನಂಬಿಕೆ. ಹಿಡಿ ಹೊನ್ನಿನಷ್ಟು ಬೆಲೆಬಾಳುವಂಥದ್ದು. ದೇವಮಾತೆಯ ಹಬ್ಬಗಳಲ್ಲಿ ನಡೆಯುವ ಮೆರವಣಿಗೆಯಲ್ಲಿ ಪಾಲ್ಗೊಳ್ಳುವಾಗ ದಾರಿಯುದ್ದಕ್ಕೂ ಜಪಸರ ಹೇಳುವ ಪದ್ಧತಿ ಇದೆ.

**5.2.2 ಸಂತಮರಿಯ ಹಬ್ಬ** ಮಾತೃದೇವತೆಯ ಕಲ್ಪನೆ ಹಿಂದೂಗಳಲ್ಲಿರುವಂತೆ ಬುಡಕಟ್ಟು ಕ್ರೈಸ್ತರಲ್ಲಿಯೂ ಇದೆ (ವಿಲಿಯಂ/ಮಾಡ್ತ: 1990:87) ಹಿಂದೂಗಳು ಮಾತೃದೇವತೆಯ ಪೂಜೆಗೆ, ಆರಾಧನೆಗೆ ಪ್ರಾಶಸ್ತ್ಯ ಕೊಡುತ್ತಾರೆ. ಮಾರಮ್ಮನಿಗೆ ಕೋಣಗಳ ಬಲಿಕೊಡುವುದು ಇಂದಿಗೂ ಮೈಸೂರು ಜಿಲ್ಲೆಯ ಕೆಲವೆಡೆಗಳಲ್ಲಿ ಕಂಡುಬರುತ್ತದೆ. ಆದರೆ ಕ್ರೈಸ್ತರ ಮಾತೃದೇವತೆಗೆ ಈ ಬಗೆಯ ಆರಾಧನೆ ಇಲ್ಲ. ಆಕೆ ಸಂತರರಾಣಿ ಎಂಬ ಉನ್ನತಿಕೆಯನ್ನು ಪಡೆದಿದ್ದಾಳೆ.

'ಸ್ತ್ರೀ' ಕಲ್ಪನೆಯಲ್ಲಿ ಯಾರಿಗಾದರೂ ಮೊದಲು ನೆನಪಾಗುವುದು ತಾಯಿಯದು. ಏಕೆಂದರೆ ತಾಯಿಯ ಅನುಭವವೇ ಮಾನವನ ಮೊದಲ ಸ್ತ್ರೀ ಅನುಭವ. ಯೇಸುಕ್ರಿಸ್ತನು ಭೂಮಿಯಲ್ಲಿ ಅವತರಿಸಲು ತಮ್ಮನ್ನು ತಾಯಿಯಾಗಲು ಆರಿಸಿಕೊಂಡ ಸ್ತ್ರೀ "ಮಾತೆ ಮರಿಯಮ್ಮ". ಈಕೆ ಕ್ರೈಸ್ತರ ಜೀವನಕ್ಕೆ ಆದರ್ಶ ಮಹಿಳೆಯಾಗಿದ್ದಾಳೆ.

5.2.3 **ಕಾರ್ಕಳದ ಸಂತ ಲಾರೆನ್ಸ್‌ರ ಹಬ್ಬ** ಇತರ ಕ್ರೈಸ್ತರಂತೆ ಕೊರಗ ಕ್ರೈಸ್ತರು ಕೂಡ ತಮ್ಮದೇ ಆದಂತಹ ಸಂತರನ್ನು ಗೌರವಿಸುತ್ತಾರೆ. ಅತ್ತೂರಿನ ಸಂತ ಲಾರೆನ್ಸ್‌ರ ಪುಣ್ಯಕ್ಷೇತ್ರವು ಸರಿ ಸುಮಾರು ೨೦೦ ವರ್ಷಗಳಿಂದ ಪ್ರಸಿದ್ದಿಗೆ ಬಂದಿದೆ. ಈ ಪುಣ್ಯ ಕ್ಷೇತ್ರದ ಮಹೋತ್ಸವವನ್ನು ಪ್ರತಿ ವರ್ಷ ಜನವರಿ ತಿಂಗಳ ಕೊನೆಯ ವಾರದಲ್ಲಿ ಆಚರಿಸುತ್ತಾರೆ. ಕೊರಗ ಕ್ರೈಸ್ತರು ಈ ಸಂತರ ವಾರ್ಷಿಕ ಮಹೋತ್ಸವದಲ್ಲಿ ಕುಟುಂಬ ಸಮೇತರಾಗಿ ಆಗಮಿಸಿ ತಮ್ಮ ಹರಕೆಯನ್ನು ತೀರಿಸುತ್ತಾರೆ. ಸಂತ ಲಾರೆನ್ಸರ ಮಹೋತ್ಸವದ ಮುರು ದಿನಗಳಲ್ಲಿ ಜಾತಿ, ಮತ, ಭೇದವಿಲ್ಲದೆ ತಂಡೋಪತಂಡವಾಗಿ ಇಲ್ಲಿಗೆ ಬರುವ ಭಕ್ತಾದಿಗಳ ಸಮೂಹವೇ ಇದಕ್ಕೆ ಕೈಗನ್ನಡಿ. ವಿವಿಧ ಮತ - ಪಂಥಗಳ ನಡುವೆ ಸೌಹರ್ದತೆಯನ್ನು ಬೆಳೆಸುವಲ್ಲಿ ಈ ಪುಣ್ಯಕ್ಷೇತ್ರದ ಪಾತ್ರವು ಹಿರಿದಾದುದು.

ಹುತಾತ್ಮ ಸಂತ ಲಾರೆನ್ಸರ ಜೀವನ ಚರಿತ್ರೆ ಸ್ವಾರಸ್ಯಕರವಾದುದು. ಅವರ ದೈವಭಕ್ತಿ , ನಂಬಿಕೆ, ಬಡವರ ಮೇಲಿನ ಪ್ರೀತಿ, ಅನುಕಂಪ ಅಪಾರವಾದುದು. ಅಷ್ಟೇ ಅಲ್ಲದೆ ಈಗಲೂ ಅವರ ಬಿನ್ನಹಗಳ ಮೂಲಕ ನಂಬಿಗಸ್ಥರಿಗೆ ದೊರಕುವ ಉಪಕಾರಗಳು ಈ ಕ್ಷೇತ್ರದ ಪ್ರಗತಿಗೆ ಮೂಲಕಾರಣಗಳಾಗಿವೆ. ತನ್ನ ಯುವ ಪ್ರಾಯದಲ್ಲೇ ದೀನ ದಲಿತರ ಸೇವೆಗಾಗಿ, ದೈವ ನಂಬಿಕೆಗಾಗಿ ತನ್ನ ಪ್ರಾನವನ್ನೇ ಅರ್ಪಿಸಿದ ಅವರು ಜನ ಸಾಮಾನ್ಯರಲ್ಲಿಯೂ ಈ ನಂಬಿಕೆಯನ್ನು ಉರ್ಜಿತಗೊಳಿಸುವು ಉದ್ದೇಶದಿಂದ

ವರ್ಷಂಪ್ರತಿ ನಡೆಯುವ ಮಹೋತ್ಸವದ ಸಂದರ್ಭದಲ್ಲಿ ಕೊರಗ ಕ್ರೈಸ್ತರು ಯಾತ್ರಾರ್ಥಿಗಳಾಗಿ ಆಗಮಿಸಿ ಇವರ ಮೂಲಕ ದೇವರ ಕೃಪಾಶೀರ್ವಾದಗಳನ್ನು ಪಡೆದುಕೊಳ್ಳುತ್ತಾರೆ.

5.3 **ಜಾತ್ರೆಗಳು ಮತ್ತು ತೇರು** ಪ್ರತಿಯೊಬ್ಬ ಕ್ರೈಸ್ತನೂ ಆಚರಿಸುವ ಕ್ರಿಸ್ಮಸ್ ಮತ್ತು ಈಸ್ಟರ್ ಹಬ್ಬಗಳಲ್ಲದೆ ಆಯಾ ಊರಿಗೇ ಸೀಮಿತವಾಗಿರುವ ಹಬ್ಬಗಳೂ ಇವೆ. ಆಯಾ ಊರಿನ ಚರ್ಚಿಗೆ ಇಟ್ಟಿರುವ ಸಂತರ ಹೆಸರಿನಲ್ಲಿ ಆಚರಿಸುವ ಹಬ್ಬಗಳಲ್ಲಿ ಜಾತ್ರೆ ಕೂಡ ಇರುತ್ತದೆ. ವರ್ಷಕ್ಕೊಮ್ಮೆ ನಡೆಯುವ ಈ ಜಾತ್ರೆಗಳಿಗೆ ಅಕ್ಕಪಕ್ಕದ ಊರುಗಳಿಂದ ಜನರು ನೆರೆಯುತ್ತಾರೆ. ಮಾತ್ರವಲ್ಲ ಸಂತರ ಪವಾಡಗಳಿಂದ ಫಲಾನುಭವಿಗಳಾದವರು ದೂರದೂರದ ಊರುಗಳಿಂದ ಬಂದು ಸಂತರ ಮಹಿಮೆಯನ್ನು ಕೊಂಡಾಡಲು ಒಂದುಗೂಡುತ್ತಾರೆ. ಕರ್ನಾಟಕದ ಒಂದೊಂದು ಕ್ರೈಸ್ತ ಚರ್ಚುಗಳಲ್ಲಿ ಒಂದೊಂದು ಹಬ್ಬವನ್ನು ಆಚರಿಸುವುದು ಗಮನಾರ್ಹ.

"ಜಾತ್ರೆಗೂ ಹಬ್ಬಕ್ಕೂ ನಿಕಟವಾದ ಸಂಬಂಧವಿದೆ. ಹಾಗೆ ನೋಡಿದರೆ ನಾವು ಎಷ್ಟೋ ವೇಳೆ ಅವರೆಡರ ನಡುವಿನ ಭೇದವನ್ನು ಗುರುತಿಸುವೆದೇ ಇಲ್ಲ. ಅನೇಕರ ದೃಷ್ಟಿಯಲ್ಲಿ ಜಾತ್ರೆಯೂ ಒಂದು ಹಬ್ಬ" (ಎಚ್.ವಿ. ನಾಗೇಶ್:1988:71)

ಈ ಹೇಳಿಕೆಯಂತೆ ಕ್ರೈಸ್ತರಲ್ಲಿ ಪ್ರತ್ಯೇಕವಾದ ಜಾತ್ರೆಯೆಂಬುದಿಲ್ಲ. ಊರಿನ ಹಬ್ಬದಂದೇ ಜಾತ್ರೆ ಕೂಡುತ್ತದೆ. ಹಬ್ಬವು ಮನೆಯೊಳಗೆ ಮನೆಯವರೇ ತಮ್ಮ ಬಳಗದವರೊಡನೆ ಆಚರಿಸುವ ಸಂಭ್ರಮದ ದಿನವಾಗಿದ್ದರೆ, ಜಾತ್ರೆ ಇತರರನ್ನೂ ತಮ್ಮೊಡನೆ ಪಾಲ್ಗೊಳ್ಳಲು ಆಹ್ವಾನಿಸುವ ಹಬ್ಬವಾಗಿದೆ. ಬರಗಾಲದಲ್ಲಿ ಜಾತ್ರೆ ನಡೆಸಲು ಸಾಧ್ಯವಿಲ್ಲ. ಜಾತ್ರೆ ನಡೆಯಬೇಕಾದರೆ ಜನರಲ್ಲಿ ಆರ್ಥಿಕ ಮುಗ್ಗಟ್ಟಿರಬಾರದು. ಹಾಗೆಂದು ತಮ್ಮೂರಿನ ಜಾತ್ರೆಯನ್ನು ಯಾರೂ ನಿಲ್ಲಿಸುವುದಿಲ್ಲ. ಜಾತ್ರೆ ನಡೆಯುವ ದಿನವನ್ನು ಸೂಚಿಸುವ ಮುನ್ನ ಕೃಷಿ ಪ್ರಧಾನವಾದ ಹಳ್ಳಿಗಳಲ್ಲಿ ಕೈಗೆ ದುಡ್ಡು ದಕ್ಕುವ ಕಾಲದಲ್ಲಿ ಜಾತ್ರೆ ನಡೆಸಬೇಕಾದ ದಿನಾಂಕವನ್ನು ನಿಗದಿಪಡಿಸಿ, ಭಾನುವಾರದ ಪೂಜೆಯಲ್ಲಿ ಜನರಿಗೆ ತಿಳಿಸುತ್ತಾರೆ. ಎಚ್.ಡಿ. ಕೋಟೆ ತಾಲ್ಲೂಕಿನ ನಾಗನಹಳ್ಳಿಯಲ್ಲಿ ಅಕ್ಟೋಬರ್ ತಿಂಗಳಿನಲ್ಲಿ ಜಾತ್ರೆಯನ್ನು ನಡೆಸುತ್ತಾರೆ. ಹೊಗೆಸೊಪ್ಪಿನ ಬೆಳೆಯಿಂದ ರೊಕ್ಕ ಕೈಗೂಡುವ ಸಮಯದಲ್ಲಿ ಜನರಿಗೆ ಸ್ವಲ್ಪ ಬಿಡುವಿರುವ ಸಂದರ್ಭದಲ್ಲಿ ಜಾತ್ರೆಯನ್ನು ಆಚರಿಸುತ್ತಾರೆ. ಆದರೆ ಜಾತ್ರೆ ನಡೆಯುವುದನ್ನು ಯಾವುದೇ ಕಾರಣದಿಂದಲೂ ನಿಲ್ಲಿಸುವುದಿಲ್ಲ. ಅದು ಆ ಊರಿನ ಪ್ರತಿಷ್ಠೆಯ ಪ್ರಶ್ನೆಯಾಗಿರುತ್ತದೆ. ಮಾತ್ರವಲ್ಲ ಜಾತ್ರೆ ನಿಲ್ಲಿಸುವುದರಿಂದ ಕಷ್ಟಕಾರ್ಪಣ್ಯ ಹೆಚ್ಚುತ್ತವೆ. ನಾಡಿಗೆ ಬರಗಾಲ ಬರುತ್ತದೆ ಎಂಬ ಭಯವಿದೆ.[6] ಆದರೆ ಡೋರ್ನಹಳ್ಳಿಯ ಜಾತ್ರೆಯನ್ನು ನಿಗದಿತ ದಿನಾಂಕದಂದೇ ಅಂದರೆ ಜೂನ್ 13ನೇ ತಾರೀಖಿನಂದೇ ನಡೆಸುತ್ತಾರೆ. ಇದಕ್ಕೆ ಡೋರ್ನಹಳ್ಳಿಯ ಆರ್ಥಿಕ ಸ್ಥಿತಿಯೇ ಕಾರಣ.

ಕರ್ನಾಟಕದ ಕ್ರೈಸ್ತರಲ್ಲಿ ಸಾಮಾಜಿಕ ವಿಂಗಡಣೆಯಿಂದಾಗಿ ಉಪಜಾತಿಗಳು ಮತ್ತು ಒಳಪಂಗಡಗಳಿವೆಯಾದರೂ ಧಾರ್ಮಿಕ ವಿಧಿ, ಆಚರಣೆಗಳಲ್ಲಿ ಪಾಲ್ಗೊಳ್ಳುವಾಗ ಅಥವಾ ಸಾಂಸ್ಕೃತಿಕ ಚಟುವಟಿಗಳಲ್ಲಿ ಪಾಲ್ಗೊಳ್ಳುವಾಗ ಆ ಭೇದ–ಭಾವ ಕಂಡು ಬರುವುದಿಲ್ಲ.ಹಿಂದೂ ಧರ್ಮದ ಕೆಲವು ಜಾತ್ರೆಗಳಲ್ಲಿ ಎಲ್ಲಾ ಜಾತಿಯ ಜನರೂ ಪಾಲೊಳ್ಳುವುದಿಲ್ಲ. ಉದಾಹರಣೆಗೆ: "ಮಲೆ ಮಾದೇಶ್ವರ ಮತ್ತು ಮಂಟೆಸ್ವಾಮಿ ಜಾತ್ರೆಗಳಲ್ಲಿ ಮೇಲ್ವರ್ಗದ ಜಾತಿಯ ಜನರು ಭಾಗವಹಿಸುವುದಿಲ್ಲ" (ಹಿರಿಯಣ್ಣ: 1983–132). ಆದರೆ ಕ್ರೈಸ್ತರಲ್ಲಿ ಇಂಥ ಭಿನ್ನತೆಗಳು ಕಂಡುಬರುವುದಿಲ್ಲ. ಜಾತ್ರೆಯ ದಿನ ನಡೆಯುವ ಕೋಲಾಟ, ಕುಣಿತ, ನಾಟಕಗಳನ್ನು, ಎಲ್ಲರೂ ಒಟ್ಟಿಗೆ ಸೇರಿ ನಡೆಸಿಕೊಡುತ್ತಾರೆ. ತೇರಿನ ಉತ್ಸವದಲ್ಲೂ ಸಕ್ರಿಯವಾಗಿ ಪಾಲ್ಗೊಳ್ಳುವರು.

ಸಂತ ಫಿಲೋಮಿನಾಳ ಸ್ಮರಣಾರ್ಥವಾಗಿ ಮೈಸೂರು ನಗರದಲ್ಲಿ ನಿರ್ಮಾಣವಾಗಿರುವ ಗಗನಚುಂಬಿಯಾದ ಯಮಳಗೋಪುರಗಳಿಂದ ಭೂಷಿತವಾದ ಪ್ರಧಾನ ಚರ್ಚು (Cathedral) ಗಾಥಿಕ್ ಶೈಲಿಯಲ್ಲಿದ್ದು ಜಗತ್ಪ್ರಸಿದ್ಧವಾಗಿದೆ. ಚರ್ಚಿನ ಒಳಗೆ ಮಧ್ಯಭಾಗದಲ್ಲಿ ನಿರ್ಮಿಸಲಾಗಿರುವ ಸುರಂಗವು ಇಲ್ಲಿನ ವಿಶೇಷ ಆಕರ್ಷಣೆಯಾಗಿದೆ. ಮೈಸೂರಿನ ಜನರು ಇದನ್ನು 'ದೊಡ್ಡ ಚರ್ಚು' ಎಂದೇ ಕರೆಯುವುದನ್ನು ರೂಢಿಸಿಕೊಂಡಿದ್ದಾರೆ. ಸಂತ ಫಿಲೋಮಿನ ಗ್ರೀಸ್ ದೇಶಕ್ಕೆ ಸೇರಿದವಳು. ಆಕೆಯ ಬಗೆಗೆ ಪ್ರಚಲಿತವಿರುವ ಒಂದು ಐತಿಹ್ಯ ಹೀಗಿದೆ:

19ನೇ ಶತಮಾನದಲ್ಲಿ ಪವಾಡಗಳನ್ನು ಮೆರೆದ ಸಂತ ಫಿಲೋಮಿನ ಗ್ರೀಸ್ ದೇಶಕ್ಕೆ ಸೇರಿದ ಒಂದು ಚಿಕ್ಕ ಪ್ರಾಂತ್ಯದ ರಾಜರಾಣಿಯರ 'ಏಕೈಕ ಪುತ್ರಿ' ಆಕೆ ಅಪ್ರತಿಮ ಸುಂದರಿಯಾಗಿದ್ದಳು. ಆಕೆಗೆ ಹದಿಮೂರು ವರ್ಷ ಪ್ರಾಪ್ತವಾದಾಗ ರೋಮಾಪುರಿಯ ಚಕ್ರವರ್ತಿಯೊಬ್ಬ ಅವಳ ದಿವ್ಯ ಸೌಂದರ್ಯಕ್ಕೆ ಮರುಳಾಗಿ ವಿವಾಹವಾಗಲು ಬಯಸಿದನು. ತಂದೆತಾಯಿಗಳಿಗೂ ಇದು ಹೆಮ್ಮೆಯ ವಿಷಯವಾಗಿತ್ತು. ಕಾರಣ ಆತ ಇಡೀ ರೋಮ್ ಸಾಮ್ರಾಜ್ಯಕ್ಕೆ ಚಕ್ರವರ್ತಿಯಾಗಿದ್ದ. ಆದರೆ ಫಿಲೋಮಿನಳ ಒಲವೆಲ್ಲಾ ಅಧ್ಯಾತ್ಮದೆಡೆಗೇ ಇದ್ದುದರಿಂದ ಅವಳು ಆತನನ್ನು ವಿವಾಹವಾಗಲು ಒಪ್ಪಲಿಲ್ಲ. ತನ್ನ ಆರಾಧ್ಯದೈವ ಯೇಸು ಕ್ರಿಸ್ತನಿಗೆ ತನ್ನನ್ನು ಅರ್ಪಿಸಿಕೊಂಡಿದ್ದಳು. ದೈಹಿಕ ಆಕರ್ಷಣೆಯಿಂದಾಗಿ ಹುಚ್ಚನಂತಾಗಿದ್ದ ಚಕ್ರವರ್ತಿಯ ಇಚ್ಛೆಗೆ ದಾಸಿಯಾಗುವ ಮನಸ್ಸು ಆಕೆಗಿರಲಿಲ್ಲ ಆವಳಿಗಾಗಿ ಹಂಬಲಿಸುತ್ತಿದ್ದ ಚಕ್ರವರ್ತಿ ಅವಳನ್ನು ಸೆರೆಹಿಡಿದು ಸಂಕೋಲೆಗಳಿಂದ ಬಂಧಿಸಿ, ನಲವತ್ತುದಿನ ಸೆರೆಮನೆಯಲ್ಲಿಟ್ಟನು. ಸಲಾಕೆಯಿಂದ ಹೊಡೆಸಿದನು. ಆದಾವುದೂ ಅವಳಿಗೆ ಹಾನಿಮಾಡಲಿಲ್ಲ. ಫಿಲೋಮಿನ ಅಚಲಳಾಗಿದ್ದಳು. ಲೌಕಿಕ ಆಸೆಗಳು ಆಕೆಯ ದೃಷ್ಟಿಯಲ್ಲಿ ಕ್ಷುಲ್ಲಕವಾಗಿದ್ದವು. ಆಕೆಯ ಕೊರಳಿಗೆ ಘನವಾದ ಒಂದು ಲಂಗುರನ್ನು ಕಟ್ಟಿ ಟೈಬರ್ ನದಿಯಲ್ಲಿ ಎಸೆಯುವಂತೆ ಆಜ್ಞೆಮಾಡಿದನು. 'ದೈವಕೃಪೆ'ಯಿಂದ ಅಲ್ಲಿಂದಲೂ ಪಾರಾಗಿ ಬಂದಳು. ಕಾಮುಕನಾದ ಕ್ರೂರಚಕ್ರಚರ್ತಿ ಅವಳನ್ನು ಕರೆತಂದು ಅವಳ ರುಂಡವನ್ನು ಚೆಂಡಾಡಿದನು (ಲಿಸ್ಬನ್: 1947:75-80). ಇದನ್ನೇ ಹೋಲುವ ಕಥೆಗಳು, ಐತಿಹ್ಯಗಳು ಇತರ ಧರ್ಮೀಯರಲ್ಲಿಯೂ ಕಂಡು ಬರುತ್ತವೆ. ಹನ್ನೆರಡನೆಯ ಶತಮಾನದ ಅನುಭಾವಿ ಅಕ್ಕಮಹಾದೇವಿಯು ಶಿವನನ್ನೇ ತನ್ನ ಪತಿಯನ್ನಾಗಿ ಸ್ವೀಕರಿಸಿದುದ್ದನ್ನು ಇಲ್ಲಿ ನೆನೆಯಬಹುದು.
( Page No. 211)

ಈ ಇಬ್ಬರು ಅನುಭಾವಿಗಳ ನಡುವೆ ಆರೇಳು ಶತಮಾನಗಳ ಅಂತರವಿದ್ದರೂ ಇಬ್ಬರೂ ಸಂಸಾರ ಸುಖಕ್ಕೆ ವಿಮುಖರಾಗಿ ಭಗವಂತವನ್ನೇ ಸೇರಬಯಸಿದವರಾಗಿದ್ದಾರೆ. ಇಬ್ಬರ ತಂದೆ ತಾಯಿಗಳೂ ಅವರ ವೈವಾಹಿಕ ಜೀವನಕ್ಕೆ ಸಮ್ಮತಿಸಿದ್ದರು. ಸಂತ ಫಿಲೋಮಿನ ತಂದೆತಾಯಿಯ ಮಾತುಗಳನ್ನು ಮೀರಿ ನಾನಾ ವಿಧವಾದ ದೈಹಿಕ ಹಿಂಸೆಗಳನ್ನು ಅನುಭವಿಸಿದಳು. ಮಹಾದೇವಿ ತಂದೆತಾಯಿಯ ಮಾತನ್ನು ಒಪ್ಪಿ, ಷರತ್ತಿನ ಮೇಲೆ ಮದುವೆಯಾಗಿ, ಷರತ್ತಿನಲ್ಲಿ ಗಂಡನನ್ನು ಸೋಲಿಸಿ, ತಾನು ಮುಕ್ತಳಾದಳು. ಸಂತ ಫಿಲೋಮಿನ ಯೇಸುವಿಗಾಗಿ ಶಿರಚ್ಛೇದನ ಶಿಕ್ಷೆಗೊಳಗಾಗಿ ರಕ್ತ ಸಾಕ್ಷಿಯಾದಳು. ಅಕ್ಕ ಮಹಾದೇವಿ ಸಮಾಜಕ್ಕೆ ಅನುಭವದ ನುಡಿಗಳನ್ನು ವಚನಗಳ ಮೂಲಕ ನೀಡುವುದರೊಂದಿಗೆ ನಿರ್ಮಲ ಸಮಾಜವನ್ನು ನಿರ್ಮಿಸಲು ಕರೆ ನೀಡಿದ್ದಾಳೆ.

ಸಂತ ಫಿಲೋಮಿನಳ ವಾರ್ಷಿಕ ಹಬ್ಬವನ್ನು ಆಗಸ್ಟ್ ತಿಂಗಳ 11ನೇ ತಾರೀಖಿನಂದು ಆಚರಿಸುವುದು ಇಲ್ಲಿನ ರೂಢಿ. ಹಬ್ಬದ ಮುನ್ನಾ ದಿನಗಳಂದು ಸಂತಳ ಹೆಸರಿನಲ್ಲಿ ಗೌರವ ಧ್ವಜವನ್ನು ಏರಿಸುವುದು ಪದ್ಧತಿ. ಈ ಒಂಭತ್ತು ದಿನಗಳನ್ನು 'ನೊವೇನಾ' (ವ್ರತ)

ದಿನಗಳೆಂದು ಹೇಳುತ್ತಾರೆ. ಪ್ರತಿದಿನ ಸಂಜೆ ಚರ್ಚಿನಲ್ಲಿ ವಿಶೇಷವಾದ ಪ್ರಾರ್ಥನಾಗೀತೆಗಳನ್ನು ಹಾಡುತ್ತಾ ಚರ್ಚಿನ ಸುತ್ತ ಸಂತಳ ಪ್ರತಿಮೆಯನ್ನು ಹೊತ್ತು ಮೆರವಣಿಗೆ ಮಾಡುವುದು ಸಂಪ್ರದಾಯ.

ಮೈಸೂರು ನಗರದ ಸಂತ ಫಿಲೋಮಿನಾ ಚರ್ಚಿನ ಉತ್ತರಭಾಗದಲ್ಲಿ ವೀರನಗೆರೆ ಎಂಬ ಬಡಾವಣೆ ಇದೆ. ಇಲ್ಲಿ ರಾಜಪರಿವಾರ ಅಥವಾ ನಾಯಕ ಸಮೂಹಕ್ಕೆ ಸೇರಿದ ಹಿಂದೂ ಕುಟುಂಬಗಳಿವೆ. ಇವರ ವೃತ್ತಿ ಹೂವು ಮಾರುವುದು. ಸಂತ ಫಿಲೋಮಿನಳ ಮೇಲೆ ಅಗಾಧ ಭಕ್ತಿ ಇರುವ ಈ ಜನ ಎಲ್ಲಾ ಒಂಬತ್ತು ದಿನಗಳೂ ತಪ್ಪದೆ ಹೂವುಗಳನ್ನು ತಂದು ಅರ್ಪಿಸಿ, ತಮ್ಮ ಕಷ್ಟಗಳನ್ನು ದೂರೀಕರಿಸುವಂತೆ ಪ್ರಾರ್ಥನೆ ಸಲ್ಲಿಸುತ್ತಾರೆ. ಸಂತ ಫಿಲೋಮಿನಾಳ ಹಬ್ಬದ ಸಂಭ್ರಮ ಕ್ರಮೇಣ ಕುಗ್ಗಿರುವುದನ್ನು ಕುರಿತು ಅನೇಕರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

"ಮೂರು ದಶಕಗಳ ಹಿಂದೆ ಈ ಹಬ್ಬವು ಅತ್ಯಂತ ವೈಭವಪೂರ್ಣವಾಗಿ ಜರುಗಿ ಅಪಾರ ಜನರು ಜಾತ್ರೆಯಲ್ಲಿ ಕೂಡುತ್ತಿದ್ದರು. ಚರ್ಚಿನ ಆವರಣವು ತಳಿರು–ತೋರಣಗಳಿಂದ ಸಿಂಗರಿಸಲ್ಪಟ್ಟು ಅಂಗಡಿ ಮುಂಗಟ್ಟುಗಳು ಕಾಣಿಸಿಕೊಳ್ಳುತ್ತಿದ್ದವು. ಹೊರಗಿನ ಊರುಗಳಿಂದ ಆಗಮಿಸುತ್ತಿದ್ದ ಜನರು ಮೂರುದಿನ ಮುಂಚಿತವಾಗಿಯೇ ಬಂದು ನೊವೇನಾ ಪ್ರಾರ್ಥನೆಯಲ್ಲಿ ಭಾಗವಹಿಸುತ್ತಿದ್ದರು. ಚರ್ಚಿನ ಆವರಣದಲ್ಲಿ ಅಲ್ಲಲ್ಲಿ ಕಲ್ಲುಗಳನ್ನಿಟ್ಟು ಒಲೆಯೇರಿಸಿ ಅಡುಗೆ–ಊಟ ಪೂರೈಸಿಕೊಂಡು ಮೈದಾನದಲ್ಲಿಯೇ ಮಲಗುತ್ತಿದ್ದರು. ಆಗ ಮೈಸೂರಿನ ಒಡೆಯರಾಗಿದ್ದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಅವರ ಪತ್ನಿ ಪ್ರತಿವರ್ಷ ಹಬ್ಬದದಿನ ಸಂತ ಫಿಲೋಮಿನಳ ಪ್ರತಿಮೆಗೆ ಉಡಿಸಲು ಬೆಲೆಬಾಳುವ ಸೀರೆಯನ್ನು ಕಳುಹಿಸಿಕೊಡುತ್ತಿದ್ದರು[7] ಎಂದು ವಕ್ತೃಗಳು ಹೇಳುತ್ತಾರೆ. ಅದೇನೇ ಇರಲಿ, ಅಂತಹ ಜಾತ್ರೆಯ ಸಂಭಮ್ರವೆಲ್ಲಾ ಕಣ್ಮರೆಯಾಗಿ ಇಂದು ಉತ್ಸವ ಮಾತ್ರ ಉಳಿದುಕೊಂಡಿರುವುದು ವಾಸ್ತವ.

ಹಬ್ಬದ ದಿನ ಸಂಜೆ ಆರುಗಂಟೆಯ ಪೂಜೆಯ ಅನಂತರ ಬಡಾವಣೆಯ ಮುಖ್ಯ ಬೀದಿಗಳಲ್ಲಿ ಉತ್ಸವಮೂರ್ತಿಯ ಮೆರವಣಿಗೆ ಇರುತ್ತದೆ. ಇದಕ್ಕಾಗಿ ವಿಚಾರಣೆಯ (Parish) ಯುವಕರೆಲ್ಲಾ ಸೇರಿ ನಾಲ್ಕು ಚಕ್ರದ ವಾಹನದ ಮೇಲೆ ವಿದ್ಯುದ್ದೀಪಗಳಿಂದಲೂ, ಹೂವುಗಳಿಂದಲೂ ಅಲಂಕೃತವಾದ ತೇರನ್ನು ಜೋಡಿಸುತ್ತಾರೆ. ಸಂತ ಫಿಲೋಮಿನಳ ಸುಂದರ ಪ್ರತಿಮೆಯನ್ನು ತೇರಿನಲ್ಲಿಟ್ಟು ತೇರಿನ ಇಬ್ಬದಿಗಳಲ್ಲಿ ಜನರು ಶಿಸ್ತಿನಿಂದ ಸಾಲುಗಟ್ಟುತ್ತಾರೆ. ಎರಡು ಸಾಲಿನ ನಡುವೆ ಧರ್ಮಾಧ್ಯಕ್ಷರೂ, ಗುರುಗಳೂ ಮೆರವಣಿಗೆಯಲ್ಲಿ ಪಾಲ್ಗೊಳ್ಳುವರು ಪ್ರಾರ್ಥನೆ& ಹಾಡುಗಳನ್ನು ನಿರ್ವಹಿಸುವುದರಲ್ಲಿ ಜನರು ನಿಸ್ಸಂಕೋಚದಿಂದ ಪಾಲ್ಗೊಂಡು ತಮ್ಮ ಭಕ್ತಿಯನ್ನು ನಿವೇದಿಸಿ ಕೊಳ್ಳುತ್ತಾರೆ. ತೇರಿನ ಮುಂದೆ ತಾಳಮೇಳಗಳೂ (Palace Band) ಇರುತ್ತವೆ. ಮೆರವಣಿಗೆ ಪೂರೈಸಿ ಉತ್ಸವಮೂರ್ತಿ ಚರ್ಚನ್ನು ತಲುಪುವಾಗ ದೊಡ್ಡ ಗಂಟೆಗಳನ್ನು ಬಾರಿಸಲಾಗುತ್ತದೆ ಉತ್ಸವಮೂರ್ತಿಯ ಮುಂದೆ ಜನರೆಲ್ಲ ಒಟ್ಟುಗೂಡಿ ಪ್ರಾರ್ಥನೆಯ ಅಂತಿಮ ಚರಣವನ್ನು ಹೇಳಿದ ಮೇಲೆ ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ತೆರಳುವರು.

ಸಂತಳ ಹೆಸರಿನಲ್ಲಿ ತಿರುದಾರವನ್ನು[8] ಕ್ರೈಸ್ತರು ಧರಿಸುವುದು ವಿಶೇಷ (ರೆನೆಫೂಗಾ: 1945:37) ತಮ್ಮ ಕೋರಿಕೆಗಳು ಇದರಿಂದ ನೆರವೇರುತ್ತವೆ ಎಂಬ ನಂಬಿಕೆಯಿದೆ. ಸಂತ ಫಿಲೋಮಿನಳ ಹೆಸರಿನಲ್ಲಿ ಪವಿತ್ರೀಕರಿಸಿದ ಎಣ್ಣೆಯನ್ನು ಹಚ್ಚಿಕೊಳ್ಳುವುದರಿಂದ ಕಾಯಿಲೆಗಳು ಗುಣವಾಗುತ್ತವೆ, ಎಂಬ ನಂಬಿಕೆಯೂ ಇದೆ.

ಮಕ್ಕಳಿಲ್ಲದವರು ಸಂತ ಫಿಲೋಮಿನಳಿಗೆ ಹರಸಿಕೊಂಡು ಹುಟ್ಟುವ ಮಗುವಿಗೆ ಆಕೆಯ ಹೆಸರನ್ನಿಟ್ಟು ಸಂತೋಷ ಪಡುತ್ತಾರೆ. ಅನೇಕ ರೋಗರುಜಿನಗಳಿಗೆ ತುತ್ತಾದಾಗ ವಾಸಿಯಾಗಲೆಂದೂ, ಕಷ್ಟ-ಸಂಕಟಗಳು ಪರಿಹಾರವಾಗಲೆಂದೂ ಹರಕೆ ಹೊತ್ತುಕೊಳ್ಳುತ್ತಾರೆ. ಹಬ್ಬದ ದಿನ ಮೈಸೂರು ನಗರದಲ್ಲಿರುವ ಸಂತ ಫಿಲೋಮಿನಾ ಚರ್ಚಿಗೆ ಬಂದು ಹರಕೆ ತೀರಿಸುತ್ತಾರೆ.

ಮಾರ್ಟಳ್ಳಿ ಇಲ್ಲಿ ಲೂರ್ದುಮಾತೆಗೆ ಅರ್ಪಿತವಾಗಿರುವ ಚರ್ಚು ಇರುವುದರಿಂದ ಲೂರ್ದುಮಾತೆಯ ಹಬ್ಬವನ್ನೂ ಆಚರಿಸುತ್ತಾರೆ. ಹಬ್ಬಕ್ಕೆ ಇಲ್ಲಿನ ಸುತ್ತಮುತ್ತಲ ಗ್ರಾಮಗಳಾದ ಸಂದನಪಾಳ್ಯ, ವಡ್ಡರದೊಡ್ಡಿ, ಬಿದಿರಳ್ಳಿ, ಕೌದಳ್ಳಿ ಮುಂತಾದ ಕಡೆಗಳಿಂದ ಜನರು ನೆರೆಯುವುದರಿಂದ ಇದನ್ನು ಜಾತ್ರೆಯೆಂದೇ ಹೇಳಬಹುದು (ಇಲ್ಲಿನ ಕ್ರೈಸ್ತರ ಭಾಷೆ ತಮಿಳು). ಹಬ್ಬದ ಹಿಂದಿನ ದಿನವೇ ಮನೆಗಳು ನೆಂಟರಿಷ್ಟರಿಂದ ತುಂಬಿರುತ್ತದೆ. ಅಂದು ಬೆಳಿಗ್ಗೆ ಚರ್ಚಿನ ಆವರಣದಲ್ಲಿ ಸಣ್ಣ-ಸಣ್ಣ ಅಂಗಡಿ ಮುಂಗಟ್ಟುಗಳು ಎದ್ದಿರುತ್ತವೆ. ಬಳೆ, ಟೇಪು, ಮಣಿಸರಗಳ ಅಂಗಡಿ, ಜಪಸರ, ದೇವರ ಚಿತ್ರಪಟಗಳು, ಪ್ರತಿಮೆಗಳನ್ನು ಮಾರುವ ಅಂಗಡಿಗಳು, ಕಡಲೇಪುರಿ, ಮಿಠಾಯಿಗಳು, ಕರಿದ ತಿಂಡಿ ತಿನಿಸುಗಳ ಅಂಗಡಿಗಳು, ಮಕ್ಕಳ ಆಟಿಕೆಗಳು, ಹಣ್ಣುಗಳ ಅಂಗಡಿಗಳು ತಾತ್ಕಾಲಿಕವಾಗಿ ಸಜ್ಜುಗೊಂಡಿರುತ್ತವೆ. ಚರ್ಚಿನ ಆವರಣದ ಹೊರಗೆ ಆಡು, ಹಂದಿ, ಕೋಳಿ ಮಾಂಸಗಳ ಮಾರಾಟ ನಡೆಯುತ್ತಿರುತ್ತವೆ. ಅದೃಷ್ಟದ ಆಟಗಳು (Lucky Dip) ಮನಸೆಳೆಯುವಂತಿರುತ್ತವೆ. ಈ ಜಾತ್ರೆಯು ನಾವು ಇಂದು ನೋಡುವ ಜಾತ್ರೆಗಳಂತೆ ಅಂಗಡಿ ಮುಂಗಟ್ಟುಗಳುನ್ನು ಆದರೆ ಇಲ್ಲಿ ಕ್ರೈಸ್ತರಿಗೆ ಆಕರ್ಷಕವಾದ ಛಾಯಚಿತ್ರ ಸಾಮಾಗ್ರಿಗಳು ಹೆಚ್ಚು ಮಾರಟಮಾಡಲಾಗುತ್ತದೆ.

ಇಲ್ಲಿ ನೆಲಸಿರುವ ತಮಿಳು ಕ್ರೈಸ್ತರು ಧಾರ್ಮಿಕ ವಿಧಿಗಳಲ್ಲೂ ತಮ್ಮದೇ ಆದ ಸಂಪ್ರದಾಯಗಳನ್ನು ಉಳಿಸಿಕೊಂಡಿದ್ದಾರೆ. ಮೈಸೂರಿನ ಇತರ ಚರ್ಚುಗಳಲ್ಲಿ ಇವು ಕಂಡುಬರುವುದಿಲ್ಲ. ಉದಾಹರಣೆಗೆ ಗುರುಗಳನ್ನು ಪೂಜೆಗೆ ಸ್ವಾಗತಿಸುವ ಬಗೆ ಚರ್ಚಿನ ಆವರಣದೊಳಗಿರುವ ಗುರುಗಳ ಮನೆಯ ಮುಂದೆ ಗುರುಗಳು ಪೂಜಾ ವಸ್ತ್ರಗಳನ್ನು ಧರಿಸಿ ನಿಂತಿರುತ್ತಾರೆ. ಜನರು ಅವರಿಗೆ ಆರತಿ ಬೆಳಗಿ, ಮಾಲಾರ್ಪಣೆ ಮಾಡಿ, ನಡೆಮಡಿ ಹಾಸಿ, ತಾಳಮೇಳಗಳೊಂದಿಗೆ ಅವರನ್ನು ಚರ್ಚಿಗೆ ಕರೆತರುತ್ತಾರೆ. ಅಕ್ಕಪಕ್ಕದ ಗ್ರಾಮಗಳಿಂದಲೂ ಗುರುಗಳು ಆಗಮಿಸಿರುತ್ತಾರೆ. ಎಲ್ಲರೂ ಒಟ್ಟುಗೂಡಿ ಪೂಜೆಯನ್ನರ್ಪಿಸುತ್ತಾರೆ. ಪೂಜಾ ವೇಳೆಯಲ್ಲಿ ಹಾಡಲು ನಗರದ ಚರ್ಚುಗಳಲ್ಲಿ ಪ್ರತ್ಯೇಕ ಗಾನವೃಂದವಿರುತ್ತದೆ. ಆದರೆ ಹಳ್ಳಿಗಳಲ್ಲಿ ಇದಕ್ಕೆ ಭಿನ್ನವಾಗಿ, ಪ್ರತಿಯೊಬ್ಬರೂ ಪೂಜೆಯಲ್ಲಿ ಹಾಡುತ್ತಾರೆ. ಪೂಜೆಯ ನಂತರ ಅಕ್ಕಪಕ್ಕದ ಗ್ರಾಮಗಳಿಂದ ಬಂದಿರುವ ನೆಂಟರಿಷ್ಟ ರನ್ನು ಮನೆಗೆ ಕರೆದೊಯ್ದು ಮಾಂಸದೂಟ ಬಡಿಸುತ್ತಾರೆ.ಇಲ್ಲಿ ಗಮನಿಸಬೇಕಾದ ಒಂದು ವಿಶೇಷವೆಂದರೆ, ಕ್ರೈಸ್ತರಲ್ಲಿ ಪಾದ್ರಿಗ ಳಿಗೆ ನಡೆನುಡಿ ಹಾಸುವ ಸಂಪ್ರದಾಯವಿರುವುದಿಲ್ಲ ಆದರೆ ಮೂಲತ: ಹಿಂದೂಗಳಾದ ಇಲ್ಲಿನ ಕ್ರೈಸ್ತರು ಜಾತ್ರೆಯ ಸಂದರ್ಭದಲ್ಲಿ ಪ್ರಾದಿಗಳಿಗೆ ನಡೆ ನುಡಿ ಹಾಸುವ ಸಂಪ್ರದಾಯವನ್ನು ರೂಢಿಸಿಕೊಂಡಿರುವುದು ಎರಡು ಧರ್ಮಗಳ ಸಮ್ಮಿಲನವಾಗಿರುವುದನ್ನು ಇಲ್ಲಿ ಕಾಣುತ್ತೇವೆ.

**5.3.1 ಹರಕೆಯ ತೇರು** ಸಂಜೆ ಐದು ಗಂಟೆಗೆ ಚರ್ಚಿನ ಆವರಣದಲ್ಲಿ ಹರಕೆಯ ತೇರು ಇರುತ್ತದೆ. ಹೂವಿನಿಂದ ಅಲಂಕರಿಸಿದ ತೇರನ್ನು ನಾಲ್ವರು ಹೊತ್ತುಕೊಂಡಿರುತ್ತಾರೆ. 'ದೇವಮಾತೆ ಮರಿಯಮ್ಮ'ನಿಗೆ ಜಪಸರ ಹೇಳುತ್ತಾ, ನಡುನಡುವೆ ಹಾಡುಗಳನ್ನು ಹಾಡುತ್ತಾ ಮೆರವಣಿಗೆಯಲ್ಲಿ ಸಾಗುವರು ಈ ತೇರಿನ ವಿಶೇಷವೆಂದರೆ ಜನರು ತಮ್ಮ ಕೋರಿಕೆಗಳ ಈಡೇರಿಕೆಗಾಗಿ ಅಥವಾ ಈಡೇರಿರುವ ಉದ್ದೇಶಗಳಿಗೆ ಕೃತಜ್ಞತೆಯನ್ನು ಅರ್ಪಿಸುವುದಕ್ಕಾಗಿ ಐದು ರೂಪಾಯಿಗಳನ್ನು ಚರ್ಚಿನ ಸದಸ್ಯರ ಕೈಗಿತ್ತು ಹೆಸರನ್ನೂ, ಉದ್ದೇಶಗಳನ್ನೂ ನೋಂದಾಯಿಸುತ್ತಾರೆ. ಚರ್ಚಿನ ಸುತ್ತ ಮೆರವಣಿಗೆಯ ಒಂದೊಂದು ಸುತ್ತಿನಲ್ಲೂ ನೋಂದಾಯಿತ ಭಕ್ತರ ಹೆಸರುಗಳನ್ನು ಹೇಳಿ, ಅವರ ಉದ್ದೇಶಗಳಿಗಾಗಿ ವಿಶೇಷ ಪ್ರಾರ್ಥನೆ ಸಲ್ಲಿಸುತ್ತಾರೆ. ಇದರಿಂದ ಚರ್ಚಿಗೆ ಕೊಂಚ ಆರ್ಥಿಕ ನೆರವೂ ದೊರಕಿದಂತಾಗುತ್ತದೆ. ಅಲ್ಲದೆ ಪ್ರಾರ್ಥನಾ ಅವಧಿ ಅಧಿಕವಾಗುತ್ತದೆ. ಜನರು ಹೆಚ್ಚು ಹೊತ್ತು ಪ್ರಾರ್ಥನೆಯಲ್ಲಿ ಭಾಗವಹಿಸಿದಂತಾಗುತ್ತದೆ. ಜನರ ಕೋರಿಕೆಗಳು ಹೆಚ್ಚಾದಷ್ಟೂ ಮೆರವಣಿಗೆಯ ಪ್ರದಕ್ಷಿಣೆ ಹೆಚ್ಚಾಗುತ್ತದೆ. ಊರಿನ ಜನರೆಲ್ಲಾ ಇದರಲ್ಲಿ ಭಾಗವಹಿಸುತ್ತಾರೆ. ಈ ವಿಶೇಷತೆ ಕರ್ನಾಟಕದ ಇನ್ನಾವ ಚರ್ಚುಗಳಲ್ಲೂ ಕಂಡು ಬರುವುದಿಲ್ಲ.ಇಲ್ಲಿಯೂ ಸಹ ಹಿಂದೂ ಧರ್ಮದ ಜಾತ್ರೆಯ ಅನುಕರಣೆಯನ್ನು ಗುರುತಿಸಲಾಗಿದೆ.

**5.3.2 ಉತ್ಸವ ಮೂರ್ತಿಯ ತೇರು** ರಾತ್ರಿ ಏಳೂವರೆ-ಎಂಟು ಗಂಟೆಗೆ ಅಲಂಕೃತವಾದ ತೇರು ಊರ ಮೆರವಣಿಗೆಗೆ ಹೊರಟು ಊರಿನ ಪ್ರಮುಖ ಬೀದಿಗಳಲ್ಲಿ ಸಾಗುವರು. ತೇರನ್ನು ಕುರಿತು ಅವರು ಹಾಡು ಕೆಳಗಿನಂತಿದೆ.

ಆರು ಬಂಡಿಯ ಹೂವು ಅರೇ ಪೀಠಕೆ ಸಾಲ್ದು
ಮತ್ತೊಂದು ಬಂಡಿತರಹೇಳಿ ಮರಿಯವ್ವ
ಹೋಗ್ಯವರೆ ಚಿನ್ನದ ರಥವೇರಿ ॥ ಸುವ್ವಿ ॥
ಹೋಗ್ಯವರೆ ಚಿನ್ನದ ರಥವೇರಿ ಮರಿಯವ್ವ
ಬಂದವರೆ ಸಂಪಿಗೆ ವನಕಾಗಿ ॥ ಸುವ್ವಿ ॥
ಬಂದವರೆ ಸಂಪಿಗೆ ವನಕಾಗಿ ಮರಿಯವ್ವ
ತಂದವರೆ ಸಂಪಿಗೆ ಶಿಲುಬೆಯ ॥ ಸುವ್ವಿ ॥ (ತಲ್ವಾಡಿ: 1983:68)

ಹೀಗೆ ಬಂಡಿಗಟ್ಟಲೆ ಹೂಗಳಿಂದ ಅಲಂಕೃತವಾದ ತೇರು ಜನಪದರ ದೃಷ್ಟಿಯಲ್ಲಿ ಚಿನ್ನದಷ್ಟೇ ಮೌಲ್ಯವುಳ್ಳದ್ದಾಗಿರುತ್ತದೆ. ಮೈಸೂರು ನಗರದ ವೀರನಗೆರೆಯಲ್ಲಿ ಮಾರಮ್ಮನ ಜಾತ್ರೆ, ಉತ್ಸವಗಳನ್ನು ಮಾಡುವ ದಿನ ಬೆಳಿಗ್ಗೆ, ಸಂಬಂಧಪಟ್ಟವರೊಬ್ಬರು ಬೀದಿ ಬೀದಿಗೂ ಹೋಗಿ ' ದೇವ್ರು ಬತ್ತದೆ, ಕಸಗುಡ್ಸಿ ರಂಗೋಲಿ ಬಿಡ್ರಮ್ಮ' ಎಂದು ಸಾರುವ ಪದ್ಧತಿ ಇತ್ತೆಂದು ಹೇಳುತ್ತಾರೆ.[9] ಅಂದರೆ ದೇವರಿಗೆ ಸಲ್ಲಬೇಕಾದ ಗೌರವಕ್ಕೆ ಕುಂದುಂಟಾಗಬಾರದೆಂಬುದು ಈ ಪದ್ಧತಿಯ ಉದ್ದೇಶವಿದ್ದಿರಬಹುದು. ಮಾರ್ಟಳ್ಳಿಯ ತಮಿಳು ಕ್ರೈಸ್ತರ ಆಚರಣೆಯಲ್ಲಿ ಇಂತಹ ಪದ್ಧತಿಯನ್ನು ಗುರುತಿಸಬಹುದು. ತೇರು ಬೀದಿಗಳಲ್ಲಿ ಬರುತ್ತಿದ್ದಂತೆ ಹೆಂಗಸರು ತಮ್ಮ ತಮ್ಮ ಮನೆಯ ಮುಂದೆ ಬಿಂದಿಗೆಗಳಲ್ಲಿ ನೀರು ಹೊತ್ತು ನಿಂತಿರುತ್ತಾರೆ. ತೇರು ಮನೆಯ ಮುಂದೆ ಬಂದಾಗ ತೇರಿನ ಮುಂದೆ ನೆಲದಮೇಲೆ ಬಿಂದಿಗೆಯ ನೀರನ್ನು ಸುರಿದು, ಧೂಪಾರತಿ ಮಾಡಿ ಹೂಬತ್ತಿಗಳನ್ನು ಅರ್ಪಿಸುತ್ತಾರೆ. ತೇರು ಚರ್ಚು ಸೇರಿದ ಕೂಡಲೇ ಪಟಾಕಿಗಳ ಸಿಡಿಸುವುದರೊಂದಿಗೆ ಅಬ್ಬರದಿಂದ ಜನರ ಆಯಾಸವೆಲ್ಲ ಮಾಯವಾಗುತ್ತದೆ. ಜಾತ್ರೆಯಲ್ಲಿ ಪಾಲ್ಗೊಂಡು ಅಪಾರ ವರಪ್ರಸಾದ ಪಡೆದೆವೆಂಬ ಭಾವನೆಯಿಂದ ಜನರು ಸಂಭ್ರಮದಿಂದ ಮನೆಗಳಿಗೆ ತೆರಳುವರು.

5.3.3 **ಸಂತ ಅಂತೋಣಿಯವರ ಹಬ್ಬದ ಜಾತ್ರೆ** ಮೈಸೂರು ಜಿಲ್ಲೆಗೆ ಸೇರಿದ ಕೆ.ಆರ್.ನಗರ ತಾಲ್ಲೂಕಿನ ಒಂದು ಗ್ರಾಮ ಡೋರ್ನಹಳ್ಳಿ. ಇದು ಮೈಸೂರು ನಗರದಿಂದ 40 ಕಿ.ಮೀ. ದೂರದಲ್ಲಿದೆ. ಇದನ್ನು 'ಕ್ರಿಶ್ಚಿಯನ್ ಕೊಪ್ಪಲು' ಎಂದೂ ಕರೆಯುತ್ತಾರೆ. 12ನೇ ಶತಮಾನದಲ್ಲಿ ಪೋರ್ಚುಗಲ್ಲಿನ ಲಿಸ್ಬನ್ ನಗರದಲ್ಲಿ ಜನಿಸಿ, ಬದುಕಿ, ಪವಾಡಗಳನ್ನು ಮೆರೆದ[10] ಈ ಸಂತನು ಮೈಸೂರಿನ ಪ್ರಖ್ಯಾತ ಜಾತ್ರೆಯೊಂದರ ಕಾರಣೀಭೂತನಾದುದಕ್ಕೆ ಹಿನ್ನೆಲೆಯಾಗಿ ಒಂದು ಐತಿಹ್ಯ ಹೀಗಿದೆ:

ಸುಮಾರು ಮೂರು ಶತಮಾನಗಳ ಹಿಂದೆ ರಾಜಪ್ಪಗೌಡ ಎಂಬ ಡೋರ್ನಹಳ್ಳಿಯ ರೈತನೊಬ್ಬ ಹೊಲ ಉಳುತ್ತಿದ್ದಾಗ ನೇಗಿಲು ಮುಂದಕ್ಕೆ ಹೋಗದೆ ನಿಂತುಬಿಟ್ಟಿತು. ಅವನು ಅದನ್ನು ಪರಿಶೋಧಿಸಿ ನೋಡಿದಾಗ ನೇಗಿಲಿನ ಕೆಳಗೆ ಮಣ್ಣಿನಲ್ಲಿ ಹೂತುಕೊಂಡಿದ್ದ ಮರದ ಗೊಂಬೆಯೊಂದು ಸಿಕ್ಕಿತು. ಮಕ್ಕಳಿಗೆ ಆಟಿಕೆಯಾಗಲೆಂದು ಅದನ್ನು ಮನೆಗೆ ತಂದುಕೊಟ್ಟ. ಮಕ್ಕಳು ಆಟವಾಡಲು ಉಪಯೋಗಿಸಿದಾಗ, ಗೊಂಬೆಗೆ ಚಿತ್ರಹಿಂಸೆಗಳಾದವು.

ಒಂದು ರಾತ್ರಿ ಗೊಂಬೆ ರೈತನ ಕನಸಿನಲ್ಲಿ ಕಾಣಿಸಿಕೊಂಡು 'ನನಗೊಂಡು ಗುಡಿಕಟ್ಟು' ಎಂದಂತೆ ಭಾಸವಾಯಿತು. ರೈತನು ಅದನ್ನು ಲಕ್ಷ್ಯಕ್ಕೆ ತೆಗೆದುಕೊಳ್ಳಲಿಲ್ಲ. ಮತ್ತೆರಡು ಬಾರಿ ಅದೇ ಅನುಭವವಾದರೂ ರೈತನು ಗಮನಕ್ಕೆ ತೆಗೆದುಕೊಳ್ಳಲಿಲ್ಲ. ಅವನ ಕುಟುಂಬದಲ್ಲಿ ಒಂದೊಂದಾಗಿ ತೊಂದರೆಗಳು ಕಾಣಿಸಿಕೊಳ್ಳಲು ಪ್ರಾರಂಭಿಸಿದವು. ಆಗ ರೈತ ಜಾಗೃತನಾದ. ಒಂದು ಸಣ್ಣ ಗುಡಿ ಕಟ್ಟಿಸಿ ಗೊಂಬೆಯನ್ನಿಟ್ಟು ಪೂಜಿಸಿದ.

ಕ್ರಮೇಣ ವಿದೇಶಿ ಗುರುಗಳೊಬ್ಬರು, ಆ ಪ್ರತಿಮೆಯನ್ನು ನೋಡಿ ಪಾದ್ವಾಪಟ್ಟಣದಲ್ಲಿ ಪವಾಡಗಳನ್ನು ಮೆರೆದ ಸಂತ ಅಂತೋಣಿಯವರ ಪ್ರತಿಮೆಯೆಂದು ಗುರುತಿಸಿ, ಪುನರ್‌ಸ್ಥಾಪನೆ ಮಾಡಿದರು. ಆ ಪ್ರತಿಮೆ ಇಂದಿಗೂ ಡೋರ್ನಹಳ್ಳಿಯಲ್ಲಿ ಕಾಣಲು ಸಿಗುತ್ತದೆ. ಮಣ್ಣಿನ ಪ್ರತಿಮೆಯ ಬಗ್ಗೆ ಹಲವಾರು ಕಾರಣಗಳನ್ನು ನೀಡುತ್ತಾರೆ ಕ್ರೈಸ್ತರ ದ್ವೇಷಿಯಾದ ಟಿಪ್ಪುಸುಲ್ತಾನನ್ನು ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಜಿಲ್ಲೆಗಳಿಂದ ಕ್ರೈಸ್ತರನ್ನು 'ಕರೆತಂದು 'ಗಂಜಾಂ'ನಲ್ಲಿ ಸೆರೆಯಲ್ಲಿಟ್ಟನೆಂದು ಬಾರ್ಕೂರು ಶಾಸನದಲ್ಲಿ ಬರೆಯಲಾಗಿದೆ (ತಲ್ವಾಡಿ: 1989:90). ಹಾಗೆ ಕರೆತರುವಾಗ ಅವರು ಪೂಜಿಸುತ್ತಿದ್ದ ಸಂತನ ಪ್ರತಿಮೆ ಬಿದ್ದುಹೋಗಿ, ಕಾಲಸರಿದಂತೆ ನೆಲದಲ್ಲಿ ಹೂತುಹೋಗಿರಬಹುದು.[11]

1. ಪ್ರತಿಮೆ ಸಿಕ್ಕಿರುವ ಸ್ಥಳದಲ್ಲಿ ಬಹುಹಿಂದೆ ಕ್ರೈಸ್ತರು ವಾಸಿಸುತ್ತಿದ್ದ ಮನೆಗಳಿದ್ದಿರಬಹುದು. ಕ್ರೈಸ್ತರಿಗೆ ಹಿಂಸೆ ಕೊಡುತ್ತಿದ್ದ ಕಾಲದಲ್ಲಿ ಅವರು ಪ್ರಾಣ ರಕ್ಷಣೆಗಾಗಿ ಊರು ಬಿಟ್ಟು ಹೋಗಿರಬಹುದು. ಕ್ರಮೇಣ ಮನೆಗಳು ನೆಲಸಮವಾದಾಗ ಅವರು ಬಿಟ್ಟು ಹೋಗಿದ್ದ ಪ್ರತಿಮೆ ನೆಲದಲ್ಲಿ ಹೂತು ಹೋಗಿರಬಹುದು.[12]

ಕಾರಣ ಏನಾದರೂ ಇರಲಿ, ಗೊಂಬೆ ನೆಲದಲ್ಲಿ ಸಿಕ್ಕಿ ಕ್ರಮೇಣ ಅದನ್ನು ಸಂತನ ಪ್ರತಿಮೆಯೆಂದು ಗುರುತಿಸಲಾಯಿತು. ಡೋರ್ನಹಳ್ಳಿಯ ಕೋರಿಕೆಗಳೆಲ್ಲ ನೆರವೇರಿದವು; ಪವಾಡಗಳಾದವು. ಪ್ರತಿವರ್ಷ ಜೂನ್ 13ನೇ ದಿನಾಂಕದಂದು ಸಂತನಹಬ್ಬ ಆಚರಿಸುವುದು ರೂಢಿಯಾಯಿತು. ಈ ಜಾತ್ರೆಗಾಗಿ ಜನ ದೇಶದ ಮೂಲೆಮೂಲೆಗಳಿಂದ ಬಂದು ಸೇರುವುದರಿಂದ ಇದು ಬಹು ಪ್ರಸಿದ್ಧವಾದ ಜಾತ್ರೆ ಎನಿಸಿದೆ.

ಡೋರ್ನಹಳ್ಳಿಯಲ್ಲಿ ಹದಿಮೂರು ದಿನಗಳ ಮುಂಚಿತವಾಗಿಯೇ ಬಡವರು, ಶ್ರೀಮಂತರು ಎಲ್ಲರೂ ಸೇರಿ, ಬೆಳಿಗ್ಗೆ ಸ್ನಾನಮಾಡಿ, ಪೂಜೆಯಲ್ಲಿ ಭಾಗವನಿಸಿ, ಉಪವಾಸವಿದ್ದು 13 ಮನೆಗಳಲ್ಲಿ ಭಿಕ್ಷೆ ಬೇಡಿ, ಅಕ್ಕಿ, ಹಣ ಶೇಖರಿಸುತ್ತಾರೆ. ಹೀಗೆ 13 ದಿನ ಮಾಡಿ 13ನೇ ದಿನ

ಹದಿಮೂರು ಮಂದಿ ಭಿಕ್ಷುಕರಿಗೆ ಊಟ ಹಾಕುವುದರ ಮೂಲಕ ಹಬ್ಬದ ಸಂಭ್ರಮ ಪ್ರಾರಂಭವಾಗುತ್ತದೆ.

ಜೂನ್ ತಿಂಗಳ 4ನೇ ತಾರೀಖು ಬೆಳಿಗ್ಗೆ ಸಂತ ಅಂತೋಣಿಯವರ ಪ್ರತಿಮೆ ದೊರೆತ ಸ್ಥಳದಲ್ಲಿ ಪೂಜೆ ನಡೆಯುತ್ತದೆ. ಅದೇ ದಿನ ಸಂಜೆ ಚರ್ಚಿನ ಮುಂದೆ ಸಂತನ ಗೌರವ ಧ್ವಜಾರೋಹಣ ಮಾಡಿ 'ನೊವೇನಾ' ಪ್ರಾರಂಭವಾಗುತ್ತದೆ.[13] ಪ್ರತಿದಿನ ಸಂಜೆ ಪೂಜೆಯ ಅನಂತರ ವಿಶೇಷ ಪ್ರಾರ್ಥನೆಯೊಂದಿಗೆ ಅಂತೋಣಿಯವರ ಉತ್ಸವಮೂರ್ತಿಯನ್ನು ಹೊತ್ತು ಚರ್ಚಿನ ಸುತ್ತ ಮೆರವಣಿಗೆ ಮಾಡುತ್ತಾರೆ. ಮೆರವಣಿಗೆ ಸಮಯದಲ್ಲಿ ತೇರಿನ ಮೇಲೆ ಉಪ್ಪು, ಕಡಲೆ, ಮೆಣಸನ್ನು ಎರಚುತ್ತಾರೆ. ಇದೂ ಒಂದು ಹರಕೆಯಾಗಿರುತ್ತದೆ. ನೋವೇನಾ ಪ್ರಾರಂಭವಾಗುವ ದಿನದಿಂದಲೇ ಅಂಗಡಿ ಮುಂಗಟ್ಟುಗಳು, ಹೊಟೇಲ್ಲುಗಳು, ಮನೋರಂಜನ ಚಟುವಟಿಕೆಗಳು ಪ್ರಾರಂಭವಾಗುತ್ತವೆ. ಹಬ್ಬಕ್ಕೆ ಮುಂಚಿತವಾಗಿಯೇ ಬಂದು ತಂಗುವವರಿಗೆ ಬೇಕಾಗುವ ಎಲ್ಲಾ ವಸ್ತುಗಳೂ ಈ ಅಂಗಡಿಗಳಲ್ಲಿ ದೊರೆಯುತ್ತವೆ. ಹೊಸಮಡಕೆಗಳು, ಮಣ್ಣಿನ ಒಲೆಗಳು, ಸೌದೆ, ತರಕಾರಿ, ಮಾಂಸ, ದಿನಸಿ, ಸಿಹಿತಿಂಡಿಗಳು, ಕಡಲೇಪುರಿ ಇತ್ಯಾದಿ ಎಲ್ಲಾ ವಸ್ತುಗಳ ಅಂಗಡಿಗಳೂ ಸಾಲುಗಟ್ಟಿರುತ್ತವೆ.

ಹಬ್ಬದದಿನ ಮೊದಲಪೂಜೆ ವಿಚಾರಣಾ ಗುರುಗಳಿಂದ (Parish Priest) ನಡೆಯುತ್ತದೆ. ಪೂಜೆಯ ಅನಂತರ ಅದ್ಭುತ ಪ್ರತಿಮೆಯನ್ನು ಹೊಸ ಚರ್ಚಿನಿಂದ ಹಳೆಯ ಚರ್ಚಿಗೆ ವರ್ಗಾಯಿಸು ತ್ತಾರೆ. ಕಾರಣ ಹೊಸಚರ್ಚಿನಲ್ಲಿ ಅರ್ಧಗಂಟೆಗೊಮ್ಮೆ ಪೂಜೆಗಳು ನಡೆಯುತ್ತಲೇ ಇರುತ್ತವೆ. ಜನರು ತಂಡೋಪತಂಡವಾಗಿ ಬಂದು ಪೂಜೆಯಲ್ಲಿ ಭಾಗವಹಿಸುತ್ತಾರೆ. ಇದರಿಂದ ಹರಕೆ ಸಲ್ಲಿಸುವ ಸಾವಿರಾರು ಮಂದಿ ಯಾತ್ರಿಕರಿಗೆ ತೊಂದರೆಯಾಗಬಾರದೆಂಬ ಉದ್ದೇಶದಿಂದ ಪ್ರತಿಮೆ ಯನ್ನು ಹಳೆಯ ಚರ್ಚಿಗೆ ವರ್ಗಾಯಿಸುವರು.

5.3.4 **ಜಾತ್ರೆಯ ತೇರು** ಹಿಂದೆ ಜಾತ್ರೆ ನಡೆಸುತ್ತಿದ್ದ ವಿಚಾರಣಾ ಗುರುಗಳು (Parish Priest) ಗ್ರಾಮದ ಜನರ ಸಹಾಯದ ಮೇಲೆಯೇ ಅವಲಂಬಿಸಿರುತ್ತಿದ್ದರು. ಆಗ ಗ್ರಾಮದ ಮುಖ್ಯಸ್ಥರಿಗೆ ಪ್ರಮುಖಸ್ಥಾನವಿದ್ದಿತು. ತೇರು ಹೊರಡುವ ಮುನ್ನ ಗ್ರಾಮದ ಹಿರಿಯ ವ್ಯಕ್ತಿ ಅಂತೋಣಪ್ಪ ಎಂಬುವವರು ಬರುವವರೆಗೆ ತೇರು ಹೊರಡುವಂತಿರಲಿಲ್ಲ. ಆತ ರಾಜಪ್ಪಗೌಡನ ವಂಶದವರು ಎಂದು ಅಲ್ಲಿಯವರು ಹೇಳುತ್ತಾರೆ. ಅವರು ಬಂದು 'ಎತ್ತಿ ತೇರ' ಎಂದು ಹೇಳಿ ಕೈಮುಗಿದಾಗ ತೇರನ್ನು ಎತ್ತುತ್ತಿದ್ದರಂತೆ. ಗೌಡರು ಮುಂದೆ ನಡೆದರೆ ಅವರ ಹಿಂದೆ ಗುರುಗಳೂ, ಅವರ ಹಿಂದೆ ತೇರು ಆಮೇಲೆ ಜನರು ಸಾಲಾಗಿ ಹೋಗುತ್ತಿದ್ದರಂತೆ. ಈಗ ಎಲ್ಲಾ ವಹಿವಾಟುಗಳೂ ಧರ್ಮಕೇಂದ್ರದ ಗುರುಗಳದೇ ಆಗಿರುತ್ತದೆ.

ಯಾವುದೇ ಕಾಲಘಟ್ಟದಲ್ಲಿ ಯಾವುದೇ ಕಾರಣಕ್ಕಾಗಿ ಈ ನೆಲದ ಜನರು ಕ್ರೈಸ್ತರಾಗಿ ಮತಾಂತರ ಹೊಂದಿದ್ದರೂ ಅವರ ಮೂಲ ಮನಸ್ಸು ಹಿಂದಿರುವುದು ಅದರ ಜೊತೆ ಅವಾನುಭಾವ ಸಂಭಂದ ಹೊಂದಿರುವುದು ಸ್ಪಷ್ಟ ಆದ್ದರಿಂದಲೇ ಕ್ರೈಸ್ತ ಹಬ್ಬ ಜಾತ್ರೆ ಉತ್ಸವ ಆಚರಣೆಯಲ್ಲಿ ಹಿಂದೂಧರ್ಮದ ಆಚರಣೆಯ ಅನುಕರಣೆಯನ್ನು ಗುರುತಿಸಬಹುದಾಗಿದೆ.

ನಾಲ್ಕೈದು ತೇರುಗಳು ಹೊರಡುತ್ತವೆ. ಉತ್ಸವಮೂರ್ತಿಯ ತೇರನ್ನು ಲಾರಿಯ ಮೇಲೆ ಜೋಡಿಸುತ್ತಾರೆ. ಉಳಿದವು ಯುವಕ ಸಂಘದವರೂ, ಹರಕೆ ಹೊತ್ತವರೂ ಜೋಡಿಸುವ ತೇರುಗಳು. ಇವುಗಳನ್ನು ಜನರು ಹೆಗಲಮೇಲೆ ಹೊತ್ತು ಸಾಗುತ್ತಾರೆ. ತೇರು

ಹೊರಡುವ ಮುನ್ನ ಗುರುಗಳು ತೇರಿಗೆ ತೀರ್ಥ ಪ್ರೋಕ್ಷಿಸಿ, ಧೂಪಾರತಿಮಾಡಿ, ಪ್ರಾರ್ಥನೆ ಸಲ್ಲಿಸುತ್ತಾರೆ. ನಂತರ ಜನರು ಪ್ರಾರ್ಥನೆಯನ್ನು ಮುಂದುವರೆಸುತ್ತಾ ಸಾಗುತ್ತಾರೆ. ಮೆರವಣಿಗೆಯ ಸಮಯದಲ್ಲಿ ದೊಡ್ಡ ಚಾಮರ ಹಿಡಿಯುವ ಪದ್ಧತಿ ಇಂದಿಗೂ ರೂಢಿಯಲ್ಲಿದೆ. ಊರಿನ ಒಳಗೆ ತೇರು ಬರುವಾಗ ಪ್ರತಿಯೊಂದು ಮನೆಯವರೂ ಹೂಬತ್ತಿಗಳನ್ನು ಅರ್ಪಿಸುತ್ತಾರೆ. ತೇರಿನ ಮೇಲೆ ಉಪ್ಪು, ಕಡಲೆ, ಮೆಣಸು ಹಾಗೂ ಚಿಲ್ಲರೆ ದುಡ್ಡನ್ನು ಎರಚುತ್ತಾರೆ.

ಇನ್ನೊಂದು ವಿಶೇಷವೆಂದರೆ ದೆವ್ವ ಹಿಡಿದವರು, ಗಾಳಿಸೋಂಕು ತಗಲಿದವರು ತೇರು ಹೊರಟಾಗ ಮೈಮೇಲೆ ಬಂದವರಂತೆ ಕೂಗುತ್ತಾ, ಅರಚುತ್ತಾ ತೇರಿನ ಮುಂದೆ ಬರುತ್ತಾರೆ. ಕೆಲವರು ಬಿದ್ದು ಒದ್ದಾಡುತ್ತಾರೆ, ಕೆಲವರು ಕೂಗುತ್ತಾ ದೂರಕ್ಕೆ ಓಡಿಹೋಗುತ್ತಾರೆ. ಸಂತ ಅಂತೋಣಿಯವರನ್ನು ನಮಗಾಗಿ ಪ್ರಾರ್ಥಿಸಿರಿ' ಎಂದು ಬೇಡಿಕೊಳ್ಳುವ ಮನವಿಗಳ ಸರಮಾಲೆಯೇ ಇರುತ್ತದೆ. ಮೆರವಣಿಗೆ ತಾಳಮೇಳಗಳೊಂದಿಗೆ, ಪ್ರಾರ್ಥನಾ ಗೀತೆಗಳೊಂದಿಗೆ ಹಬ್ಬದ ಸಂಭ್ರಮವನ್ನು ಇಮ್ಮಡಿಗೊಳಿಸಿ, ಹಳ್ಳಿಯ ಮುಖ್ಯ ಬೀದಿಗಳಲ್ಲಿ ಸಾಗುತ್ತದೆ. ಪಟಾಕಿಗಳ ಸಿಡಿತ, ಬಾಣಬಿರುಸು ಗಳು ಜನರ ಸಂಭ್ರಮವನ್ನೂ ಸಂತೋಷವನ್ನೂ ಹೊರಸೂಸುತ್ತದೆ.[14]

5.3.5 **ಜಾತ್ರೆಯಲ್ಲಿ ಇತರ ಧರ್ಮೀಯರ ಪಾತ್ರ** ಡೋರ್ನಹಳ್ಳಿ ಜಾತ್ರೆಯನ್ನು ಒಂದು ಧಾರ್ಮಿಕ ಜಾತ್ರೆ ಎನ್ನುವ ಬದಲು, ಆ ಊರಿನ ಜಾತ್ರೆ ಎಂದೇ ಹೇಳಬಹುದು. ಡೋರ್ನಹಳ್ಳಿಯಲ್ಲಿ ವಾಸಿಸುವ ಜನರೆಲ್ಲರೂ ಕ್ರೈಸ್ತರೇ ಆಗಿದ್ದಾರೆ. ಆದರೆ ಸುತ್ತಮುತ್ತಲ ಗ್ರಾಮಗಳಾದ ಬಸಾಪಟ್ಟಣ, ಹೊಸಳ್ಳಿ, ಅಂಗರಬಾಯನಹಳ್ಳಿ, ದೊಡ್ಡೇಕೊಪ್ಪಲು, ಲಾಳದೇವನಹಳ್ಳಿ ಮುಂತಾದ ಕಡೆ ನೆಲಸಿರುವ ಜನರು ಹಿಂದೂಗಳಾಗಿದ್ದರೂ ಸಂತ ಅಂತೋಣಿಯವರ ಭಕ್ತರೇ ಆಗಿದ್ದಾರೆ. ಅದಕ್ಕೆ ಕಾರಣವೂ ಇದೆ: ಹಿಂದೊಮ್ಮೆ ಪ್ಲೇಗು ಕಾಯಿಲೆ ಬಂದು ಸುತ್ತಮುತ್ತಲ ಹಳ್ಳಿಗಳಲ್ಲಿ ಜನರು ಸಾಯುತ್ತಿದ್ದರಂತೆ. ಆದರೆ ಡೋರ್ನಹಳ್ಳಿ ಮಾತ್ರ ಆ ಕಾಯಿಲೆಗೆ ತುತ್ತಾಗಲಿಲ್ಲವಂತೆ. ಕಾರಣ ಇಲ್ಲಿನ ಕ್ರೈಸ್ತ ಗುರುಗಳು ಮಂತ್ರಿಸಿಕೊಟ್ಟ ತೀರ್ಥವನ್ನು ಕುಡಿದು ಅಪಾಯದಿಂದ ಪಾರಾಗಿದ್ದರು ಎಂಬುದಾಗಿ ಹೇಳುತ್ತಾರೆ.[15] ಈ ಕಾರಣ, ಸಂತನ ಪವಾಡ ಅನ್ಯಧರ್ಮೀಯರ ಮೇಲೆಯೂ ಪ್ರಭಾವ ಬೀರಿದೆ. ಹಿಂದೂಗಳು ಸಂತ ಅಂತೋಣಿಯವರಿಗೆ ಹರಕೆ ಸಲ್ಲಿಸುತ್ತಾರೆ; ತೇರಿನಲ್ಲಿ ಪಾಲ್ಗೊಂಡು 'ಕೃತಾರ್ಥ'ರಾಗುತ್ತಾರೆ.

ಕಳೆದುಹೋದ ವಸ್ತುಗಳನ್ನು ಮರಳಿ ಪಡೆಯಲು ಸಂತ ಅಂತೋಣಿಯವರಿಗೆ ಮೊರೆ ಹೋಗುತ್ತಾರೆ. ಏನಾದರೂ ವಿಶೇಷ ಕಾರ್ಯಗಳು ನಡೆಯಬೇಕಾಗಿದ್ದರೆ ಸಂತನಿಗೆ ಕಾಣಿಕೆ ಸಲ್ಲಿಸಿ, ಹದಿಮೂರು ಮಂಗಳವಾರಗಳ ವ್ರತಮಾಡುತ್ತಾರೆ. ಹದಿಮೂರನೇ ಮಂಗಳವಾರ ರೊಟ್ಟಿಯನ್ನು (Bread or Bun) ಸಲ್ಲಿಸಿ, ಪ್ರಾರ್ಥನೆಯಾದ ಬಳಿಕ ಜನರಿಗೆ ಹಂಚುತ್ತಾರೆ. ಹಸಿದವರಿಗೆ ಅನ್ನಕೊಟ್ಟರೆ ಸಂತ ಅಂತೋಣಿಯವರು ಸಂತುಷ್ಟರಾಗುತ್ತಾರೆ ಎಂಬ ನಂಬಿಕೆ ಇದೆ.

ಸಂತರು ತಮ್ಮ ಜೀವಿತಕಾಲದಲ್ಲಿ ಕಿವುಡರಿಗೆ ಶ್ರವಣ, ಅಂಧರಿಗೆ ದೃಷ್ಟಿ, ವ್ಯಾದಿಷ್ಠರಿಗೆ ಆರೋಗ್ಯ, ನಿರಪರಾಧಿಗಳಿಗೆ ನ್ಯಾಯವನ್ನು ದೊರಕಿಸಿಕೊಟ್ಟರೆಂಬ ನಂಬಿಕೆಯಿಂದ ತಮ್ಮ ಎಲ್ಲಾ ಶೋಕ-ಸಮಸ್ಯೆಗಳ ಪರಿಹಾರ ಹುಡುಕುತ್ತಾ ಭಕ್ತರು ಡೋರ್ನಹಳ್ಳಿಗೆ ಧಾವಿಸುತ್ತಾರೆ.

ಈ ಜಾತ್ರೆಯನ್ನು ನಡೆಸುವುದರಿಂದ ಅನೇಕ ಪ್ರಯೋಜನಗಳಿವೆ. ಜಾತ್ರೆಯ ನೆಪದಲ್ಲಿ ಒಂದೆಡೆ ಕಲೆಯುವ ಜನರು ಭಕ್ತಿಭಾವದಿಂದ ಓಲಾಡುತ್ತಾರೆ. ಏಕಕಾಲದಲ್ಲಿ ಸಾವಿರಾರು

ಮಂದಿಯ ಮನಸ್ಸು ಆಧ್ಯಾತ್ಮಚಿಂತನೆ ನಡೆಸುವುದರಿಂದ ಜನರಲ್ಲಿ ಧಾರ್ಮಿಕ ಶ್ರದ್ಧೆ ವೃದ್ಧಿಯಾಗುತ್ತದೆ. ಹರಕೆಯ ಎಲ್ಲಾ ವಿಧಿ ವಿಧಾನಗಳೂ ಮಾನವನಲ್ಲಿನ 'ಅಹಂ' ಅನ್ನು ಕುಗ್ಗಿಸಿ ದೀನತಾ ಭಾವನೆಯನ್ನು ಬೆಳೆಸುತ್ತದೆ. ಸಂತರ ಪವಾಡಗಳಲ್ಲಿ ನಂಬಿಕೆಯುಳ್ಳ ಜನರಂತೂ ಮಾನಸಿಕ, ದೈಹಿಕ ಕಾಯಿಲೆಗಳಿಂದ ಮುಕ್ತರಾಗುತ್ತಾರೆ.

ಈ ಹಬ್ಬ ಜಾತ್ರೆಗಳ ಸಂದರ್ಭಗಳಲ್ಲಿ ವಿಭಿನ್ನ ಸಂಸ್ಕೃತಿಯ ಜನರು ಒಂದುಗೂಡುವುದರಿಂದ ಸಂಸ್ಕೃತಿ ವಿನಿಮಯ ಸಾಧ್ಯವಾಗುತ್ತದೆ. ಜಾತ್ರೆಯ ಸಮಯದಲ್ಲಿ ನಡೆಸುವ ವ್ಯಾಪಾರ, ವಹಿವಾಟುಗಳಿಂದ ಜನರ ಆರ್ಥಿಕ ಮಟ್ಟ ಸುಧಾರಿಸುತ್ತದೆ. ಚರ್ಚಿನ ಆದಾಯ ಹೆಚ್ಚುತ್ತದೆ.

ಜಾತ್ರೆಗಳನ್ನು ನಡೆಸುವುದರಿಂದ ಜನರ ಯಾಂತ್ರಿಕ ಜೀವನಕ್ಕೊಂದು ಆಯಾಮ ದೊರೆತಂತಾಗಿ ಸಮತೋಲನವನ್ನು ಕಾಪಾಡಿದಂತಾಗುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ಈ ಹಬ್ಬ ಜಾತ್ರೆಗಳಲ್ಲಿ, ಅವುಗಳ ಆಚರಣೆ ವಿಧಿವಿಧಾನಗಳಲ್ಲಿ, ಅವರ ಜೀವನ ಮತ್ತು ಸಂಸ್ಕೃತಿಯ ಅಂಶಗಳು ವ್ಯಕ್ತವಾಗುತ್ತವೆ.

5.4 **ಹರಕೆಗಳು** ಈ ಜಾತ್ರೆಯಲ್ಲಿ ಕಾವಿಬಣ್ಣದ ಉಡುಪು ಧರಿಸುವುದು ಒಂದು ಹರಕೆಯಾಗಿರುತ್ತದೆ. ಗುರುತರವಾದ ಕಾಯಿಲೆಗಳಿಗೆ ತುತ್ತಾದವರು, ಹಾನಿ, ನಷ್ಟಗಳಿಗೆ ಒಳಗಾದವರು ಅದರಿಂದ ಪಾರಾದರೆ ಕಾವಿ ತೊಡುವುದಾಗಿ ಹರಕೆ ಹೊತ್ತುಕೊಳ್ಳುತ್ತಾರೆ. ಇವರು ಕಾವಿಧರಿಸಿ ಒಂದು ತಟ್ಟೆ ಹಿಡಿದು, ಚರ್ಚಿನ ಬಾಗಿಲಿನಲ್ಲಿ ಭಿಕ್ಷೆಗಾಗಿ ಸಾಲಾಗಿ ನಿಲ್ಲುತ್ತಾರೆ. ಅನಂತರ ಭಿಕ್ಷೆಯ ಅಕ್ಕಿಯೊಂದಿಗೆ, ತಾವೂ ಖರ್ಚುಮಾಡಿ, ಮೂರು ಮಂದಿ ಭಿಕ್ಷುಕರಿಗೆ ಹರಕೆಯ ಊಟ ಹಾಕುವುದು ಪದ್ಧತಿ. ಒದ್ದೆ ಬಟ್ಟೆಯಲ್ಲಿ ನಿಂತು ಭಿಕ್ಷೆ ಬೇಡುವುದೂ ಹರಕೆಯ ಒಂದು ವಿಧಾನವಾಗಿದೆ.

ಹೊಟ್ಟೆನೋವು, ಕಣ್ಣು, ಕಿವಿ, ತಲೆ, ಕೈಕಾಲು ನೋವು ಇತ್ಯಾದಿ ರೋಗಗಳಿಂದ ನರಳುತ್ತಿದ್ದವರು ಅದದೇ ಅಂಗಗಳನ್ನು ಅರ್ಪಿಸುವುದಾಗಿ ಹರಕೆಕಟ್ಟಿಕೊಳ್ಳುತ್ತಾರೆ. ಇವನ್ನು ಅಲ್ಲೇ ಚರ್ಚಿನ ಆವರಣದಲ್ಲಿ ಮಾರುವವರಿಂದ ಕೊಂಡು ಹೂಬತ್ತಿಗಳೊಡನೆ ಹರಕೆ ತೀರಿಸುತ್ತಾರೆ.

ಉರಿ, ನವೆ, ಕಜ್ಜಿ ಇತ್ಯಾದಿ ಚರ್ಮರೋಗಗಳ ನಿವಾರಣೆಗೆ ಹರಕೆ ಹೊತ್ತವರು ಮೆಣಸು, ಉಪ್ಪು, ಕಡಲೆಯನ್ನು ತೇರಿನಮೇಲೆ ಎರಚುತ್ತಾರೆ.

ಪ್ರಾಣಿಗಳ ಕಾಯಿಲೆಗಳು ವಾಸಿಯಾಗಲು ಹರಕೆ ಹೊತ್ತವರು ಎತ್ತು, ಎಮ್ಮೆ, ಹಸು, ಕುರಿಗಳನ್ನು ಮೆರವಣಿಗೆಯಲ್ಲಿ ತೇರಿನ ಮುಂದೆ ಸ್ವಲ್ಪ ದೂರದವರೆಗೆ ನಡೆಸಿಕೊಂಡು ಬರುತ್ತಾರೆ.

'ತೇರಿನಮೇಲೆ ತೇರು ಹೊರ್ತೀನಿ' ಎಂದರೆ ಹೊರುವ ತೇರಿಗೆ ಹೆಗಲು ಕೊಡುವುದು ಕೂಡ ಒಂದು ಹರಕೆಯೇ ಆಗಿರುತ್ತದೆ.[16]

ಹಿಂದೆ ' ಉರುಳು ಸೇವೆ ' ಮಾಡುವುದೂ ಒಂದು ಹರಕೆಯಾಗಿತ್ತು ಎಂದು ಬಲ್ಲವರು ಹೇಳುತ್ತಾರೆ. ಒಮ್ಮೆ ಒಬ್ಬಳು ಸ್ತ್ರೀ ರೈಲು ನಿಲ್ದಾಣದಿಂದ ಚರ್ಚಿನವರೆಗೆ ಉರುಳು ಸೇವೆ ಮಾಡಿ ಹರಕೆ ತೀರಿಸಿದಳು ಎಂದು ಹೇಳುತ್ತಾರೆ.[17]
ಇಂದು ಉರುಳುಸೇವೆ ಹರಕೆ ಹೊರುವುದು ಕಂಡುಬರುವುದಿಲ್ಲ.

5.4.1 **ಮುಡಿಕೊಡುವುದು ಮತ್ತು ಮಕ್ಕಳಿಗೆ ಕಿವಿ ಚುಚ್ಚಿಸುವುದು** ಸಾಮಾನ್ಯವಾಗಿ ಮೈಸೂರು ಜಿಲ್ಲೆಯ ಕ್ರೈಸ್ತರೆಲ್ಲರೂ ಮಗುವಿಗೆ ಕಿವಿಚುಚ್ಚಿಸುವ, ಮೊದಲ ಬಾರಿಗೆ ' ಮುಡಿಕೊಡುವ ' ಕಾರ್ಯವನ್ನು ಈ ಹಬ್ಬದಲ್ಲೇ ಮಾಡುತ್ತಾರೆ. ಪವಾಡ ಪ್ರತಿಮೆ ದೊರೆತ ಸ್ಥಳದಲ್ಲಿರುವ ಗುಡಿಯ ಬಳಿ, ಗುಂಪು ಗುಂಪಾಗಿ ನೆರೆಯುವ ಜನರು ತಮ್ಮ ಮಕ್ಕಳಿಗೆ ಕೇಶಮುಂಡನ ಮಾಡಿಸಿ, ಕಿವಿ ಚುಚ್ಚಿಸುತ್ತಾರೆ. ಮಕ್ಕಳ ಕೊರಳಿಗೆ ಹೂವಿನಹಾರ ಹಾಕಿ ಬ್ಯಾಂಡು ಸಹಿತ ಗುಡಿಯನ್ನು ಮೂರುಸಲ ಪ್ರದಕ್ಷಿಣೆ ಹಾಕಿಸುತ್ತಾರೆ.ಹಬ್ಬ-ಜಾತ್ರೆ -ಉತ್ಸವದ ಮೇಲೆ ವಿವರಿಸಿದ ಎಲ್ಲಾ ಆಚರಣೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಒಂದು ವಿಷಯ ಸ್ಪಷ್ಟವಾಗುತ್ತದೆ. ಅದೇನಂದರೆ ಈಗ ಅನುಭವಿಸುತ್ತಿರುವ ಕ್ರೈಸ್ತ ಧರ್ಮದವರೂ ಆ ಎಲ್ಲ ಆಚರಣೆಯ ಹಿಂದೆ ತಮ್ಮ ಮೂಲಧರ್ಮದ (ಹಿಂದೂ) ಪಳೆಯುಳಿಕೆಗಳೇ ಆಗಿವೆ. ಒಟ್ಟಾರೆ ಕ್ರೈಸ್ತ ಮತ್ತು ಹಿಂದೂ ಧರ್ಮದ ಐಕ್ಯತೆಯನ್ನು ಇಲ್ಲಿ ಮಾತ್ರ ಕಾಣಲು ಸಾಧ್ಯವಿದೆ. ನಗರ ಪ್ರದೇಶಕ್ಕಿಂತಲೂ ಗ್ರಾಮೀಣ ಪ್ರದೇಶದಲ್ಲಿ ಇದು ಸಾಮಾನ್ಯ ಏಕೆಂದರೆ ಈ ಜನತೆ ಮುಗ್ದರು ಮಾತ್ರವಲ್ಲ ತಮ್ಮ ಕಷ್ಟದ ಪರಿಹಾರಕ್ಕಾಗಿ ಒಂದೇ ದೇವರನ್ನು ನಂಬಿ ಕೂರುವುದಿಲ್ಲ. ಮಂಗಳವಾರ- ಮಾರಮ್ಮ - ಶನಿವಾರ ಆಂಜನೇಯ ಗುರುವಾರ ರಾಘವೇಂದ್ರ ಸೋಮುವಾರ ಈಶ್ವರ ಹೀಗೆ ಒಂದೊಂದು ವಾರದ ದಿನದಂದು ದೇವರು ದೇವತೆಯನ್ನು ಪೂಜಿಸುವುದು ಹಾಗೂ ಒಂದೊಂದು ಸಮಸ್ಯೆಗಳ ಪರಿಹಾರಕ್ಕಾಗಿ ಬೇರೆ ಬೇರೆ ದೈವಗಳಲ್ಲಿ ಹರಕೆ ಹೊರುವುದು ರೂಢಿಯಲ್ಲಿದೆ . ಆ ಹಿನ್ನಲೆಯಲ್ಲಿ ತಮ್ಮದೆ ಗ್ರಾಮದಲ್ಲಿ ಅಥವಾ ಸುತ್ತಮುತ್ತ ನೆರವೇರುವ ಜಾತ್ರೆ ಅಥವಾ ಹಬ್ಬದಲ್ಲಿ ಪಾಲ್ಗೊಳ್ಳುವುದು ಅವರಿಗೆ ನಿಷಿದ್ದವಲ್ಲ ಆದ್ದರಿಂದ ಯಾವುದೇ ದೈವದಿಂದ ಒಳ್ಳೆಯದಾಗುವುದೆಂದರೆ ಅದಕ್ಕೆ ನೆಡೆದುಕೊಳ್ಳುವುದಕ್ಕೆ ಹಿಂಜರಿಯುವುದಿಲ್ಲ ದೇವರುಗಳು ಇರುವುದು ನಮ್ಮ ಕಷ್ಟಗಳನ್ನು ಪರಿಹರಿಸುವ ಸಲುವಾಗಿಯೇ ಎಂಬುದು ಬಲವಾದ ನಂಬಿಕೆ , ಮುಸ್ಲಿಂ ದರ್ಗಗಳಿಗೆ ಹಿಂದೂಗಳು ಹೋಗಿ ಮಕ್ಕಳಿಗೆ ಬಾದಿಸುವುದು ಒಟ್ಟಾರೆ ಹಿಂದೂ ಮುಸ್ಲಿಂ , ಕ್ರೈಸ್ತಧರ್ಮ ಯಾವುದೇ ಇರಲಿ ಜನರು ಮಾತ್ರ ಈ ನೆಲದವರೇ ಎಂಬುದನ್ನು ಮರೆಯುವುದಿಲ್ಲ.

## ಅಡಿಟಿಪ್ಪಣಿಗಳು

1. ವಕ್ತೃ : ಸೆಲ್ವಿ ವಯಸ್ಸು 50, ಮಾರ್ಟಳ್ಳಿ.
2. ವಕ್ತೃ : ಕ್ಲಾರಾ ಕಿಸ್ತೋಜ ಸಿದ್ದಿ, ವಯಸ್ಸು 50, ಮೈನಳ್ಳಿ, ಮುಂಡಗೋಡ ತಾಲ್ಲೂಕು.
3. ಧರ್ಮಧ್ಯಕ್ಷರು : ಧರ್ಮ ಪ್ರಾಂತ್ಯಕ್ಕೆ ಹಿರಿಯ ಗುರು.
4. ವಕ್ತೃ: ತೇರೆಸಮ್ಮ ವಯಸ್ಸು 70, ಮೈಸೂರು ನಗರ.
5. ವಕ್ತೃ: ಪಾಪಣ್ಣ ವಯಸ್ಸು 68, ಕೂಡಲೂರು.
6. ವಕ್ತೃ: ಜಸಿಂತ, ಶಿಕ್ಷಕಿ ವಯಸ್ಸು 45, ನಾಗನಹಳ್ಳಿ.
7 ವಕ್ತೃ: ಜೋಸೆಫ್, ವಯಸ್ಸು 70, ಮೈಸೂರು.
8. ತಿರುದಾರ : ನಾರುಮಡಿ ನೂಲಿನಿಂದ ಅಥವಾ ಉಣ್ಣೆಯ ದಾರದಿಂದ ತಯಾರಾದ ಪವಿತ್ರಿಕರಿಸಿದ ದಾರ.
9. ವಕ್ತೃ: ಪದ್ಮಮ್ಮ ವಯಸ್ಸು 70, ವೀರನಗರ, ಮೈಸೂರು.
10. ಅಧಾರ : C.A Saldana, the wonder worker of Padua, Mangalore.

11. ವಕ್ತೃ: ಪಾ// ಅಂತಪ್ಪ, ವಯಸ್ಸು 48, ಮಳವಳ್ಳಿ,
12. ವಕ್ತೃ: ದಿ // ಎಸ್, ಮ್ಯಾನುಯೇಲ್, ವಯಸ್ಸು 75, ಮೈಸೂರು.
13. ವಕ್ತೃ: ಮಾರ್ಟಿನ್, ವಯಸ್ಸು 45, ಡೋರ್ನಹಳ್ಳಿ.
14 ವಕ್ತೃ: ಸುರೇಖ ಫ್ರಾನ್ಸಿಸ್ಸ್ ಸಿದ್ದಿ, ವಯಸ್ಸು 38, ಮೈನಳ್ಳಿ, ಮುಂಡುಗೋಡು ತಾಲ್ಲೂಕು
15. ವಕ್ತೃ: ಅಂತೋಣಿ, ವಯಸ್ಸು 40, ಡೋರ್ನಹಳ್ಳಿ.
16. ವಕ್ತೃ: ಜುದಾನಮ್ಮ ವಯಸ್ಸು 50, ಡೋರ್ನಹಳ್ಳಿ,
17. ವಕ್ತೃ: ಇನ್ನಾಸಪ್ಪ, ವಯಸ್ಸು 55, ಮೈಸೂರು.

# ಅಧ್ಯಾಯ- 6

## ಕರ್ನಾಟಕ ಕ್ರೈಸ್ತ ಬುಡಕಟ್ಟಿನ ಸಾಮಾಜಿಕ ಮತ್ತು ಆರ್ಥಿಕ ಪ್ರಗತಿ

ಬುಡಕಟ್ಟು ಕ್ರೈಸ್ತರ ಸಂಪ್ರದಾಯಗಳು ಅವರ ಸಾಮಾಜಿಕ ಮತ್ತು ಆರ್ಥಿಕ ಜೀವನದೊಡನೆ ಜೀವಂತವಾದ ಸಂಬಂಧವನ್ನಿಟ್ಟುಕೊಂಡಿವೆ. ಇತರೆ ಧರ್ಮೀಯರೊಂದಿಗೆ ಇವರ ಸಂಪರ್ಕ ನಿಕಟವಾಗಿದೆಯೆಂಬುದಕ್ಕೆ ಇಂದಿಗೂ ಇವರು ಉಳಿಸಿಕೊಂಡು ಬಂದಿರುವ ಸಂಪ್ರದಾಯಗಳೇ ಪ್ರತ್ಯಕ್ಷ ಸಾಕ್ಷಿಗಳಾಗಿವೆ. ಈ ದೃಷ್ಟಿಯಿಂದ ಬುಡಕಟ್ಟು ಕ್ರೈಸ್ತರು ಧರ್ಮವನ್ನು ಬದಲಾಯಿಸಿಕೊಂಡರೇ ವಿನಃ ತಮ್ಮ ಜೀವನ ಕ್ರಮವನ್ನಲ್ಲ ಎಂದು ಹೇಳಬಹುದು. ಮತಾಂತರ ಹೊಂದಿದ್ದಕ್ಕೆ ಹಲವಾರು ಕಾರಣಗಳಿರಬಹುದು. ಆದರೆ ಪಾರಂಪಾರಿಕವಾಗಿ ನಡೆದು ಬಂದಿದ್ದ ಸಂಪ್ರದಾಯ ಮತ್ತು ನಂಬಿಕೆಗಳು ರಕ್ತಗತವಾದವುಗಳು. ಈ ಹಿನ್ನೆಲೆಯಲ್ಲಿ "It is not uncommon to hear the saying scratch a Christian and you will find a Hindu" (Nanjundiah & Ananthakrishna Iyer. Vol III: 56) ಎಂಬ ಮಾತು ಬುಡಕಟ್ಟು ಕ್ರೈಸ್ತರಿಗೆಲ್ಲರಿಗೂ ಅನ್ವಯಿಸುವಂಥದ್ದಾಗಿದೆ. ಬುಡಕಟ್ಟು ಕ್ರೈಸ್ತರ ಸಾಮಾಜಿಕ ಸಂಪ್ರದಾಯಗಳ ಮೂಲವು ಹಿಂದೂ ಸಂಪ್ರದಾಯಗಳಲ್ಲಿರುವುದು ನಿಜ. ಅವುಗಳಲ್ಲಿ ಕೆಲವನ್ನು ಈ ಕೆಳಗೆ ಪ್ರಸ್ತಾಪಿಸಲಾಗಿದೆ.

### 6.1 ಸಾಮಾಜಿಕ ಸ್ಥಿತಿಗಳು

6.1.1 **ಸೂತಕ ಕಳೆಯುವುದು** ಹುಟ್ಟಿನಿಂದ ಸಾವಿನತನಕ ಎರಡು ವಿಧವಾದ ಸೂತಕಗಳು ಬುಡಕಟ್ಟು ಕ್ರೈಸ್ತರಲ್ಲಿ ರೂಢಿಯಲ್ಲಿದೆ. ಮೈನೆರೆಯುವುದು, ಹೆರಿಗೆಯಾಗುವುದು ಶುಭಸೂಚಕವಾದರೆ, ಮರಣ ಸಂಭವಿಸುವಂಥದ್ದು ಅಶುಭ ಸೂತಕವಾಗುತ್ತದೆ. ಕ್ರೈಸ್ತರಲ್ಲಿ ಸೂತಕ ಕಳೆಯುವ ಸಂಪ್ರದಾಯ ಹೊಸದೇನಲ್ಲ. ಎರಡು ಸಾವಿರ ವರ್ಷಗಳ ಹಿಂದೆಯೇ

ಯೇಸುವಿನ ತಾಯಿ ಮರಿಯಮ್ಮ ಯೇಸು ಹುಟ್ಟಿದ ನಲವತ್ತು ದಿನಗಳ ಸೂತಕ ಕಳೆದ ಅನಂತರ ನಲವತ್ತನೇ ಚರ್ಚಿಗೆ ಹೋಗಿ ಅಂದಿನ ಸಾಮಾಜಿಕ ಸಂಪ್ರದಾಯದ ಪ್ರಕಾರ ಎರಡು ಪಾರಿವಾಳಗಳನ್ನು ಚರ್ಚಿಗೆ ಅರ್ಪಿಸಿ ಬಂದರೆಂದು ಉಲ್ಲೇಖಿತವಾಗಿದೆ (ಲೂಕ 2:22–24). ಅದರ ಸ್ಮರಣಾರ್ಥಕವಾಗಿ ಫೆಬ್ರವರಿ 2ನೇ ತಾರೀಖಿನಂದು 'ಶುದ್ಧೀಕರಣ' ಹಬ್ಬವನ್ನೂ ಆಚರಿಸಲಾಗುತ್ತದೆ. ಅದನ್ನೇ ಅನುಸರಿಸಿ ಕ್ರೈಸ್ತರಲ್ಲಿ ಹೆರಿಗೆಯ ಸೂತಕ ನಲವತ್ತು ದಿನಗಳೆಂದು ಪರಿಗಣಿಸಲಾಗಿದೆ.

ಅಂತೆಯೇ ಬುಡಕಟ್ಟು ಕ್ರೈಸ್ತರಲ್ಲಿ ಮಗು ಹುಟ್ಟಿದ ನಲವತ್ತನೇ ದಿನ ಬಾಣಂತಿ ಚರ್ಚಿಗೆ ಹೋಗುತ್ತಾಳೆ. ಮೇಣದ ಬತ್ತಿಯನ್ನು ಅತ್ತಿಸಿಕೊಂಡು ಚರ್ಚಿನ ಬಾಗಿಲಲ್ಲಿ ನಿಂತ ಬಾಣಂತಿಯನ್ನು ಗುರುಗಳು ತೀರ್ಥವನ್ನು ಪ್ರೋಕ್ಷಿಸಿ, ಪ್ರಾರ್ಥನೆಯೊಡನೆ ಚರ್ಚಿನ ಒಳಗೆ ಬರಮಾಡಿಕೊಳ್ಳುವುದು ಪದ್ಧತಿ.

ಸೂತಕದ ದಿನಗಳಲ್ಲಿ ಬಾಣಂತಿ ಪಾಲಿಸಬೇಕಾದ ಕೆಲವು ನಿಷೇಧಗಳಿವೆ. ಅಡುಗೆ ಮನೆಯನ್ನು ಪ್ರವೇಶಿಸಕೂಡದು, ಇತರ ಯಾವ ವಸ್ತುವನ್ನೂ ಮುಟ್ಟಬಾರದು, ಹೆಚ್ಚುಕಾಲ ಮಲಗಿಯೇ ಇರಬೇಕು, ಈ ನಡವಳಿಕೆಗಳು ಇವರ ಜೀವನಕ್ರಮದಲ್ಲಿ ಬೆರೆತುಹೋಗಿವೆ. ಆದರೆ ಈ ಸೂತಕ ಪದ್ಧತಿಯು ಅನಾನುಕೂಲ ಹಾಗೂ ಅನುಕೂಲದ ಮೇಲೆಯೂ ಬೆಳಕು ಬೀರುತ್ತದೆ. ರೈತರ ಜೀವನ ಅವಿಶ್ರಾಂತವಾದುದು; ಬಿಡುವಿಲ್ಲದಷ್ಟು ಕೆಲಸಗಳಿರುತ್ತವೆ. ಹೆರಿಗೆಯಾದ ಮೇಲೆ ಸ್ತ್ರೀ ನಿಶಯಕ್ತಳಾಗಿರುತ್ತಾಳೆ. ಅಂಗಾಂಗಗಳು ಸೂಕ್ಷ್ಮವಾಗಿರುತ್ತವೆ. ಅವಳಿಗೆ ಅಗತ್ಯವಾಗಿ ವಿಶ್ರಾಂತಿ ಹಾಗೂ ಚೇತರಿಸಿಕೊಳ್ಳಲು ಸಾಕಷ್ಟು ಕಾಲಾವಕಾಶ ಬೇಕಾಗುತ್ತದೆ. ಇವೆಲ್ಲವೂ ಪ್ರಜ್ಞಾ ಪೂರ್ವಕವಾಗಿಯೇ ಸೂತಕದ ಅವಧಿಯಲ್ಲಿ ಜರುಗುತ್ತಿರುತ್ತದೆ.

ಸೂತಕದ ಮನೆಯವರು ಸಾಮಾನ್ಯವಾಗಿ ಸೂತಕದ ದಿನಗಳಲ್ಲಿ ಯಾವ ಹಬ್ಬ ಮತ್ತು ಆಚರಣೆಯನ್ನು ನಡೆಸುವಂತಿಲ್ಲ. ಅಲ್ಲದೆ ಸೂತಕದ ಅವಧಿಯಲ್ಲಿ ಸೂತಕದ ಮನೆಯಲ್ಲಿ ಯಾವ ಹಬ್ಬ ಆಚರಣೆಗಳನ್ನೂ ನಡೆಸುವಂತಿಲ್ಲ. ಇದರಿಂದಾಗಿ ನೆಂಟರಿಷ್ಟರ ಹಾವಳಿ ಇರುವುದಿಲ್ಲ. 'ಮೈಲಿಗೆ' ಎಂಬ ಭಾವನೆಯಿಂದ ಈ ಸಂಭ್ರಮಗಳು ನಿಷಿದ್ಧವಾಗಿರುತ್ತವೆ. ದೈಹಿಕವಾಗಿ ದುರ್ಬಲಳಾಗಿರುವ ಬಾಣಂತಿ ಹೆಚ್ಚು ಶ್ರಮದ ಕಾರ್ಯಗಳಲ್ಲಿ ತೊಡಗದಿರಲೆಂದು ಈ ನಿಷಿದ್ಧಗಳು ಜಾರಿಗೆ ಬಂದಂತೆ ಕಾಣುತ್ತವೆ.

ಹುಡುಗಿ ಮೈನೆರೆದಾಗಿನ ಸೂತಕವನ್ನು ಬುಡಕಟ್ಟು ಕ್ರೈಸ್ತರು ಶುಭಸೂತಕ ಎಂದು ಪರಿಗಣಿಸಲಾಗಿದೆ. ಅವಳನ್ನು ಕೂಡ ಬಾಣಂತಿಯಂತೆಯೇ ಶುಶ್ರೂಷೆ ಮಾಡುತ್ತಾರೆ. ಹೆಣ್ಣು

ಮೈನೆರೆದಾಗ ಸಂತಾನವನ್ನು ಪಡೆಯುವ ಅರ್ಹತೆಯನ್ನು ಗಳಿಸಿದಳೆಂದು ಭಾವಿಸುವುದಲ್ಲದೆ ಆ ಅವಧಿಯಲ್ಲಿ ಆಕೆಗೆ ಸೊಂಟಕ್ಕೆ ಶಕ್ತಿ ನೀಡುವಂತಹ ಸತ್ವಯವಾದ ತಿನಿಸುಗಳನ್ನು ಕೊಡುವುದು ವಿಶೇಷ. ಸೂತಕ ಕಳೆಯುವ ತನಕ ಆಕೆಯ ವಿಶೇಷ ಗಮನ ನೀಡುವರು.

ಸಾವಿನಿಂದಾಗುವ ಸೂತಕವನ್ನು ಅಶುಭ ಸೂತಕವೆಂದು ಪರಿಗಣಿಸುವ ಇಲ್ಲಿನ ಕ್ರೈಸ್ತರಲ್ಲಿ ಕಪ್ಪುಬಣ್ಣ ಶೋಕಾಚರಣೆಯ ಸಂಕೇತ. ಸಾವಿನಸುದ್ದಿಯನ್ನು ಇತರರಿಗೆ ಪತ್ರದ ಮೂಲಕ ತಿಳಿಸುವಾಗ ಪತ್ರದ ನಾಲ್ಕು ಮೂಲೆಗಳಿಗೂ ಕಪ್ಪು ಹಚ್ಚಿ ಕಳುಹಿಸುತ್ತಿದ್ದರು. ಅಂತೆಯೇ ನಲವತ್ತು ದಿನಗಳ ಕಾಲವನ್ನು ಶೋಕಾಚರಣೆಯ ಕಾಲವೆಂದು ಪರಿಗಣಿಸುವರು. ಬುಡಕಟ್ಟು ಕ್ರೈಸ್ತರು ಈ ಶೋಕಾಚರಣೆಯ ಅವಧಿಯನ್ನು ಸೂತಕವೆಂದು ಪರಿಗಣಿಸುವುದು ವಿಶೇಷ "ಶೋಕಾವಧಿಯ ಮುಕ್ತಾಯವನ್ನು ಸಹ ಸಾಮಾನ್ಯವಾಗಿ ಒಂದು ವಿಶೇಷ ಸಮಾರಂಭವಾಗಿ ಆಚರಿಸಲಾಗುತ್ತದೆ (ಜಾನಪದ ಗಂಗೋತ್ರಿ 1989:14). ಈ ವಿಶೇಷ ಸಮಾರಂಭವನ್ನು ಬುಡಕಟ್ಟು ಕ್ರೈಸ್ತರು 'ಮೋಕ್ಷದೀಪ' ಎಂದು ಕರೆಯುತ್ತಾರೆ. ಸತ್ತವರ ಬಗೆಗೆ ಕ್ರೈಸ್ತರಿಗೆ ಪೂಜ್ಯ ಭಾವನೆಯಿದೆ. ಅವರು ದೇವರಿಗೆ ಸಮೀಪವಾಗಿದ್ದು ತಮ್ಮ ಶ್ರೇಯಸ್ಸಿಗಾಗಿ ಪ್ರಾರ್ಥಿಸುತ್ತಾರೆ ಎಂಬ ನಂಬಿಕೆ ಹೊಂದಿದ್ದಾರೆ. ನಲವತ್ತು ದಿನಗಳ ಕಾಲ ಸತ್ತವರ ಮನೆಯಲ್ಲಿ ಮೃತರ ಆತ್ಮ ಸುತ್ತಾಡುತ್ತಿರುತ್ತದೆ ಎಂಬುದು ಜನಪದ ನಂಬಿಕೆ. ಆದ್ದರಿಂದಲೇ ಮೂರನೇ ದಿನ ಹಚ್ಚಿದ ದೀಪವು ನಲವತ್ತು ದಿನಗಳ ಕಾಲ ಆರಿಹೋಗದಂತೆ ನೋಡಿಕೊಳ್ಳುತ್ತಾರೆ. ನಲವತ್ತನೆಯ ದಿನದ ಪೂಜೆಯಂದು ಅವರು ಮೋಕ್ಷಕ್ಕೆ ಹೋಗುತ್ತಾರೆ ಎಂಬ ನಂಬಿಕೆ ಈ ಬುಡಕಟ್ಟು ಕ್ರೈಸ್ತರಲ್ಲಿದೆ.

6.1.2 **ಸೋದರ ಮಾವನ ಪಾತ್ರ** ಬುಡಕಟ್ಟು ಕ್ರೈಸ್ತರಲ್ಲಿ ರೂಢಿಯಲ್ಲಿರುವ ಸಾಮಾಜಿಕ ಸಂಪ್ರದಾಯಗಳಲ್ಲಿ ಸೋದರಮಾವನಿಗೆ ಪ್ರಮುಖಸ್ಥಾನವನ್ನು ನೀಡಲಾಗಿದೆ. ಇದಕ್ಕೆ ಮೂಲಕಾರಣ ಹಿಂದೆ ಇವರು ಪಾಲಿಸುತ್ತದ್ದ ಹಿಂದೂಧರ್ಮದ ಆಚರಣೆಗಳೆಂದು ಊಹಿಸಬಹುದಾಗಿದೆ. ಹಿಂದುಗಳಲ್ಲಿ ಸೋದರಮಾವನನ್ನೋ ಅಥವಾ ಸೋದರಮಾವನ ಮಕ್ಕಳನ್ನೋ ಮದುವೆಯಾಗುವ ಪದ್ಧತಿ ಇದೆ. ಇದನ್ನು ಸ್ಪಷ್ಟೀಕರಿಸಲು ಇಲ್ಲಿ ಎರಡು ತ್ರಿಪದಿಗಳನ್ನು ಉದಾಹರಿಸಿದೆ.

ಅಣ್ಣನ ಮನೀಗ ಹೆಣ್ಣುಬೇಡಲು ಹೋದೆ
ಕನ್ನೂಡಿ ನೀಡಿ ಮರಿಮಾಡಿ ಅತ್ತೀಗೆ
ಕಣ್ಣ ಚೆವುಟ್ಯಾಳ ಪುರುಷಾಗ॥

ಸಣ್ಣ ಶ್ಯಾವಿಗಿ ಒಲ್ಲ ಚೆನ್ನ ಸಕ್ಕರಿ ಒಲ್ಲ

ಹೆಣ್ಣೆಂಬ ಸಬುದ ಬಿಡವೊಲ್ಲ ನನತಮ್ಮ
ಹೆಣ್ಣು ಕೊಡುತ್ತೀನಿ ಉಣ್ಣೇಳೋ
(ಗದ್ದಗೀಮಠ: 1962:114)

ಮೊದಲನೇ ಪದ್ಯದಲ್ಲಿ ಅಣ್ಣನನ್ನು ಬೀಗನಾಗಿ ಕರೆದರೆ, ಎರಡನೇ ಪದ್ಯದಲ್ಲಿ ತಮ್ಮನನ್ನು ಅಳಿಯನಾಗಿ ಪರಿಗಣಿಸಲಾಗಿದೆ. ಈ ಬಗೆಯ ರಕ್ತ ಸಂಬಂಧ ರೂಢಿಯಲ್ಲಿದ್ದಿರಬೇಕು. ಆದರೆ ಕ್ರೈಸ್ತರಲ್ಲಿ ಇಂತಹ ಸಂಬಂಧಗಳಲ್ಲಿ ಮದುವೆ ನಿಷಿದ್ಧ. ಅನಿವಾರ್ಯವಾಗಿ ಮದುವೆ ಆಗಲೇಬೇಕಾದ ಪ್ರಸಂಗ ಒದಗಿಬಂದಲ್ಲಿ ಧರ್ಮಸಭೆ (Church) ವಿಧಿಸುವ 'ದಂಡ'ವನ್ನು ತೆತ್ತು ಮದುವೆ ಮಾಡುವುದೂ ಉಂಟು. ಹೆಣ್ಣು ಕೊಡುವ ಒಂದು ಸಂಬಂಧವನ್ನು ಬಿಟ್ಟು ಉಳಿದೆಲ್ಲಾ ಸಂಪ್ರದಾಯಗಳಲ್ಲಿಯೂ ಸೋದರಮಾವನಿಗೆ ಪ್ರಮುಖ ಸ್ಥಾನವಿದೆ.

ಅಕ್ಕತಂಗಿಯರಿಗೆ ಹುಟ್ಟಿದ ಮಗುವಿಗೆ ಕಾಲ್ಗೆಜ್ಜೆ, ಉಡಿದಾರ ತಂದು ಹಾಕುವುದು, ಸೋದರಿಯ ಮಗಳು ಮೈನೆರೆದಾಗ 'ಗುಡ್ಲು' ಹಾಕುವುದು, ಮದುವೆಯಲ್ಲಿ ವರನ ಕಾಲಿಗೆ ಕಾಲ್ಮಿಂಡು ತೊಡಿಸುವುದು, ವಧುವನ್ನು ಎತ್ತಿ ತೆರೆಯ ಹಿಂದಿನ ವರನ ತಲೆಯಮೇಲೆ ಅಕ್ಷತೆ ಹಾಕಿಸುವುದು ಇತ್ಯಾದಿ ಕಾರ್ಯಗಳನ್ನು ಸೋದರಮಾವನೇ ಮಾಡುತ್ತಾನೆ. ಅಲ್ಲದೆ ಇಲ್ಲಿನ ಕ್ರೈಸ್ತರಲ್ಲಿ ಪುರುಷಪ್ರಧಾನ ಕುಟುಂಬಗಳಿದ್ದು, ಸ್ತ್ರೀಯು ಪುರುಷನಿಗೆ ಅಧೀನಳಾಗಿರುತ್ತಾಳೆ. ತವರಿನ ಪ್ರತಿನಿಧಿಯಾಗಿ ಆಕೆಯ ಸೋದರನು ಪ್ರಮುಖ ಕಾರ್ಯಗಳಲ್ಲಿ ಪಾತ್ರವಹಿಸುವುದರಿಂದ ಆಕೆಯನ್ನೂ ಸಂತೋಷಪಡಿಸಿದಂತಾಗುತ್ತದೆ. ಕೊಂಕಣಿ ಕ್ರೈಸ್ತರಲ್ಲಿ ಸೋದರಮಾವನೇ ಮದುವೆಯ ಖರ್ಚನ್ನೆಲ್ಲಾ ಭರಿಸಿಕೊಂಡು ಮದುವೆಮಾಡಿಕೊಡುವ ಸಂಪ್ರದಾಯ ಇತ್ತಂತೆ. ಆದರೆ ಇಂದಿನ ಪರಿಸ್ಥಿತಿಯಲ್ಲಿ ಅದು ಸಾಧ್ಯವಾಗದ ಕೆಲಸವಾದರೂ ಮದುವೆಗೆ ಮೂರು ದಿನಗಳಿರುವಾಗ ಏಳು ದೊಡ್ಡದೊಡ್ಡ ಮಂಕರಿಗಳ ತುಂಬಾ ತರಕಾರಿಗಳನ್ನು ಹೊತ್ತು ತರುವ ಸಂಪ್ರದಾಯ ಇಂದಿಗೂ ಉಳಿದುಕೊಂಡಿದೆ. ಇದರಿಂದ ಮದುವೆ ಮನೆಯವರಿಗೆ ಖರ್ಚು ಸ್ವಲ್ಪ ಕಡಿಮೆಯಾಗುತ್ತದೆ.

6.1.3 **ಮೈನೆರೆದ ಹುಡುಗಿಗೆ ಆರತಿ ಬೆಳಗುವುದು** ಈ ಪದ್ಧತಿಯು ಇಲ್ಲಿನ ಹಳ್ಳಿಗಳಲ್ಲಿ ನೆಲಸಿರುವ ಬುಡಕಟ್ಟು ಕ್ರೈಸ್ತರಲ್ಲಿ ರೂಢಿಯಲ್ಲಿದೆ. ಇದನ್ನು ಹೆಣ್ಣಿನ ಜೀವನದಲ್ಲಾಗುವ ಪ್ರಥಮ ಶುಭಕಾರ್ಯವೆಂದು ಪರಿಗಣಿಸಿ ಮದುವೆಯಷ್ಟೇ ಸಂಭ್ರಮದಿಂದ ಆಚರಿಸುವುದುಂಟು. ಹಳ್ಳಿಗಳಲ್ಲಿ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಹೆಚ್ಚಾಗಿ ಪ್ರೋತ್ಸಾಹವಿಲ್ಲ. ಇತರ ಧರ್ಮೀಯರಂತೆಯೇ ಕ್ರೈಸ್ತರು ಕೂಡ ತಮ್ಮ ಹೆಣ್ಣುಮಕ್ಕಳನ್ನು ಮೈನೆರೆದ ಮೇಲೆ ಶಾಲೆಗೆ ಕಳುಹಿಸುವುದಿಲ್ಲ. ಮನೆಯ ಮುಂದೆ ಹಸಿರು ಚಪ್ಪರ ಹಾಕಿಸಿ, ಮೈನೆರೆದ ಹುಡುಗಿಗೆ

ಒಡವೆ, ವಸ್ತ್ರಗಳನ್ನು ತೊಡಿಸಿ ಕುರ್ಚಿಯ ಮೇಲೆ ಕೂರಿಸಿ ಆರತಿ ಬೆಳಗುತ್ತಾರೆ. ಆಗ ವಾಡಿಕೆಯಂತೆ ನೆಂಟರಿಷ್ಟರೂ, ನೆರೆಹೊರೆಯವರೂ ಹುಡುಗಿಗೆ ಉಡುಗೊರೆ ಗಳನ್ನು ಕೊಡುತ್ತಾರೆ.

ವರನನ್ನು ಗೊತ್ತುಪಡಿಸುವುದೇ ಈ ಸಮಾರಂಭದ ಮುಖ್ಯ ಉದ್ದೇಶವಾಗಿತ್ತು. ಇಂಥವರ ಮನೆಯಲ್ಲಿ ಮೈನೆರೆದ ಹೆಣ್ಣು ಮದುವೆಗೆ ಸಿದ್ಧಳಾಗಿದ್ದಾಳೆಂಬುದನ್ನು ಸಮಾಜಕ್ಕೆ ತಿಳಿಸುವ ಸಲುವಾಗಿ ಈ ಪದ್ಧತಿ ರೂಢಿಯಲ್ಲಿತ್ತು. ಆದರೆ ಇತ್ತೀಚೆಗೆ ಈ ಪದ್ಧತಿ ಕಣ್ಮರೆಯಾಗುತ್ತಿದೆ. ಕಾರಣ ಹಳ್ಳಿಗಳಲ್ಲಿ ನೆಲೆಸಿರುವವರ ಹೆಣ್ಣುಮಕ್ಕಳೂ ವಿದ್ಯಾಭ್ಯಾಸವನ್ನು ಮುಂದುವರೆಸುತ್ತಿದ್ದಾರೆ. ಮೈನೆರೆದ ವಿಷಯ ಯಾರಿಗೂ ತಿಳಿಯದಂತಿರಲಿ, ಹೆಣ್ಣು ಮಕ್ಕಳಲ್ಲೂ ಸಂಕೋಚದ ಸ್ವಭಾವ ಬೆಳೆಯದಿರಲೆಂದು ಇದನ್ನು ಗೌಪ್ಯವಾಗಿಡಲು ಪ್ರಯತ್ನಿಸುತ್ತಿದ್ದಾರೆ. ಆದರೆ ಈ ಸಂಪ್ರದಾಯ ಸಂಪೂರ್ಣ ಅಳಿಸಿ ಹೋಗಿಲ್ಲ.

6.1.4 **ತೆರನೀಡುವ ಪದ್ಧತಿ** ತೆರನೀಡುವ ಪದ್ಧತಿ ಈಗ ರೂಢಿಯಲ್ಲಿಲ್ಲವಾದರೂ ಕನ್ನಡ ಕ್ರೈಸ್ತರಲ್ಲಿ ಒಂದು ಸಂಪ್ರದಾಯವಾಗಿ ರೂಢಿಯಲ್ಲಿದೆ. ತೆರ ಅಥವಾ ಕನ್ಯಾಶುಲ್ಕ ಎರಡು ಕಾರಣಗಳಿಂದ ರೂಢಿಯಲ್ಲಿ ಬಂದಿರುವ ಸಾಧ್ಯತೆ ಇದೆ. ಹೆಣ್ಣು ಮನೆಯ ಲಕ್ಷ್ಮಿ ಎಂಬ ಭಾವನೆ ಹಿಂದೂಗಳಲ್ಲಿದೆ. ಆಕೆಯನ್ನು ತಾವು ಪಡೆದು ಮನೆ ಬರಿದಾಗಿಸಬಾರದೆಂಬ ಉದ್ದೇಶದಿಂದ 'ತೆರ' ಕೊಡುವ ಪದ್ಧತಿ ರೂಢಿಗೆ ಬಂದಿದೆ. ಅತ್ತೆಯ ಮನೆಯ ಹಂಗು ಬೇಡವೆಂಬಂತೆ ಹೆಣ್ಣನ್ನು ಪಡೆದು ಹಣ ನೀಡುವುದನ್ನು ರೂಢಿಸಿ ಕೊಂಡಿದ್ದಾರೆ. ಕನ್ನಡ ಕ್ರೈಸ್ತರ ಸಂಪ್ರದಾಯದ 'ತೆರ' ಕೊಡುವ ಪದ್ಧತಿ ಎರಡನೇ ಗುಂಪಿಗೆ ಸೇರುತ್ತದೆ. ಏಕೆಂದರೆ ಹದಿನೈದು ವರಹಗಳ ಮೇಲೆ 'ಹಗ್ಗದ ಕಾಸು' ಎಂದೂ ಒಂದು ಕಾಸನ್ನು ನೀಡುತ್ತಾರೆ. ತಾವು ಹಸುವನ್ನು ಕೊಂಡು ಅದನ್ನು ಕಟ್ಟಿರುವ ಹಗ್ಗದ ಕಾಸನ್ನೂ ನೀಡಿದ್ದೇವೆಂಬ ಉದ್ದೇಶ ಇಲ್ಲಿ ಸ್ಪಷ್ಟವಾಗಿದೆ.ಈ ಪದ್ದತಿಯು ಹೆಣ್ಣನ್ನು ವಸ್ತು ಅಥವಾ ಪ್ರಾಣಿಯಂತೆ ಪರಿಗಣಿಸಿರುವುದು ಪುರುಷಪ್ರಧಾನ ವ್ಯವಸ್ಥೆ ಮತ್ತು ಆತನ ದಬ್ಬಾಳಿಕೆ ಗುಣ ವನ್ನು ಸೂಚಿಸುತ್ತದೆ.

ಕನ್ಯಾಶುಲ್ಕ ಯೆಹೂದಿ ಸಂಸ್ಕೃತಿಯಲ್ಲಿಯೂ ಕಂಡುಬಂದಿರುವ ಬೈಬಲಿನ ಹಳೆಒಡಂಬಡಿಕೆಯಲ್ಲಿ ಕಾಣಸಿಗುತ್ತದೆ. ಮುಸ್ಲಿಮರಲ್ಲಿ 'ಮಹರ್' ನೀಡುವ ಪದ್ಧತಿ ಇಂದಿಗೂ ಇದೆ (ಟಿ.ಎಫ್. ದೇಸಾಯಿ:1992:126). ವರನ ಆರ್ಥಿಕ ಸ್ಥಿತಿಗತಿಯನ್ನು ಲಕ್ಷ್ಯದಲ್ಲಿಟ್ಟು 'ಮಹರ್' ಹಣವನ್ನು ನಿರ್ಧರಿಸಲಾಗುತ್ತದೆ.

ಹಿಂದೂ ಒಕ್ಕಲಿಗರಲ್ಲಿ ರೂಢಿಯಲ್ಲಿದ್ದ 'ತೆರ' ಪದ್ಧತಿ (ದೇಜಗೌ: 1976:380) ಮತಾಂತರ ಹೊಂದಿದ ಕ್ರೈಸ್ತರಲ್ಲಿ ಮುಂದುವರಿದು ಬಂದಿರುವ ಪದ್ಧತಿಯಾಗಿದೆ. ಅಲ್ಲದೆ

ತೆರ ನೀಡುವಾಗ ಅಲ್ಲಿ ನೆರೆದಿರುವ ಜನರಿಗೆಲ್ಲ ತಿಳಿಯುವಂತೆ ಕಂಚಿನ ತಟ್ಟೆಯಲ್ಲಿ 'ಒಂದು ವರಹಾ ಎರಡು ವರಹಾ' ಎಂದು ಶಬ್ದವಾಗುವಂತೆ ಹಾಕುತ್ತಾರೆ. ಇದು ಗಂಡಿನ ಮನೆಯವರ ಪ್ರತಿಷ್ಠೆಯ ಪ್ರಶ್ನೆಯಾಗುತ್ತದೆ. ಮೈಸೂರಿನ ಕನ್ನಡ ಕ್ರೈಸ್ತರಲ್ಲಿ ಮಾತ್ರ ಇದು ರೂಢಿಯಲ್ಲಿದೆ. ಅದರೆ ಇಲ್ಲಿನ ಕ್ರೈಸ್ತರಲ್ಲಿ ವರದಕ್ಷಿಣೆ ಪದ್ಧತಿ ಕಂಡು ಬರುವುದಿಲ್ಲ, ಬದಲಾಗಿ ಬಳುವಳಿ ಕೊಡಬೇಕಾದ್ದು ಕಡ್ಡಾಯ. ಮನೆಬಳಕೆಯ ಎಲ್ಲಾ ಸಲಕರಣೆಗಳು, ದೀಪದಕಂಬ ಧೂಪಾರತಿ ಮಾಡುವ ಸಲಕರಣೆಗಳು ಸೇರು,ಪಾವು, (ಅಳತೆ ಮಾಪನಗಳು)ಸೂಜಿದಾರ, ಇತ್ಯಾದಿ ವಸ್ತುಗಳೊಂದಿಗೆ ಬಟ್ಟೆಬರೆಗಳನ್ನಿಟ್ಟು ಕೊಳ್ಳುವ ಪೆಟ್ಟಿಗೆ, ಹಾಸಿಗೆ, ಹೊದಿಕೆ ಇವಿಷ್ಟನ್ನೂ ಕೊಡಬೇಕು. ಇದರಲ್ಲೇನಾದರೂ ಕೊರತೆಯಾದರೆ ಜಗಳಗಳೇ ನಡೆಯುವುದುಂಟು. ಇತ್ತೀಚೆಗೆ ಇವುಗಳಲ್ಲಿ ಸ್ವಲ್ಪ ಮಾರ್ಪಾಟಾಗಿದೆ. ಕಾಲಕ್ಕೆ ತಕ್ಕ ಬದಲಾವಣೆಯಾಗಿದ್ದು 'ಪೆಟ್ಟಿಗೆ'ಯ ಬದಲಿಗೆ ಗೋದ್ರೇಜ್ ಬೀರುಗಳನ್ನು ಕೊಡುತ್ತಾರೆ. ಇದು ಇಂದಿಗೂ ರೂಢಿಯಲ್ಲಿರುವ ಪದ್ಧತಿ. ತಮಿಳರಲ್ಲಿಯೂ ಈ ಸಂಪ್ರದಾಯವಿದೆ. ಇದನ್ನು 'ಸೀರ್' ಅಥವಾ 'ಸೀದನಂ' ಎಂದು ಹೇಳುತ್ತಾರೆ. 'ಪೌನು' ಲೆಕ್ಕದಲ್ಲಿ ವಧುವಿಗೆ ಚಿನ್ನವನ್ನು ಕೊಡುತ್ತಾರೆ. ಆದರೆ ಕನ್ನಡ ಕ್ರೈಸ್ತರಲ್ಲಿ ಹೆಣ್ಣಿಗೆ ಹಾಕಬೇಕಾದ ಒಡವೆಗಳನ್ನೆಲ್ಲಾ ಗಂಡಿನ ಮನೆಯವರೇ ತರುತ್ತಾರೆ. ಹಿಂದೆಯೂ ಕ್ರೈಸ್ತ ಸ್ತ್ರೀಗೆ ಉತ್ತಮ ಸ್ಥಾನವಿತ್ತೆಂಬುದು ಕ್ರೈಸ್ತರ ಈ ಸಂಪ್ರದಾಯದಿಂದ ತಿಳಿದುಬರುತ್ತದೆ.

6.1.5 **ಹೆಣ್ಣು ಕೊಡ್ತೀಯೋ ಹೊನ್ನು ಕೊಡ್ತೀಯೋ** ನವದಂಪತಿಗಳು ಚರ್ಚಿನಿಂದ ಮನೆಗೆ ಬಂದಾಗ ಹೆಣ್ಣಿನ ಸೋದರ ಮುಂಬಾಲಿಗೆ ಒನಕೆಯನ್ನು ಅಡ್ಡವಾಗಿಟ್ಟು 'ಹೆಣ್ಣು ಕೊಡ್ತಿಯೋ ಹೊನ್ನು ಕೊಡ್ತಿಯೋ' ಎಂದು ಕೇಳುತ್ತಾನೆ. ಇದು ಸಂತಾನಾಭಿಲಾಷೆಯನ್ನು ಸೂಚಿಸುತ್ತದೆ. ಸಂತಾನೋತ್ಪತ್ತಿ ಮದುವೆಯ ಉದ್ದೇಶಗಳಲ್ಲಿ ಒಂದು. ಇದನ್ನು ಸೋದರನೇ ಕೇಳುತ್ತಾನೆಂದ ಮೇಲೆ ಸೋದರ ಸಂಬಂಧ ವಿವಾಹ ರೂಢಿಯಲ್ಲಿತ್ತೆಂದು ಸ್ಪಷ್ಟವಾಗುತ್ತದೆ. ಆ ಸಂಪ್ರದಾಯವನ್ನು ಮೋಜಿಗಾಗಿ ಇಂದಿಗೂ ಉಳಿಸಿಕೊಂಡು ಬಂದಿದ್ದಾರೆ. ಸಮರ್ಪಕ ಉತ್ತರ ನೀಡುವತನಕ ಹೆಣ್ಣುಗಂಡನ್ನು ಮನೆಯೊಳಗೆ ಬಿಡುವುದಿಲ್ಲ. ಹೆಣ್ಣು ನಾಚುತ್ತಾ ಬಾಯಿ ಬಿಡದೆ ನಿಂತಿದ್ದರೆ, ಗಂಡ ಕೋಟಿನ ಜೇಬಿನಿಂದ ನೋಟನ್ನು ತೆಗೆದುಕೊಟ್ಟು ದಾರಿ ಬಿಡಿಸಬೇಕಾಗುತ್ತದೆ. ಮದುವೆಯ ಸಂಭ್ರಮದ ನಡುವೆ ನಗುವನ್ನೆಬ್ಬಿಸಲು ಇಂತಹ ಸಂಪ್ರದಾಯಗಳು ರೂಢಿಯಲ್ಲಿವೆ.

ಬುಡಕಟ್ಟು ಕ್ರೈಸ್ತರಲ್ಲಿ ಗಂಡಿನ ಮನೆಯವರು ಹೆಣ್ಣಿನ ಮನೆಗೆ ಹೋದಾಗ ಚಪ್ಪರದಲ್ಲೇ ಎದುರಾಗುವ ಹೆಣ್ಣಿನ ಕಡೆಯವರು ಚಿನ್ನದ ಒಡವೆ, ಬಟ್ಟೆಗಳನ್ನು ನೋಡಿ ಹಾಸ್ಯ ಮಾಡುತ್ತ 'ನೀವು ಇಷ್ಟೆಲ್ಲಾ ವಸ್ತುಗಳನ್ನು ತರುವುದು ತಿಳಿದಿದ್ದರೆ ಗಾಡಿ ಕಳುಹಿಸುತ್ತಿದ್ದೆವು' ಎಂದು ಹೇಳುವುದು ರೂಢಿ. ಇಂತಹ ವಿನೋದಾತ್ಮಕ ಹಾಡುಗಳು

ಕೊಂಕಣಿ ಕ್ರೈಸ್ತರ ಸಂಪ್ರದಾಯದಲ್ಲಿದೆ. ವಧುವನ್ನು ವರನ ಮನೆಗೆ ಕರೆದೊಯ್ದಾಗ ವಧುವಿನ ಕಡೆಯವರು ಚಪ್ಪರದಲ್ಲೇ ನಿಂತು,

ಘರ್ಜೆ ಘರ್ಕಾನಿ ಆನಿ
ಭ್ಯಾರ ಸರ್ಗೆ ಎಜ್ಮಾನಿ
ಪೂತ ಸೂನ್ ಆಯ್ಯಾಂತ
ವ್ಯೋಡಾ ದಬಾಜಾನಿ

ಎಂದು ಹಾಡುತ್ತ ಮನೆಯ ಯಜಮಾನಿಯೇ ತನ್ನ ಮಗಸೊಸೆಯನ್ನು ಒಳಗೆ ಕರೆದೊಯ್ಯುವಂತೆ ಮಾಡುತ್ತಾರೆ.

ವಧು ವರನ ನಡುವಿನ ಬಿಗುಮಾನವನ್ನು ಹೋಗಲಾಡಿಸಿ ಸ್ವಲ್ಪ ಸಲಿಗೆ ಹುಟ್ಟಿಸಲು ಹಿಂದೂ ಸಂಪ್ರದಾಯದಲ್ಲಿ ಕಂಡು ಬರುತ್ತದೆ. "ಮದುಮಕ್ಕಳಾಟ, ಅರಿಷಿಣ, ಚೆಂಡು, ಅಡಿಕೆ, ಅಕ್ಕಿ, ಉಂಗುರ, ಕೂಸಾಡಿಸುವುದು ಇವೆಲ್ಲಾ ಆಟಗಳಾಗುತ್ತವೆ" (ನಿಂಗಣ್ಣ ಸಣ್ಣಕ್ಕಿ: 1993:49). ಇಂತಹ ಒಂದೆರಡಾಟಗಳನ್ನಾಡಿಸುವುದು ಬುಡಕಟ್ಟು ಕ್ರೈಸ್ತರ ಸಂಪ್ರದಾಯಗಳಲ್ಲೂ ಕಂಡುಬರುತ್ತದೆ.

ಆರತಕ್ಷತೆ ಮುಗಿಯುತ್ತಿದ್ದಂತೆ ಮದುಮಕ್ಕಳನ್ನು ಹೂವಿನ ದಂಡೆಯಿಂದ ಮಾಡಿದ ಚೆಂಡಿನಾಟ ಆಡಿಸುವುದು, ಮೈಸೂರಿನ ಕನ್ನಡ ಕ್ರೈಸ್ತರಲ್ಲಿ ರೂಢಿಯಲ್ಲಿದೆ. ಆದರೇ ತಮಿಳು ಕ್ರೈಸ್ತರು ವಧುವರರನ್ನು ಚಾಪೆಯ ಮೇಲೆ ಕೂರಿಸಿ ನೆಲದಮೇಲೆ ಅರಿಸಿನ ನೀರು ತುಂಬಿದ ಒಂದು ತಂಬಿಗೆಯನ್ನಿಟ್ಟು ಅದರಲ್ಲಿ ಒಂದು ಚಿನ್ನದುಂಗುರವನ್ನು ಹಾಕುತ್ತಾರೆ. ವಧುವರರು ಒಟ್ಟಿಗೆ ತಂಬಿಗೆಯಲ್ಲಿ ಕೈಹಾಕಿ ಉಂಗುರವನ್ನು ತೆಗೆಯಬೇಕು. ಯಾರ ಕೈಗೆ ಸಿಗುತ್ತೋ ಅವರಿಗೇ ಆ ಉಂಗುರ. ಮೈಸೂರಿನ ಕೊಂಕಣಿ ಕ್ರೈಸ್ತರು ವಧುವರರನ್ನು ಒಟ್ಟಿಗೆ ಕೂರಿಸಿ ಹಳಗುಳಿಮನೆ ಆಟ(ಚನ್ನೆ) ಆಡಿಸುತ್ತಾರೆ. ಆ ಸಂದರ್ಭದಲ್ಲಿ ಹಾಡುವ ಹಾಡೊಂದು ಹೀಗಿದೆ.

ವ್ಹೊಕಾಲ್ ಆನಿ ವ್ಹೊರಿಕೆ
ಖಿಳ್ತಿತ ಮರ್ಪೊಳ್ಯಾನಿಂ
ತಾಂಕಾಂ ಚಾಂದ್ಲಾ ಪಾಗ
ದೊಡ್ತ್ಯಾ ಸರ್ಪೊಳ್ಯಾನಿಂ

ಈ ಎಲ್ಲ ಮೋಜಿನ ಕಾರ್ಯಕ್ರಮಗಳಿಂದ ಅಪರಿಚಿತರಾಗಿದ್ದ ಹೆಣ್ಣುಗಂಡುಗಳ ನಡುವೆ ನಾಚಿಕೆ ದೂರವಾಗಿ ಸಲುಗೆ ಏರ್ಪಡುತ್ತದೆ.

6.1.6 **ಮದುವೆಯ ಆರತಕ್ಷತೆ** ಮೈಸೂರು ಜಿಲ್ಲೆಯ ಹಳ್ಳಿಗಳಲ್ಲಿ ನೆಲೆಸಿರುವ ಕ್ರೈಸ್ತರು ಮದುವೆಯ ಆರತಕ್ಷತೆಗೆ ಅಮಂತ್ರಿಸಿದವರೆಲ್ಲರೂ ಬಂದೇ ತೀರಬೇಕೆಂಬ

ನಿಯಮವನ್ನಿಟ್ಟುಕೊಂಡಿದ್ದಾರೆ. ಅತಿಥಿಗಳು ಮದುವೆಗೆ ಕೊಡುವ ಮುಯ್ಯಿ ಕೊಡುವಾಗ ಅದನ್ನು ಪಟ್ಟಿಮಾಡುವುದು ರೂಢಿ. ಏಕೆಂದರೆ ಮುಯ್ಯಿ ನೀಡುವವರ ಮನೆಯಲ್ಲಿ ಶುಭಕಾರ್ಯಗಳೇನಾದರೂ ನಡೆದಾಗ ತಾವೂ ತಪ್ಪದೆ ಹಾಜರಿದ್ದು ಮುಯ್ಯಿ ನೀಡುತ್ತಾರೆ. ಹಳ್ಳಿಗಳಲ್ಲಿ ನೆಲಸಿರುವವರ ಸಂಖ್ಯೆ ಕಡಿಮೆ ಇರುವುದರಿಂದ ಗೈರುಹಾಜರಾದವರು ಯಾರೆಂಬುದು ಸುಲಭವಾಗಿ ತಿಳಿಯುತ್ತದೆ. ಇದು ಇವರ ಸಹಕಾರ ಜೀವನವನ್ನು ತಿಳಿಸುತ್ತದೆ.

6.1.7 **ಕೌಟುಂಬಿಕ ವ್ಯವಸ್ಥೆ** ಪ್ರತಿಯೊಂದು ಕುಟುಂಬದ ಸ್ವಾಸ್ಥ್ಯ ಕುಟುಂಬ ಜೀವನವನ್ನವಲಂಬಿಸಿದೆ. ಮೈಸೂರು ಜಿಲ್ಲೆಯ ಕ್ರೈಸ್ತರ ಕುಟುಂಬಗಳಲ್ಲಿ ತಂದೆಯೇ ಕುಟುಂಬದ ಯಜಮಾನನಾಗಿರುತ್ತಾನೆ. ಇಲ್ಲಿನ ಹಳ್ಳಿಗಳಲ್ಲಿ ನೆಲಸಿರುವವರು ಬಹುತೇಕ ಅವಿಭಕ್ತ ಕುಟುಂಬಕ್ಕೆ ಸೇರಿದವರು. ಕಾರಣ ವ್ಯವಸಾಯವೇ ಇವರ ಮೂಲವೃತ್ತಿ. ಪಾರಂಪಾರಿಕವಾಗಿ ವ್ಯವಸಾಯವನ್ನೇ ಮುಂದುವರೆಸಿ ಬಂದಿದ್ದಾರೆಂಬುದು ಒಂದು ಕಾರಣವಾದರೆ, ಅದಕ್ಕೆ ಪೂರಕವಾಗಿ ಬೇರೆ ಉದ್ಯೋಗಗಳನ್ನು ಅವಲಂಬಿಸಿ ಕುಟುಂಬದಿಂದ ದೂರವಾಗದೆ ಉಳಿದಿರುವರೆಂಬುದು ಮತ್ತೊಂದು ಕಾರಣವಾಗಿದೆ. ತಂದೆಯ ನಂತರ ಮಗ ಮನೆಯ ಯಜಮಾನಿಕೆಯನ್ನು ಹೊರುವುದರಿಂದ ತಂದೆ ಸತ್ತಾಗ ತಾಯಿಯ ಮಾಂಗಲ್ಯವನ್ನು ಮಗ ತಿರುಗಿಸಿ ಹಾಕುವುದು ಇವರ ಪದ್ಧತಿ.

ಕುಟುಂಬದ ಆಯ-ವ್ಯಯ ವ್ಯವಹಾರಗಳಲ್ಲಿ ಪುರುಷನದೆ ಪ್ರಧಾನ ಪಾತ್ರ. ಸ್ತ್ರೀಯರು ಸಂಸಾರದ ವಹಿವಾಟುಗಳನ್ನು ಸಂಭಾಳಿಸುವುದರಲ್ಲಿ ಪ್ರಮುಖ ಪಾತ್ರವಹಿಸುವುದಲ್ಲದೆ, ಹೊಲ-ಗದ್ದೆ ಗಳಲ್ಲಿ ನಾಟಿ ನೆಡುವುದು, ಕಳೆ ಕೀಳುವುದು- ಇವೇ ಮುಂತಾದ ಸಮಯಗಳಲ್ಲಿ ಪುರುಷರ ಪರಿಶ್ರಮದಲ್ಲಿ ಪಾಲ್ಗೊಳ್ಳುತ್ತಾರೆ. ಆದರೆ ಇಲ್ಲಿನ ಸ್ತ್ರೀಯರು ಮುಟ್ಟಾದಾಗ ಯಾವ ವಿಧವಾದ ನಿಷೇಧಗಳಿಗೂ ಒಳಪಡುವುದಿಲ್ಲ. ಮುಟ್ಟು ಕಂಡ ತಕ್ಷಣ ಸ್ನಾನಮಾಡಿ ಎಂದಿನಂತೆ ದೈನಂದಿನ ವ್ಯವಹಾರಗಳಲ್ಲಿ ತೊಡಗುತ್ತಾರೆ.

ಬುಡಕಟ್ಟು ಕ್ರೈಸ್ತರ ವೈವಾಹಿಕಬಂಧನ ಬಹಳ ಕಟ್ಟುನಿಟ್ಟಿನದು. ವಿವಾಹ ವಿಚ್ಛೇದನಕ್ಕೆ ಇವರಲ್ಲಿ ಅವಕಾಶವಿರುವುದಿಲ್ಲ. ಯಾವ ಕಾರಣದಿಂದಲೇ ಆಗಲಿ ಸತಿ-ಪತಿ ಬದುಕಿರುವಾಗಲೇ ಮತ್ತೊಂದು ವಿವಾಹವಾಗುವಂತಿಲ್ಲ. ವಿಧುರನು ಮರುವಿವಾಹ ಮಾಡಿಕೊಳ್ಳುವುದನ್ನು ಪ್ರೋತ್ಸಾಹಿಸುವ ಕ್ರೈಸ್ತ ಸಮಾಜ ವಿಧವಾವಿವಾಹವನ್ನು ಅಷ್ಟಾಗಿ ಪ್ರೋತ್ಸಾಹಿಸುವುದಿಲ್ಲ. ಮೈಸೂರು ಜಿಲ್ಲೆಯ ಕ್ರೈಸ್ತರಲ್ಲಿ ವಿಧವಾ ವಿವಾಹ ಬಹುವಿರಳವಾಗಿ ಕಂಡುಬರುತ್ತದೆ.

6.1.8 **ಕುಲಪದ್ಧತಿ** ತಾವೆಲ್ಲರೂ 'ಒಂದೇ ಮಂದೆಯ ಕುರಿಗಳು' ಎಂಬ ಭಾವನೆಯಿಂದ ಕ್ರೈಸ್ತ ಧರ್ಮದ ಬೆಳಕಿನಲ್ಲಿ ಬಾಳುತ್ತಿದ್ದರೂ ಇವರಲ್ಲಿ ಪರಂಪರಾಗತವಾಗಿ ಉಳಿದುಕೊಂಡು ಬಂದಿರುವ ಸಂಪ್ರದಾಯಗಳಲ್ಲಿ ವೈವಿಧ್ಯತೆಗಳು ಕಂಡು ಬರುತ್ತದೆ. ಪ್ರತಿಯೊಂದು ತಾಲ್ಲೂಕಿನಲ್ಲಿ ನೆಲಸಿರುವ ಕ್ರೈಸ್ತರಲ್ಲಿ ವಿಭಿನ್ನ ಕುಲಗಳಿವೆ. ಗಂಗಡಿಗಾರ ಒಕ್ಕಲಿಗ, ಗಾಣಿಗಶೆಟ್ಟಿ, ಬಣಜಿಗರು, ತಿಗಳರು, ಹೊಲೆಯರು, ಪಡೆಯಾಚ್ಚಿ, ಚಮ್ಮಾರರು, ಮುಂತಾದ ಉಪಜಾತಿಗಳು ಇವರಲ್ಲಿವೆ. ಒಂದೇ ಜಾತಿಯವಲ್ಲಿ 'ಕುಲ'ಗಳ ವ್ಯತ್ಯಾಸ ಕಂಢು ಬರುತ್ತದೆ. ಉದಾಹರಣೆಗೆ ಬಣಜಿಗರಲ್ಲಿ ಎಲೆ ಬಣಜಿಗ, ಬಳೆಬಣಜಿಗ, ದಾಸಬಣಜಿಗ ಎಂಬ ಪಂಗಡಗಳಿವೆ. ಬಣಜಿಗರೇ ಆಗಿದ್ದರೂ ಭಿನ್ನ ಪಂಗಡಗಳೊಂದಿಗೆ ಕೊಳುಕೊಡುಗೆಗಳಿಲ್ಲ. "ಕೋತಿಯಾದ್ರೂ ಕುಲದಲ್ಲೇ ಬೇಕು" ಎಂಬ ಗಾದೆಯಂತೆ ತಮ್ಮ ಕುಲದಲ್ಲೇ ಹೆಣ್ಣು ತರುವುದು ಹೆಚ್ಚುಗಾರಿಕೆಯೆಂಬ ಭಾವನೆಯಿದೆ. ಅನ್ಯಕುಲದಿಂದ ಅಥವಾ ಉಪಜಾತಿಗಳಿಂದ ಹೆಣ್ಣು ತರುವುದು ಕೊಡುವುದರಲ್ಲಿ ಧರ್ಮಸಭೆಯ (Church) ಅಭ್ಯಂತರವೇನೂ ಇಲ್ಲವಾದರೂ ಸಮಾಜ ಅದನ್ನು ಸಮ್ಮತಿಸುವುದಿಲ್ಲ.

6.1.9 **ಒಳಾಡಳತ ವ್ಯವಸ್ಥೆ** ವಿಚಾರಣಾಗುರುಗಳಿಗೆ (Parish Priest) ಉನ್ನತ ಸ್ಥಾನವಿದೆ. "ಗುರುಮೊಳಿಕ್ಕು ಮರುಮೊಳಿಯಿಲ್ಲೈ" ಎಂಬ ಗಾದೆಯಂತೆ ಗುರುಗಳ ತೀರ್ಮಾನ ಅಂತಿಮವಾದುದಾಗಿರುತ್ತದೆ. ಕ್ರೈಸ್ತರ ನ್ಯಾಯ-ಅನ್ಯಾಯ ಕಷ್ಟಸುಖಗಳನ್ನು ವಿಚಾರಿಸುವ ಜವಾಬ್ದಾರಿಯಿಂದಲೇ ಅವರು "ವಿಚಾರಣಾಗುರುಗಳು" ಎನಿಸುವುದು. ಚರ್ಚ್ ಇರುವ ಒಂದೊಂದು ಬಡಾವಣೆಯೂ ಒಂದೊಂದು ವಿಚಾರಣಾಕ್ಷೇತ್ರ (Parish) ವಾಗಿರುತ್ತದೆ. ಪ್ರತಿಯೊಂದು ಚರ್ಚಿಗೂ ಒಬ್ಬೊಬ್ಬರು ವಿಚಾರಣಾ ಗುರುಗಳಿರುತ್ತಾರೆ.

ಕುಟುಂಬಗಳಲ್ಲಿ ಒಡಕುಂಟಾದಾಗ ಆ ದೂರು ವಿಚಾರಣಾಗುರುಗಳ ಬಳಿ ಹೋಗುತ್ತದೆ. ಅವರು ಗಂಡ-ಹೆಂಡತಿ ಅಥವಾ ತಂದೆ ಮಕ್ಕಳನ್ನು ಕರೆಸಿ, ವಿಚಾರಣೆ ಮಾಡುತ್ತಾರೆ. ಪರಿಹಾರವನ್ನೂ ಸೂಚಿಸುತ್ತಾರೆ. ಗಂಡ ಅಥವಾ ಹೆಂಡತಿ ದಾರಿ ತಪ್ಪಿದ್ದರೆ ಅಥವಾ ಅನೈತಿಕ ಸಂಬಂಧವಿಟ್ಟುಕೊಂಡಿದ್ದರೆ ಚರ್ಚ್ ಅವರಿಗೆ ಬಹಿಷ್ಕಾರ ಹಾಕುತ್ತದೆ. ಧಾರ್ಮಿಕ ವಿಧಿಗಳಲ್ಲಿ ಅಂಥವರು ಪಾಲ್ಗೊಳ್ಳುವಂತಿಲ್ಲ. ಅವರಿಗೆ ಪ್ರಸಾದ ವಿನಿಯೋಗ ಮಾಡುವುದಿಲ್ಲ. ಅದಕ್ಕೆ ಪರಿಹಾರವೂ ಉಂಟು. ಅವರು ಆ ಮಾರ್ಗವನ್ನು ಬಿಟ್ಟು ಪಾಪನಿವೇದನೆ ಮಾಡಿ ಮತ್ತೊಮ್ಮೆ ಅಂತಹ ತಪ್ಪುಗಳನ್ನು ಮಾಡುವುದಿಲ್ಲವೆಂದು ಪ್ರತಿಜ್ಞೆ ಮಾಡಬೇಕು. ಇಂತಹ ತಪ್ಪುಗಳಿಗೆ ಪರಿಹಾರವಾಗಿ ದಂಡನೆ ವಿಧಿಸುತ್ತಿದ್ದ ಪದ್ಧತಿ ಹಿಂದೆ ಇತ್ತು. ತಪ್ಪು ಮಾಡಿದವರು ಪಾಪನಿವೇದನೆ ಮಾಡಿದ ಬಳಿಕ ಚರ್ಚಿನ ಬಾಗಿಲಬಳಿಯಿಂದ, ಕೈಯಲ್ಲಿ ಉರಿಯುವ ಮೇಣದಬತ್ತಿಯನ್ನು ಹಿಡಿದುಕೊಂಡು ಮೊಣಕಾಲಿನಲ್ಲೇ ನಡೆದುಕೊಂಡು

ಚರ್ಚಿನೊಳಗೆ ಬಂದು ಪೀಠದ ಬಳಿ ಪ್ರಾರ್ಥನೆ ಸಲ್ಲಿಸಬೇಕಿತ್ತು. ಆದರೆ ಈಗ ಅಂತಹ ಪ್ರಾಯಶ್ಚಿತ್ತಗಳಿಲ್ಲ ಪರಿವರ್ತನೆಗಾಗಿ ವಿಶೇಷ ಪ್ರಾರ್ಥನೆಗಳನ್ನು ಅವರಿಗೆ ವಿಧಿಸುತ್ತಾರೆ.

ಪಂಚಾಯಿತಿಯಲ್ಲಿ ಮೇಲ್ವರ್ಗದವರೇ ಪ್ರಧಾನರಾಗಿರುತ್ತಾರೆ. ತಪ್ಪುಗಳನ್ನು ಪಂಚಾಯಿತಿಯಲ್ಲಿಟ್ಟು ತೀರ್ಮಾನಿಸಿ ತಪ್ಪು ದಂಡ ವಿಧಿಸುವ ಅಧಿಕಾರ ಮೀಸಲಾಗಿಡುತ್ತಿದ್ದರಂತೆ. ಒಕ್ಕಲಿಗರಿಗೆ ಪ್ರಸಾದ ವಿತರಣೆಯಾದ ಮೇಲೆ ಕೆಳವರ್ಗದವರಿಗೆ ಪ್ರಸಾದ ವಿತರಿಸುತ್ತಿದ್ದರು. ಆದರೆ ಈಗ ಅಂತಹ ವ್ಯತ್ಯಾಸಗಳು ಕಂಡು ಬರುವುದಿಲ್ಲ.

ಈ ಎರಡೂ ವರ್ಗಗಳಲ್ಲಿ ಯಾವ ವಿಧವಾದ ವೈಮನಸ್ಯಗಳೂ ಇಲ್ಲ. ಪರಂಪರೆಯಿಂದ ತಾವು ಅನುಸರಿಸಿಕೊಂಢು ಬಂದಿರುವ ಸಂಪ್ರದಾಯಗಳಲ್ಲಿ ಯಾವ ವ್ಯತ್ಯಾಸವನ್ನೂ ಬಯಸುವುದಿಲ್ಲ. ತಾವು ಕೆಳವರ್ಗದವರು ಎಂಬ ಕೀಳರಿಮೆಯೂ ಇಲ್ಲ. ಮೇಲುವರ್ಗದವರ ಮೇಲೆ ದ್ವೇಷವಿಲ್ಲ. ಸಮಾಜದಲ್ಲಿ ತಮಗೆ ಲಭ್ಯವಿರುವ ಸ್ಥಾನಮಾನಗಳಲ್ಲೇ ನೆಮ್ಮದಿಯನ್ನು ಕಂಡುಕೊಳ್ಳುತ್ತಾರೆ. ಎರಡೂ ವರ್ಗದವರು ಸ್ನೇಹ, ಸೌಹಾರ್ದತೆಯಿಂದ ಬದುಕುತ್ತಿದ್ದಾರೆ.

ಊರ ಹಬ್ಬಗಳಲ್ಲಿ ತಳಿರುತೋರಣ ಕಟ್ಟುವುದು, ನಾಟಕ ಕೋಲಾಟಗಳನ್ನು ಏರ್ಪಡಿಸುವುದು ಇತರ ಕ್ರೀಡೆಗಳಲ್ಲಿ ಸಮಾನ ಪಾತ್ರವಹಿಸುತ್ತಾರೆ. ಮೇಲು ವರ್ಗದವರ ಮದುವೆ, ಆಚರಣೆಗಳಿಗೆ ಕೆಳವರ್ಗದವರನ್ನೂ ಅಹ್ವಾನಿಸುತ್ತಾರೆ. ಆದರೆ ಪ್ರತ್ಯೇಕ ಪಂಕ್ತಿಗಳಲ್ಲಿ ಊಟಕ್ಕೆಬ್ಬಿಸುತ್ತಾರೆ. ಇದರಿಂದ ಅವರ ಮನಸ್ಸಿಗೆ ಖೇದವಾಗುವುದಿಲ್ಲ. ಕಾರಣ ಆಯಾ ಹಳ್ಳಿಯಲ್ಲಿ ಪ್ರತಿಯೊಬ್ಬರೂ ಪರಿಚಿತರೇ ಆಗಿರುತ್ತಾರೆ. ತಾವು ಮತಾಂತರ ಹೊಂದಿದ ಕಾಲದಿಂದಲೂ ಅದು ಹಾಗೆಯೇ ನಡೆದುಕೊಂಡು ಬಂದಿರುವ ಪದ್ಧತಿಯಾಗಿದೆ ಎಂದು ಹೇಳಿಕೊಳ್ಳುತ್ತಾರೆ.

ಕ್ರೈಸ್ತರ ಹಳ್ಳಿಗಳಲ್ಲಿ ಸಾವು ಸಂಭವಿಸಿದಾಗ ಇಲ್ಲಿನ ಹಿಂದೂಗಳಂತೆ ಸಾವಿನ ಮನೆಯಲ್ಲಿ ಹಳ್ಳಿಯ ಜನರೆಲ್ಲಾ ಸೇರುತ್ತಾರೆ. ರಾತಿಯಿಡೀ ಭಜನೆಕಾರ್ಯಕ್ರಮವಿರುತ್ತದೆ. ಶವಸಂಸ್ಕಾರ ಮುಗಿಸಿ, ಮನೆಗೆ ಬರುವ ವೇಳೆಗೆ ನೆರೆಹೊರೆಯವರು ಹೆಚ್ಚಿನ ಪ್ರಮಾಣದಲ್ಲಿ ಅಡುಗೆಮಾಡಿ ಸಾವಿನ ಮನೆಗೆ ತಂದಿಡುತ್ತಾರೆ. ಇದು ಅವರ ಸಹಕಾರ ಜೀವನದ ಮೇಲೆ ಬೆಳಕು ಚೆಲ್ಲುತ್ತದೆ.

6.1.10 **ಸಾಮಾಜಿಕ ನಂಬಿಕೆ ಮತ್ತು ನಿಷೇಧಗಳು** ಬುಡಕಟ್ಟು ಕ್ರೈಸ್ತರಲ್ಲಿ ಕೆಲವು ವಿಶಿಷ್ಟವಾದ ನಂಬಿಕೆ ಮತ್ತು ನಿಷೇಧಗಳು ರೂಢಿಯಲ್ಲಿವೆ. ಅವುಗಳಲ್ಲಿ ಕೆಲವನ್ನು ಈ ಕೆಳಗೆ ಪ್ರಸಾಪಿಸಲಾಗಿದೆ:

1. ಸೋದರ ಸಂಬಂಧದಲ್ಲಿ ಹಾಗೂ ಮೂರು ಪೀಳಿಗೆಯ ಒಳಗೆ ವಿವಾಹಸಂಬಂಧ ಏರ್ಪಡಿಸಬಾರದು.
2. ದೀಕ್ಷಾಸ್ನಾನ ಸಂಬಂಧವಿದ್ದಲ್ಲಿ ಅವರೊಡನೆ ವಿವಾಹಸಂಬಂಧ ಬೆಳೆಸುವಂತಿಲ್ಲ.
3. ತಮಿಳರಲ್ಲಿ 'ಮಾಮಿಕೂರೈ' ನೀಡುವ ಪದ್ಧತಿ ಕಡ್ಡಾಯ.
4. ಕನ್ನಡಿಗ ಕ್ರೈಸ್ತರಲ್ಲಿ ಕೆಳವರ್ಗದ ಹೆಣ್ಣು ತರುವುದರ ಬಗೆಗೆ ಸಮಾಜದ ತಿರಸ್ಕಾರವಿದೆ.
5. ತಾವೆಲ್ಲರೂ 'ಒಂದೇ ಮಂದೆಯ ಕುರಿಗಳು' ಎಂಬ ನಂಬಿಕೆ ಕ್ರೈಸ್ತರಲ್ಲಿದೆ.
6. ಕ್ರೈಸ್ತ ಸ್ತ್ರೀ ಪುರುಷನಿಗೆ ವಿಧೇಯಳಾಗಿರಬೇಕೆಂಬುದು ನಿಯಮ.
7. ಮೈನೆರೆದ ಹುಡುಗಿಯರು ಹುಡುಗರ ಮುಂದೆ ಓಡಾಡಿದರೆ ಮುಖದ ತುಂಬಾ ಮೊಡವೆಗಳು ಕಾಣಿಸಿಕೊಳ್ಳುತ್ತವೆ.
8. ಸ್ತ್ರೀಯರು ಚರ್ಚಿಗೆ ಹೋದಾಗ ತಲೆಯಮೇಲೆ ಸೆರಗು ಹಾಕಿಕೊಳ್ಳಬೇಕು.
9. ಕುಟುಂಬ ಯೋಜನಾ ಶಸ್ತ್ರಚಿಕಿತ್ಸೆಗಳನ್ನು ಕ್ರೈಸ್ತರು ಮಾಡಿಸಿಕೊಳ್ಳುವಂತಿಲ್ಲ.
10. ದೇವರ ಮುಂದೆ ಉರಿಯುತ್ತಿರುವ ಮೇಣದಬತ್ತಿಯನ್ನು ಬಾಯಿಂದ ಊದಿ ಆರಿಸಬಾರದು.
11. ಭಾನುವಾರ ಸೂಜಿ ಹಿಡಿದು ಹೊಲಿಯಬಾರದು.
12. ಹೆಣ್ಣುಮಕ್ಕಳಿಗೆ ಬಲಗಡೆ, ಗಂಡು ಮಕ್ಕಳಿಗೆ ಎಡಗಡೆ ಮಚ್ಚೆ ಇದ್ದರೆ ಅಶುಭ.

ಮೊದಲೆರಡು ನಿಷೇಧಗಳು ವಿವಾಹ ಸಂಬಂಧವನ್ನು ಕುರಿತದ್ದಾಗಿವೆ. ಸೋದರಸಂಬಂಧದಲ್ಲಿ ವಿವಾಹವಾದರೆ ಹುಟ್ಟುವ ಮಕ್ಕಳು ದೈಹಿಕ ಹಾಗೂ ಮಾನಸಿಕ ಆರೋಗ್ಯದ ಕೊರತೆಯಿಂದ ನರಳುತ್ತವೆಂಬುದು ಮನಶಾಸ್ತ್ರಜ್ಞರ ಅಭಿಪ್ರಾಯ. ಇದನ್ನು ತಪ್ಪಿಸಲು ಧರ್ಮಸಭೆ ಈ ನಿಷೇಧವನ್ನು ತಂದಿದೆ. ಎರಡನೇ ನಿಷೇಧವು ದೀಕ್ಷಾಸ್ನಾನಕ್ಕೆ ಸಂಬಂಧಿಸಿದ್ದಾಗಿದ್ದು, ಸೋದರ ಸಂಬಂಧವಾಗುವುದರಿಂದ ಧರ್ಮ ಇಂತಹ ಸಂಬಂಧವನ್ನು ನಿಷೇಧಿಸುತ್ತದೆ. ಈ ಎರಡು ನಿಷೇಧಗಳಿದ್ದರೂ ಮದುವೆಯಾಗಲೇ ಬೇಕಾದ ಸಂದರ್ಭವಿದ್ದಲ್ಲಿ ಚರ್ಚಿಗೆ 'ದಂಡ' ತೆರುವುದು ಹಣದ ಅಪವ್ಯಯ ಎಂಬ ಭಾವನೆಗಿಂತಲೂ ಪ್ರತಿಷ್ಠೆಗೆ ಭಂಗ ತರುವಂಥದ್ದಾಗಿರುತ್ತದೆ.

ಮೂರನೆಯ ನಿಯಮ ಜನರು ತಮ್ಮ ಅನುಕೂಲಕ್ಕಾಗಿ ಮಾಡಿಕೊಂಡಿರುವಂಥದ್ದು. ಅಳಿಯನಿಗೆ ಒಂದು ಉಂಗುರ ದೊರೆತಂತಾಗುವುದಲ್ಲದೆ, ಅತ್ತೆಗೂ ಒಂದು ರೇಷ್ಮೆಸೀರೆ ದೊರೆಯುತ್ತದೆ. ಅತ್ತೆಗೆ ನೀಡುವ ಸೀರೆಯನ್ನು ಆಕೆ ಮಗಳನ್ನು ಗಂಡನ ಮನೆಗೆ ಕಳುಹಿಸುವಾಗ ಮಗಳಿಗೆ ಉಡಿಸಿ ಕಳುಹಿಸುತ್ತಾಳೆ. ಇದಕ್ಕೆ 'ಮಾಮಿಕೂರೈ' ಮರುಕೂರೈ ಎನ್ನುತ್ತಾರೆ. ಮಗಳಿಗಾಗಿ ಹೊಸ ಸೀರೆ ಕೊಳ್ಳುವ ಖರ್ಚು ಉಳಿದಂತಾಗುತ್ತದೆ.

ನಾಲ್ಕನೇಯ ನಿಷೇಧವು ಸಮಾಜದಲ್ಲಿನ ವರ್ಗಭೇದವನ್ನು ಸೂಚಿಸುತ್ತದೆ. ಈ ಜಿಲ್ಲೆಯಲ್ಲಿ ನೆಲೆಸಿರುವ ಕ್ರೈಸ್ತರೊಡನೆ ಮತಾಂತರಹೊಂದದೆ ಉಳಿದುಕೊಂಡಿರುವ ಬಂಧುಗಳ ಕುಟುಂಬಗಳೂ ಇವೆ. ಅವರ ಬಂಧುತ್ವವನ್ನು ಕಳೆದುಕೊಳ್ಳಲಾಗುವುದಿಲ್ಲ. ಸಮಾಜದಲ್ಲಿ ತಮ್ಮ ಪ್ರತಿಷ್ಠಗೆ ಭಂಗ ಬರಬಾರದೆಂದು ಈ ನಿಷೇಧವನ್ನಿಟ್ಟುಕೊಂಡಿದ್ದಂತೆ ಕಾಣುತ್ತದೆ.

ಐದನೆಯ ನಂಬಿಕೆ ಯೇಸುವನ್ನು ಕುರುಬನಿಗೆ ಹೋಲಿಸಿರುವುದಾಗಿದೆ. ಭಾರತೀಯ ಸಂಸ್ಕೃತಿಯಲ್ಲಿ ಗೊಲ್ಲ, ಗೋಪಾಲ ಎಂಬ ಪದಗಳು ಧಾರ್ಮಿಕ ಅರ್ಥವನ್ನು ಪಡೆದಿರುವಂತೆ ಯೆಹೂದಿ ಸಂಸ್ಕೃತಿಯಲ್ಲಿ ಕುರಿಗಾಹಿ ಅಥವಾ ಕುರುಬ ಎಂಬ ಪದಗಳು ಅರ್ಥಗರ್ಭಿತವಾಗಿವೆ. ಯೇಸು ತನ್ನನ್ನು ತಾನೇ "ಒಳ್ಳೆಯ ಕುರುಬ" (Good Shopherd) ಎಂದು ಕರೆದುಕೊಂಡಿರುವುದುಂಟು. ಈ ಹಿನ್ನೆಲೆಯಲ್ಲಿ ಕ್ರೈಸ್ತರೆಲ್ಲರೂ ಒಂದೇ ಮಂದೆಯ ಕುರಿಗಳು, ಯೇಸು ಒಳ್ಳೆಯ ಕುರುಬ ಎಂಬ ನಂಬಿಕೆ ಇದೆ.

ಆರನೆಯ ನಿಯಮವು ಪುರುಷಪ್ರಧಾನ ಕುಟುಂಬವನ್ನು ಸೂಚಿಸುತ್ತದೆ. ಸ್ತ್ರೀ ಪುರುಷನಿಗೆ ಪ್ರೇರಕಶಕ್ತಿಯಾಗಿರುತ್ತಾಳೆ. ಆದರೂ ವ್ಯವಹಾರಗಳಲ್ಲಿ ತಲೆಹಾಕುವಂತಿಲ್ಲ. ಈ ಕಾರಣದಿಂದಲೇ ಮೈಸೂರಿನ ತಮಿಳು ಕ್ರೈಸ್ತರಲ್ಲಿ 'ಪೆಣಿಬುದ್ಧಿ ಪಿನ್‌ಬುದ್ಧಿ' ಎಂಬ ಗಾದೆ ರೂಢಿಯಲ್ಲಿದೆ.

ಏಳನೆಯ ನಂಬಿಕೆಯು ಹೆಣ್ಣುಮಕ್ಕಳಲ್ಲಿ ಗಾಂಭೀರ್ಯವನ್ನು ಬೆಳೆಸುವ ಸಲುವಾಗಿ ಹುಟ್ಟಿಕೊಂಡಿದೆ. ಹೆಣ್ಣುಮಕ್ಕಳು ಮೈನೆರೆದಾಗ ದೈಹಿಕವಾಗಿಯೂ, ಮಾನಸಿಕವಾಗಿಯೂ ಬದಲಾವಣೆ ಹೊಂದುತ್ತಾರೆ. ಹದಿಹರೆಯದಲ್ಲಿ ಹೆಣ್ಣುಮಕ್ಕಳು ದಾರಿತಪ್ಪಿ ಹೋಗದಿರಲಿ ಎಂಬ ಉದ್ದೇಶದಿಂದ ಗಂಡು ಮಕ್ಕಳ ಮುಂದೆ ಓಡಾಡಿದರೆ ಮುಖದಲ್ಲಿ ಮೊಡವೆಗಳು ಮೂಡುತ್ತವೆ. ಅಂದಗೆಡುತ್ತದೆ ಎಂಬ ಭೀತಿಯನ್ನು ಹುಟ್ಟಿಸಿರಬಹುದು.

ಸ್ತ್ರೀಯರು ಚರ್ಚಿಗೆ ಹೋದಾಗ ತಲೆಯ ಮೇಲೆ ಸೆರಗು ಹಾಕಿಕೊಳ್ಳಬೇಕೆಂಬುದು ಯೆಹೂದಿ ಸಂಸ್ಕೃತಿ, ಯೆಹೂದಿ ಸ್ತ್ರೀಯರು ಯಾವಾಗಲೂ ತಲೆಯ ಮೇಲೆ ಮುಸುಕು ಹಾಕಿಕೊಂಡಿರುವುದು ರೂಢಿಯಲ್ಲಿತ್ತು. ಇದು ಬಹುತೇಕ ಮುಸ್ಲಿಂ ಸ್ತ್ರೀಯರ 'ಪರ್ದಾ' ಪದ್ಧತಿಯನ್ನು ಹೋಲುತ್ತದೆ. ಸ್ತ್ರೀಯರು ಸೌಂದರ್ಯ ಪ್ರದರ್ಶನ ಮಾಡದಿರಲಿ ಎನ್ನುವುದು ಇದರ ಆಶಯ. ಚರ್ಚಿಗೆ ಹೋಗುವುದು ಆಧ್ಯಾತ್ಮಿಕ ಚಟುವಟಿಕೆಗಳಲ್ಲಿ ಭಾಗವಹಿಸುವುದಕ್ಕಾಗಿ ಅಲ್ಲಿ ಇತರ ಯಾವ ಭಾವನೆಗಳಿಗೂ ಎಡೆಮಾಡಿಕೊಡಬಾರದೆಂದು ಈ ಪದ್ಧತಿ ಬೆಳೆದು ಬಂದಿದೆ. ಹಿಂದೆ, ತಲೆಯಮೇಲೆ ಸೆರಗು ಹೊದೆಯದ ಸ್ತ್ರೀಯರಿಗೆ ಗುರುಗಳು ಪ್ರಸಾದ ನೀಡುತ್ತಿರಲಿಲ್ಲ. ಆದರೆ ಇತ್ತೀಚೆಗೆ ಇದು ಸಡಿಲಗೊಂಡಿದೆ.

ಕುಟುಂಬಯೋಜನಾ ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳುವುದನ್ನು ಕ್ರೈಸ್ತ ಧರ್ಮಸಭೆ ಖಂಡಿಸುತ್ತದೆ. ಅದಕ್ಕೆ ವೈಜ್ಞಾನಿಕ, ಮಾನಸಿಕ ಮತ್ತು ವಿವಾಹಶಾಸನಕ್ಕೆ ಅನ್ವಯಿಸುವ ಮೂರು ಕಾರಣಗಳನ್ನು ನೀಡಲಾಗಿದೆ. ಮಕ್ಕಳನ್ನು ಹೆರಬೇಕಾಗುವುದೆಂದು ಗರ್ಭಕೋಶವನ್ನೇ ಕಿತ್ತೊಗೆಯುವುದು ತಪ್ಪು, ನಿಯಂತ್ರಣ ಅಗತ್ಯ. ಎರಡನೇಯದಾಗಿ ಶಸ್ತ್ರಚಿಕಿತ್ಸೆಗೊಳಪಡಿಸಿ ಮಾನವ ಸ್ವಭಾವಕ್ಕೆ ತಕ್ಕ ಒಡಲನ್ನು ಭಂಗಗೊಳಿಸುವುದು ಅಪರಾಧ, ಮೂರನೇಯದಾಗಿ ವಿವಾಹಬಂಧನದ ಉದ್ದೇಶಗಳಲ್ಲಿ ಸಂತಾನಾಭಿವೃದ್ಧಿಯೂ ಒಂದು. ಅದಕ್ಕೆ ಧಕ್ಕೆ ತಂದಂತಾಗುತ್ತದೆ. ಆದುದರಿಂದ ಪ್ರಾಕೃತಿಕ ವಿಧಾನಗಳನ್ನು ಅನುಸರಿಸಿದರೆ ಶಸ್ತ್ರಚಿಕಿತ್ಸೆ ನಿಯಂತ್ರಣವನ್ನು ತರಬಹುದು. ಧರ್ಮಸಭೆ (Church) ಇದನ್ನು ಘೋಷಿಸುತ್ತದೆ. (ಎಸ್.ಮ್ಯಾನುಯೆಲ್: 1987:215).

ದೇವರ ಮುಂದೆ ಉರಿಸುವ ಮೇಣದಬತ್ತಿ ಪವಿತ್ರ. ಅದನ್ನು ಬಾಯಿಂದ ಊದುವಾಗ ಅದರ ಮೇಲೆ ಎಂಜಲು ಬೀಳಬಹುದು ಅಥವಾ ಮಕ್ಕಳು ಊದಲು ಹೋಗಿ ಮೂಗು ಸುಟ್ಟಿಕೊಳ್ಳಬಹುದೆಂಬ ಹಿನ್ನೆಲೆಯಲ್ಲಿ ಈ ನಂಬಿಕೆ ಹುಟ್ಟಿಕೊಂಡಿದೆ.

ಭಾನುವಾರ ಕ್ರೈಸ್ತರಿಗೆ ವಿಶ್ರಾಂತಿಯ ದಿನ. ಪೂಜಾ ಪ್ರಾರ್ಥನೆಗಳಲ್ಲಿ ಭಾಗವಹಿಸುವ ದಿನ. ಹಿಂದೆ ಸ್ತ್ರೀಯರಿಗೆ ಹೊಲಿಗೆ ಒಂದು ಹವ್ಯಾಸವಾಗಿತ್ತು. ಅದನ್ನು ಒಂದು ದಿನದ ಮಟ್ಟಿಗಾದರೂ ದೂರವಿರಿಸಿ ಚರ್ಚಿಗೆ ಹೋಗುವುದು, ವಿಶ್ರಾಂತಿ ತೆಗೆದುಕೊಳ್ಳುವ ಅಭ್ಯಾಸವಾಗಲೆಂದು ಭಾನುವಾರ ಸೂಜಿ ಹಿಡಿದು ಹೊಲಿದರೆ ದಾರಿದ್ರ್ಯ ಎಂಬ ಹಿನ್ನೆಲೆಯಲ್ಲಿ ಈ ನಂಬಿಕೆ ರೂಡಿಗೆ ತಂದಿದ್ದಾರೆ.

ಹೆಣ್ಣು ಮಕ್ಕಳಿಗೆ ಬಲಗಡೆ, ಗಂಡು ಮಕ್ಕಳಿಗೆ ಎಡಗಡೆ ಮಚ್ಚೆಯಿದ್ದರೆ ಅಶುಭ ಎನ್ನುವುದು ಮೂಢನಂಬಿಕೆಯಾಗಿದೆ. ಬಲಗಡೆ ಮಚ್ಚೆಯಿರುವುದರಿಂದಲೇ ಇನ್ನೂ ಮದುವೆಯಾಗಿಲ್ಲ ಎಂಬ ಕಾರಣವನ್ನೊಡ್ಡಿ, ಅರಿಸಿನಗೊನೆಯನ್ನು ಬೆಂಕಿಯಲ್ಲಿ ಕಾಯಿಸಿ ಹುಡುಗಿಯ ಮಚ್ಚೆಯನ್ನು ಸುಟ್ಟಿರುವ ನಿದರ್ಶನಗಳೂ ಇವೆ.

ಈ ನಂಬಿಕೆಗಳು ನಿಷೇಧ, ಕ್ರೈಸ್ತರ ಜೀವನದೃಷ್ಟಿಯನ್ನು ಪರಿಚಯಿಸುತ್ತವೆ. ಹಿಂದೂಧರ್ಮೀಯರೊಡನೆ ನಿಕಟ ಸಂಪರ್ಕ ಹೊಂದಿರುವ ಇಲ್ಲಿನ ಕ್ರೈಸ್ತರ ಸಂಪ್ರದಾಯಗಳು ಬಹುಮಟ್ಟಿಗೆ ಹಿಂದೂ ಸಂಪ್ರದಾಯಗಳನ್ನು ಹೋಲುವಂತಿದ್ದರೂ ತಮ್ಮದೇ ಆದ ವಿಶಿಷ್ಟತೆಯನ್ನು ಉಳಿಸಿಕೊಂಡಿವೆ ಎಂಬುದು ಮೇಲಿನ ವಿವರಗಳಿಂದ ತಿಳಿದು ಬರುತ್ತದೆ. ಹಿಂದೂ ಧರ್ಮದಿಂದ ಮತಾಂತರಗೊಂಡವರಾದರೂ ತಮ್ಮ ಸಂಸ್ಕೃತಿ ಸಂಪ್ರದಾಯಗಳನ್ನು

ಉಳಿಸಿಕೊಂಡು ಕ್ರೈಸ್ತಧರ್ಮದಲ್ಲೇ ನೆಲೆಯೂರಿರುವ ಕ್ರೈಸ್ತರ ಪರಂಪರಾಗತ ಜೀವನಕ್ರಮವನ್ನು ಅಭ್ಯಸಿಸುವುದರಿಂದ ಅವರ ಆರ್ಥಿಕ ಜೀವನದ ಪರಿಚಯವೂ ಆಗುತ್ತದೆ.

**6. 2 ಆರ್ಥಿಕ ಸ್ಥಿತಿಗತಿ** ಯಾವುದೇ ಒಂದು ಸಮಾಜದ ಸ್ಥಿತಿಗಳನ್ನು ಗುರುತಿಸಬೇಕಾದರೆ ಅದರ ಆರ್ಥಿಕ ಮಟ್ಟ ಒಂದು ಮಾನದಂಡವಾಗುತ್ತದೆ. ಪ್ರತಿ ಸಮಾಜವೂ ತಾನು ನೆಲೆಸಿರುವ ಭೌಗೋಳಿಕ ಪರಿಸರಕ್ಕನುಗುಣವಾದ ಕಸುಬುಗಳನ್ನು ಹೊಂದಿರುತ್ತದೆ. ಅಂತೆಯೇ ಬುಡಕಟ್ಟು ಕ್ರೈಸ್ತ ಸಮಾಜವೂ ಜೀವನೋಪಾಯಕ್ಕಾಗಿ ಹಲವಾರು ವೃತ್ತಿಗಳನ್ನು ಅವಲಂಬಿಸಿದೆ.

ಭಾರತಕ್ಕೆ ಕ್ರೈಸ್ತಧರ್ಮ ಪ್ರವೇಶಿಸುವ ಮುನ್ನ ಭಾರತೀಯರೆಲ್ಲರೂ ಸನಾತನ ಧರ್ಮೀಯರೇ ಆಗಿದ್ದರೆಂಬುದರಲ್ಲಿ ಸಂದೇಹವಿಲ್ಲ. ಧಾರ್ಮಿಕ ಗುರುಗಳೊಬ್ಬರು ತಮ್ಮ ಕಿರುಹೊತ್ತಿಗೆಯಲ್ಲಿ ಆದಿಕನ್ನಡ ಕ್ರೈಸ್ತರ ಚರಿತ್ರೆಯನ್ನು ತೋಡುವುದೆಂದರೆ ? ಸುಲಭ ಸಾಧ್ಯವಲ್ಲ (ಫಾ. ಅಂತಪ್ಪ, 1990:7) ಎಂಬ ಮಾತನ್ನು ಬರೆದಿದ್ದಾರೆ. ಇಲ್ಲಿ 'ಆದಿ' ಎಂದರೆ ಪ್ರಾರಂಭಿಕ ಹಂತದವರೆನ್ನಬಹುದು. ಏಕೆಂದರೆ ಅದಕ್ಕೂ ಹಿಂದೆ ಅವರು ಹಿಂದೂ ಧರ್ಮೀಯರೇ ಆಗಿದ್ದರು. ಆದ್ದರಿಂದ ಧಾರ್ಮಿಕ ಆಚರಣೆಗಳ ಬದಲಾವಣೆಗಳಾದರೂ ಜೀವನೋಪಾಯಕ್ಕಾಗಿ ರೂಢಿಯಲ್ಲಿದ್ದ ಕಸುಬುಗಳಲ್ಲಿ ಗುರುತಿಸುವಂತಹ ಬದಲಾವಣೆಗಳಾಗಲಿಲ್ಲ. ಬುಡಕಟ್ಟು ಕ್ರೈಸ್ತರು ತಮ್ಮ ಪೂರ್ವಾಶ್ರಮದಲ್ಲಿ ಆರ್ಥಿಕವಾಗಿ ತಾವು ಬಹಳ ಹಿಂದುಳಿದ ಸಮುದಾಯದವರಾಗಿದ್ದು ಆರ್ಥಿಕವಾಗಿ ಚೇತರಿಸಿಕೊಳ್ಳುವುದಕ್ಕಾಗಿಯೇ ಮತಾಂತರಗೊಂಡಿರುವುದಾಗಿ ಹೇಳಿಕೊಳ್ಳುವವರಿದ್ದಾರೆ. ಮತಾಂತರ ಹೊಂದಿದವರ ಪೈಕಿ ಮೂರನೆಯ ಎರಡು ಭಾಗದಷ್ಟು ಮಂದಿ ಕೆಳವರ್ಗದ ಜನರೆಂದು ಅಬ್ಬದುಬ್ಬೆ ಅಭಿಪ್ರಾಯ ಪಟ್ಟಿದ್ದಾರೆ (ಅಬ್ಬೆದುಬ್ಬೈ 1906:)

**6.2.1 ಕಸುಬುಗಳು** ಜೀವನಾವಶ್ಯಕತೆಗಳಿಗಾಗಿ, ಅವುಗಳ ಪೂರೈಕೆಗಾಗಿ ಅನೇಕ ವೃತ್ತಿಗಳು ಜನಪದರಲ್ಲಿ ಪ್ರಚಲಿತವಿದೆ. ವ್ಯವಸಾಯೋಪಕರಣಗಳನ್ನು ಬಡಗಿ ತಯಾರಿಸಿದರೆ ಲೋಹದ ಉಪಕರಣಗಳನ್ನು ಕಮ್ಮಾರನು ಒದಗಿಸುತ್ತಾನೆ. ನಾಗರಿಕ ನೂತನ ಉಡುಪುಗಳು ದಿನೇ ದಿನೇ ಮಾರುಕಟ್ಟೆಗೆ ಬರುತ್ತಿದ್ದರೂ ಸಾಮಾನ್ಯ ಜನರಿಗೆ ಸಾಕಷ್ಟು ಬೆಲೆಬಾಳುವಂಥ ದಿನನಿತ್ಯದ ಉಡುಗೆ ಗಳು ಹಳ್ಳಿಯ ಮನೆಗಳಲ್ಲಿ ಉತ್ಪಾದನೆಯಾಗುತ್ತಿವೆ. ಲೋಹದ ಪಾತ್ರೆ ಪಡಗಗಳು ಎಲ್ಲೆಲ್ಲೂ ಬಳಕೆಯಾಗುತ್ತಿರುವ ಈ ದಿನಗಳಲ್ಲೂ ಹಳ್ಳಿಗಳಲ್ಲಿ ಮಣ್ಣಿನ ಮಡಕೆ, ಕೊಡಗಳನ್ನು ಮನೆಗಳಲ್ಲಿ ಉಪಯೋಗಿಸುವುದನ್ನು ನಾವು ಇಂದಿಗೂ ಕಾಣುತ್ತೇವೆ.

ಬುಡಕಟ್ಟು ಕ್ರೈಸ್ತರ ಎಲ್ಲಾ ಹಳ್ಳಿಗಳಲ್ಲಿಯೂ ಕೃಷಿ ಸಾಮಾನ್ಯ ಉದ್ಯೋಗವಾಗಿದೆ. ಅದರಲ್ಲೂ ನೀರಾವರಿ ಸೌಲಭ್ಯವಿರುವ ಎಲ್ಲಾ ಹಳ್ಳಿಗಳಲ್ಲಿಯೂ ಕ್ರೈಸ್ತ ಗಂಡಸರೂ,

ಹೆಂಗಸರೂ ಕೃಷಿಯನ್ನೇ ಅವಲಂಬಿಸಿರುತ್ತಾರೆ. ಚಾಮರಾಜನಗರದ ಜಿಲ್ಲೆಯಲ್ಲಿ ನೀರಿನ ಸೌಲಭ್ಯ ಕಡಿಮೆ ಇರುವುದರಿಂದ ಅಲ್ಲಿನ ಪ್ರಧಾನ ಕಸುಬು ರೇಷ್ಮೆಹುಳು ಸಾಕಣೆ ಹಾಗೂ ರೇಷ್ಮೆ ನೂಲು ತೆಗೆಯುವುದು, ಹಿಪ್ಪುನೇರಳೆ ಕೃಷಿ ಮಾಡುವುದು ಮನೆಮನೆಗಳಲ್ಲೂ ಕ್ರೈಸ್ತ ಮಹಿಳೆಯರು ಈ ವೃತ್ತಿಯನ್ನು ಕೈಗೊಂಡಿದ್ದಾರೆ. ಮಾತ್ರವಲ್ಲ ಕೂಲಿಗಾಗಿ ಇತರರ ಬಳಿಯೂ ರೇಷ್ಮೆದಾರ ತೆಗೆಯಲು ಹೋಗುತ್ತಾರೆ.

ಕೆಲವೇ ಕೆಲವರಿಗೆ ಮಾತ್ರ ತಮ್ಮದೇ ಆದ ಹೊಲಗದ್ದೆಗಳಿವೆ. ಅಲ್ಲಿಯೂ ಸ್ತ್ರೀ ಪುರುಷರು ದುಡಿದು ಸಂಪಾದಿಸುತ್ತಾರೆ. ರೇಷ್ಮೆಹುಳು ಸಾಕಣೆ ಅದೃಷ್ಟವನ್ನು ಅವಲಂಬಿಸಿದೆ, ಎಂಬ ನಂಬಿಕೆ ಕ್ರೈಸ್ತರಲ್ಲಿದೆ. ಹುಳುಗಳು ಮೂರು–ನಾಲ್ಕನೇ ಜ್ವರಕ್ಕೆ ಬಂದಾಗ ಹದಗೆಟ್ಟು ಹೋದರೆ ತಮ್ಮ ಬಂಡವಾಳಕ್ಕೆ ಕುತ್ತುಂಟಾಗುತ್ತದೆ. ಹುಳುವಿಗೆ ಸೊಪ್ಪು ಕೊಯ್ದುತರುವುದು, ಅಥವಾ ಕೊಂಡು ತರುವುದು, ವೇಳೆಗೆ ಸರಿಯಾಗಿ ಹುಳುಗಳಿಗೆ ಸೊಪ್ಪು ಹಾಕುವುದು ಇತ್ಯಾದಿ ಕೆಲಸಗಳನ್ನು ಮನೆಯ ಸ್ತ್ರೀಯರು ಮಾಡುತ್ತಾರೆ. ಕ್ರೈಸ್ತರಲ್ಲಿ ಮುಟ್ಟಾದಾಗ ಮೂರುದಿನದ (ಸೂತಕ) ಸಂಪ್ರದಾಯ ಇಲ್ಲದಿದ್ದರೂ ಹುಳುಸಾಕುವವರು ಇದನ್ನು ಪಾಲಿಸುತ್ತಾರೆ. ಸ್ತ್ರೀ ಮುಟ್ಟಾದಾಗ ರೇಷ್ಮೆ ಹುಳುವಿನ ಹತ್ತಿರ ಸುಳಿಯಬಾರದು ಸೂತಕ ತಗ ುಲಿದರೆ ಹುಳು ಕೈಗೂಡುವುದಿಲ್ಲವೆಂದು ನಂಬುತ್ತಾರೆ.

ಹೆಚ್.ಡಿ.ಕೋಟೆಯ ನಾಗನಹಳ್ಳಿಯಲ್ಲಿ ಹೊಗೆಸೊಪ್ಪನ್ನು ಹೆಚ್ಚಾಗಿ ಬೆಳೆಯುವುದರಿಂದ ಹೊಗೆಸೊಪ್ಪನ್ನು ಹದಗೊಳಿಸಿ ತಂಬಾಕು ಉತ್ಪಾದಿಸುವುದು ಇಲ್ಲಿನ ವೃತ್ತಿಯಾಗಿದೆ. ಹೊಸೂರಿನಲ್ಲಿನ ಕ್ರೈಸ್ತರು ಬಡಗಿ ಕೆಲಸ, ಚಾಪೆಹೆಣೆಯುವಿಕೆ, ಬಲೆ ಹೆಣೆಯುವಿಕೆ ಇತ್ಯಾದಿ ಉಪಕಸುಬುಗಳನ್ನು ಮಾಡುತ್ತಾರೆ. ಮೀನುಗಾರಿಕೆ ಇವರ ಒಂದು ಉಪಕಸಬಾಗಿದೆ. ಹಿಂದೂಧರ್ಮದಿಂದ ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಿದ ಮಂದಿಯೇ ಹೆಚ್ಚಾಗಿದ್ದರೂ, ವೃತ್ತಿಗೂ ಜಾತಿಗೂ ಅಂಟಿಲ್ಲದಂತೆ ತಮ್ಮ ವೃತ್ತಿಗಳನ್ನು ಮುಂದುವರೆಸಿಕೊಂಡು ಬಂದಿದ್ದಾರೆ.

ಚಾಪೆ ಹೆಣೆಯಲು ಬೇಕಾದ ಕಚ್ಚಾವಸ್ತುಗಳಿಗೆ ಬಂಡವಾಳ ಹಾಕುವಂತಿಲ್ಲ, ಜನರ ಶ್ರಮವೇ ಬಂಡವಾಳವಾಗಿದೆ. ಹೊಳೆದಂಡೆಯಲ್ಲಿರುವ ಚೇಣಿಕಡ್ಡಿಯನ್ನು ಶೇಖರಿಸಿಟ್ಟುಕೊಂಡು ಕರಿಬೂತಾಳೆ ಯನ್ನು ತಂದು ನೀರಿನಲ್ಲಿ ಚೆನ್ನಾಗಿ ‘ ನೆನೆಸಿ ’ ಬಳಿಕ ಕಲ್ಲಿನ ಮೇಲೆ ಬೀಸಿ ಬೀಸಿ ಒಗೆದು, ಲೋಳೆ ಹೋಗುವಂತೆ ಮಾಡಲು ಕೆಲವು ದಿವಸಗಳೇ ಬೇಕಾಗುತ್ತವೆ. ಹೀಗೆ ಹದಮಾಡಿ ನಾರುತೆಗೆಯುವುದು ಮನೆಯ ಅಂಗಳದಲ್ಲೇ ನಾಲ್ಕಾರು ಮಂದಿ ಕೂಲಿಯಾಳುಗಳನ್ನು ಇಟ್ಟುಕೊಂಡು ಈ ವೃತ್ತಿಯಲ್ಲಿ ತೊಡಗುವುದು ಸಾಮಾನ್ಯ. ಈ ಉದ್ಯಮ ಲಾಭದಾಯಕವಾಗಿದ್ದು, ಒಳ್ಳೆಯ ಮಾರುಕಟ್ಟೆಯನ್ನೂ ಗಳಿಸಿದೆ. ಇದರ ಉತ್ಪಾದನೆ

ಅಧಿಕವಾಗಿಲ್ಲದ ಕಾರಣ ಮುಂಗಡವಾಗಿ ಸುತ್ತಮುತ್ತಲಿನ ಗ್ರಾಮಗಳಲ್ಲಿನ ಜನ ಚಾಪೆಗಳನ್ನು ಕಾಯ್ದಿರಿಸುತ್ತಾರೆ. ಅಲ್ಲದೆ ಸಂತೆಗಳಲ್ಲೂ ಚಾಪೆಗಳು ಒಳ್ಳೆಯ ಬೆಲೆಗೆ ಹೋಗುತ್ತವೆ.

ಹಂದಿ, ಕೋಳಿ,ಮತ್ತು ಕುರಿ ಸಾಕಣೆ ಕೂಡ ಕೆಲವು ಹಳ್ಳಿಗಳಲ್ಲಿ ಒಂದು ವೃತ್ತಿಯಾಗಿದೆ. ನಾಗನಹಳ್ಳಿಯಲ್ಲಿ MYRADA ಯೋಜನೆಯಿಂದ ಅನೇಕ ಮಂದಿಗೆ ಗೃಹಕೈಗಾರಿಕೆಯ ಸೌಲಭ್ಯಗಳು ದೊರೆತಿವೆ. ಅನೇಕ ಮಂದಿ ಸ್ತ್ರೀಯರು ಉದ್ಯೋಗಿಗಳಾಗಿದ್ದಾರೆ. ಹಪ್ಪಳದ ತಯಾರಿಕೆಯ ಯಂತ್ರ, ಕಚ್ಚಾವಸ್ತುಗಳನ್ನು ಕೊಳ್ಳಲು ಸಾಲದ ರೂಪದಲ್ಲಿ ಹಣ, ಬೀಡಿಕಟ್ಟುವ ಕೆಲಸಕ್ಕೆ ತರಬೇತಿ ನೀಡಿ, ಕಚ್ಚಾವಸ್ತುವನ್ನೂ ಒದಗಿಸಿ, ಮಾರುಕಟ್ಟೆ ವ್ಯವಸ್ಥೆಯನ್ನೂ ಈ ಯೋಜನೆ ವಹಿಸಿಕೊಂಡಿದೆ. ಇದರಿಂದ ಅನೇಕರು ಬೇರೆ ಬೇರೆ ವೃತ್ತಿಗಳಲ್ಲಿ ತೊಡಗಿದ್ದಾರೆ.

ರಾಗಿ ಇಲ್ಲಿನ ಮುಖ್ಯ ಆಹಾರ ಬೆಳೆಯಾಗಿದೆ. ರಾಗಿ ಕೊಯ್ಯುವಾಗ ಕ್ರೈಸ್ತರು ಕುಡುಗೋಲಿಗೆ ಕುಂಕುಮ ಹಚ್ಚಿ, ಹಾಡು ಹೇಳಿಕೊಂಡು ಕೆಲಸ ಪ್ರಾರಂಭಿಸುತ್ತಾರೆ. ಕಳೆ ಕೀಳುವಾಗ ಕೆಳಗಿನ ಹಾಡು ಹಾಡುವುದು ಸಂಪ್ರದಾಯ.

ಚಿಕ್ಕ ಚಿಕ್ಕ ಪ್ರಾಯದಲಿ ಬಾಲು ತುಂಬಿದ
ಗೋವುದನವೇ ಕಾಯುವಾಗ ಬಾಲು ತುಂಬಿದ
ಗೋವುದನವೇ ಕಾಯುವಾಗ ಬಾಲು ತುಂಬಿದ
ಬಾಸಿ, ನೀರು ಬಾಸಿ ಬಾಲು ತುಂಬಿದ

ಕೆಲಸವನ್ನು ಪ್ರಾರಂಭಮಾಡುವ ಮುನ್ನ ಹಿಂದೂ ಸಂಪ್ರದಾಯದಂತೆಯೇ ಪೂಜೆ ಮಾಡುತ್ತಾರೆ. ಮೊರಕುಕ್ಕೆಗಳಿಗೆ ಅರಿಸಿನ ಕುಂಕುಮವಿಟ್ಟು, ಕ್ರೈಸ್ತರ ಸಣ್ಣ ಪ್ರಾರ್ಥನೆ ಸಲ್ಲಿಸಿ ಕೆಲಸ ಪ್ರಾರಂಭಿಸುತ್ತಾರೆ. ಕುಂಕುಮ ಬಳಸಲೇ ಬಾರದೆಂದೂ, ಅದು ಕ್ರೈಸ್ತರಿಗೆ ನಿಷಿದ್ಧವೆಂದೂ ಕ್ರೈಸ್ತ ಧರ್ಮಸಭೆಯ ಕಟ್ಟಳೆಯಾಗಿತ್ತು. ಆದರೆ ಮತಾಂತರಕ್ಕೆ ಮೊದಲಿನ ಈ ಸಂಪ್ರದಾಯದ ಮೇಲೆ ಈ ಕಟ್ಟಳೆ ಯಾವ ಪ್ರಭಾವವನ್ನೂ ಬೀರಲಿಲ್ಲ. ಮನೆ ಕಟ್ಟಿಸುವಾಗ ಗುದ್ದಲಿಪೂಜೆ, ನವರಾತ್ರಿಯ ಆಯುಧ ಪೂಜೆಗಳು ಇಂದಿಗೂ ಹಿಂದೂ ಸಂಪ್ರದಾಯದಂತೆಯೇ ಮುಂದುವರೆಯುತ್ತಿವೆ.

ಕೊಳ್ಳೇಗಾಲದ ಸುತ್ತಮುತ್ತಲ ಗ್ರಾಮಗಳಲ್ಲಿ ನೆಲಸಿರುವ ತಮಿಳು ಕ್ರೈಸ್ತರು ಕೃಷಿಕರೇ ಆಗಿದ್ದರೂ ಬೆಳೆಯಿಲ್ಲದ ಕಾಲದಲ್ಲಿ ಕಲ್ಲು ಒಡೆಯುವುದನ್ನು ಉಪಕಸಬಾಗಿ ಮಾಡಿಕೊಂಡಿದ್ದಾರೆ. ಈ ದುಡಿಮೆಯಲ್ಲಿ ಸ್ತ್ರೀ-ಪುರುಷರು ಸಮಭಾಗಿಗಳು. ಇಟ್ಟಿಗೆ ಭಟ್ಟಿಗಳಲ್ಲಿ ಕೆಲಸಮಾಡುವುದು, ಸೈಜು ಕಲ್ಲುಗಳನ್ನು ಒಡೆಯುವುದು, ಬಿದಿರು

ಕೊಯ್ಯುವುದು, ತಟ್ಟೆ, ಪುಟ್ಟಿಗಳನ್ನು ಹೆಣೆಯುವುದು, ಹಗ್ಗ ತಿರುಚುವುದು ಮುಂತಾದ ಉಪಕಸುಬುಗಳನ್ನು ಕೈಗೊಂಡಿದ್ದಾರೆ.

'ಪೊರುಚಿ' ಮರದ ಕಾಲುಗಳನ್ನುಳ್ಳ ಮಂಚಗಳನ್ನು ತಯಾರಿಸುತ್ತಾರೆ. ಈ ಮಂಚಕ್ಕೆ 'ಅಚಾ' ಮರದ ನಾರಿನಿಂದ ತಾವೇ ತಿರುಚಿ ತಯಾರಿಸಿದ ಹಗ್ಗದ ಹಾಸುಗಳನ್ನು ಬಿಗಿಯುತ್ತಾರೆ. ಈ ಮಂಚಗಳು ಬಹುಕಾಲ ಬಾಳಿಕೆ ಬರುತ್ತವೆ. ಸುಲಭವಾಗಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಗಿಸುವಂತೆ ಹಗುರವಾಗಿರುತ್ತವೆ. ಕಡಿಮೆ ಖರ್ಚಿನಲ್ಲಿ ತಯಾರಿಸುವಂಥ ಇಂತಹ ಮಂಚಗಳ ತಯಾರಿಕೆಯೂ ಒಂದು ಉಪಕಸುಬಾಗಿದೆ.

ತೆಂಗು ಮತ್ತು ಈಚಲ ಮರಗಳಿಂದ ಹೆಂಡ ಇಳಿಸುವುದೂ ಇವರ ಮತ್ತೊಂದು ಉದ್ಯೋಗವಾಗಿತ್ತು. ಈಗ ಅದು ನಿಂತು ಹೋಗಿದೆ. ಹಂದಿ ಸಾಕುವಿಕೆ, ಹಂದಿಮಾಂಸ ಮಾರುವಿಕೆ ಇವರ ಉಪಕಸುಬು. ಬೇಟೆಯಾಡುವುದು ಹೊಟ್ಟೆಪಾಡಿಗೆ ಅವಲಂಬಿಸಿರುವ ಒಂದು ವೃತ್ತಿಯಾಗಿದೆ. ಪಕ್ಷಿಗಳಿಗೆ ಬಲೆ ಬೀಸುತ್ತಾರೆ. ಮೊಲಗಳಿಗೆ ವಂಕಿ ಹಾಕಿ ಬೇಟೆಯಾಡುತ್ತಾರೆ. ಇತ್ತೀಚೆಗೆ ಸರ್ಕಾರ ಅದನ್ನು ನಿರ್ಬಂಧಿಸಿರುವುದರಿಂದ ಬೇಟೆ ಕಡಿಮೆಯಾಗಿ ದೆ.

ಇತರ ಧರ್ಮೀಯರನ್ನು ಇವರೊಡನೆ ಹೋಲಿಸಿದರೆ ವೃತ್ತಿಗೆ ಅನುಸಾರವಾಗಿ ಅವರ ಧಾರ್ಮಿಕ ಆಚರಣೆಗಳಲ್ಲಿ ಭಿನ್ನತೆ ಕಂಡು ಬರುತ್ತದೆ. ಉದಾಹರಣೆಗೆ ಬೆಸ್ತರು ಗಂಗಾಮತಕ್ಕೆ ಸೇರಿದವರಾಗಿದ್ದು ಗಂಗಾದೇವಿಯ ಉಪಾಸಕರಾಗಿರುತ್ತಾರೆ. ಬಡಗಿಗಳು ಜನಿವಾರ ಧರಿಸುವುದು ಕಂಡುಬರುತ್ತದೆ. ಆದರೆ ಕ್ರೈಸ್ತರಲ್ಲಿ ಈ ಸಂಪ್ರದಾಯಗಳು ಕಂಡು ಬರುವುದಿಲ್ಲ. ಒಮ್ಮೆ ದೀಕ್ಷಾಸ್ನಾನ ಪಡೆದು ಕ್ರೈಸ್ತನಾಗಿಬಿಟ್ಟರೆ ಆಯಿತು. ಅವನು ಕ್ರೈಸ್ತನೇ ಆಗಿರುತ್ತಾನೆ. ಏಕದೇವೋಪಾಸನೆಗೆ ಒಳಪಟ್ಟಿರುತ್ತಾನೆ. ವೃತ್ತಿಯಿಂದ ಅವನ ಸ್ಥಾನಮಾನವನ್ನು ಅಳೆಯುವುದಿಲ್ಲ. ಚರ್ಚಿಗೆ ಬಂದಾಗ ಅವನಿಗೆ ಸಮಾನ ಅವಕಾಶವಿರುತ್ತದೆ. ಸಮಾಜದಲ್ಲಿಯೂ ಆತ ಕ್ರೈಸ್ತಸಾಮಾಜಿಕ ಸಂಪ್ರದಾಯಗಳನ್ನು ಅನುಸರಿಸುತ್ತಾನೆ. ನವರಾತ್ರಿ ಹಬ್ಬದಲ್ಲಿ ವ್ಯವಸಾಯೋಪಕರಣಗಳನ್ನು ಹಿಂದೂಗಳ ಬಳಿಗೊಪ್ಪಿಸಿ ಪೂಜೆ ಮಾಡಿಸುವ ಪದ್ಧತಿಯುಂಟು. ಆದರೆ ಆಯುಧಗಳ ಪೂಜೆ ಮಾಡಿಸದಿದ್ದಲ್ಲಿ ಶ್ರೇಯಸ್ಸಿಲ್ಲ ಎಂಬ ಆಂತರಿಕ ಅನಿಸಿಕೆ ಇದ್ದೇ ಇರುತ್ತದೆ. ತಾವೇ ಪೂಜೆ ಮಾಡಿದರೆ ಏಕದೇವರ ಆರಾಧನೆಗೆ ಭಂಗ ಬಂದಂತಾಗಿ ದೇವರು ತಮ್ಮನ್ನು ನರಕಕ್ಕೆ ತಳ್ಳಬಹುದೆಂಬ ಭಯವೂ ಇದೆ. ಈ ಭಯದಿಂದಾಗಿ ಕಟ್ಟುನಿಟ್ಟಿನ ಜೀವನಕ್ಕೆ ಹಿನ್ನೆಲೆಯಾಗಿ ಕ್ರೈಸ್ತಪುರಾಣಗಳೂ ಲಭ್ಯವಿದೆ.

ಇತರರಿಗೆ ಹೋಲಿಸಿದರೆ ಕ್ರೈಸ್ತರಲ್ಲಿ ಶಾಬ್ದಿಕ ಜಾನಪದ ಹೆಚ್ಚು ದಟ್ಟವಾಗಿ ಪ್ರಚಲಿತವಾಗಿಲ್ಲ. ಆದರೂ ಲಭ್ಯವಿರುವ ಸಾಮಗ್ರಿಯನ್ನನುಸರಿಸಿ ಹೇಳುವುದಾದರೆ, ಕ್ರೈಸ್ತರ ಜೀವನ ಮತ್ತು ಸಂಸ್ಕೃತಿಯನ್ನು ಅರಿಯಲು ಅಗತ್ಯವೆನಿಸುವಷ್ಟು ಸಾಮಗ್ರಿ ಅವರಲ್ಲಿ ಉಂಟು.

ಯಾವುದೇ ಒಂದು ಸಮಾಜದ ಸ್ಥಿತಿಗಳನ್ನು ಗುರುತಿಸಬೇಕಾದರೆ ಅವರ ಆರ್ಥಿಕ ಮಟ್ಟ ಒಂದು ಮಾಪನವಾಗುತ್ತದೆ. ಪ್ರತಿ ಸಮಾಜವೂ ತಾನು ನೆಲಸಿರುವ ಭೌಗೋಳಿಕ ಪರಿಸರಕ್ಕನುಗುಣವಾದ ಕಸುಬುಗಳನ್ನು ಹೊಂದಿರುತ್ತದೆ. ಅಂತೆಯೇ ಕರ್ನಾಟಕ ಬುಡಕಟ್ಟು ಕ್ರೈಸ್ತ ಸಮಾಜವೂ ಜೀವನೋಪಾಯಕ್ಕಾಗಿ ಕೆಲವು ವೃತ್ತಿಗಳನ್ನು ಅವಲಂಬಿಸಿದೆ.

6.2.1.1 **ಉಪಕಸಬು** ವ್ಯವಸಾಯಕ್ಕೆ ಬೇಕಾಗುವ ಸಲಕರಣೆಗಳನ್ನು ಬುಡಕಟ್ಟು ಕ್ರೈಸ್ತರು ತಮ್ಮ ಗ್ರಾಮಗಳಲ್ಲಿ ತಾವೇ ತಯಾರಿಸಿಕೊಳ್ಳುತ್ತಾರೆ. ಇದಕ್ಕೆ ಸಂಬಂಧಿಸಿದಂತೆ ಬಡಗಿ, ಕಮ್ಮಾರರು ಜೀವನೋಪಾಯವನ್ನು ಕಂಡುಕೊಂಡಿದ್ದಾರೆ. ಬಿದಿರು ದೊರಕುವ ಸ್ಥಳಗಳಲ್ಲಿ ಮೊರ, ಕುಕ್ಕೆ, ಸುಣಗಲು ಹೆಣೆಯುವ ವೃತ್ತಿಯೂ ಇದೆ. ಹೊಗೆಸೊಪ್ಪನ್ನು ಹೆಚ್ಚಾಗಿ ಬೆಳೆಯುವ ಸ್ಥಳಗಳಲ್ಲಿ ಸೊಪ್ಪನ್ನು ಒಣಗಿಸಲು ದೊಡ್ಡ ಬ್ಯಾರನ್‌ಗಳನ್ನು ಕಟ್ಟಿಸಿಕೊಂಡು ಅದರಲ್ಲಿ ಹೊಗೆಸೊಪ್ಪನ್ನು ಹದಗೊಳಿಸುವುದು, ನಂತರ ಉತ್ತಮವಾದುದನ್ನು ಬೇರ್ಪಡಿಸುವುದು, ಇವು ಇವರ ಉಪಕಸಬುಗಳಾಗಿವೆ. ಈ ಕಸಬು ವಿಶೇಷವಾಗಿ ನಾಗನಹಳ್ಳಿಯ ಕ್ರೈಸ್ತರಲ್ಲಿ ಕಂಡುಬರುತ್ತದೆ. ಕೂಡಲೂರಿನಲ್ಲಿ ಹತ್ತಿ ಬಿಡಿಸುವಿಕೆ ಸ್ತ್ರೀಯರ ಒಂದು ಮುಖ್ಯ ಉಪಕಸಬಾಗಿರುವುದು ಕಂಡುಬರುತ್ತದೆ.

6.2.1.2 **ಚಾಪೆ ಹೆಣೆಯುವುದು** ಬುಡಕಟ್ಟು ಕ್ರೈಸ್ತ ಮಹಿಳೆಯರು ಕರಕುಶಲ ಕೆಲಸಗಳಲ್ಲಿ ಪ್ರಾವೀಣ್ಯತೆಯನ್ನು ಪಡೆದಿರುತ್ತಾರೆ. ನಾಗನಹಳ್ಳಿಯಲ್ಲಿ ಚಾಪೆ ಹೆಣೆಯುವಿಕೆ ಒಂದು ಉಪಕಸಬಾಗಿದೆ. ಹೊಳೆದಂಡೆಯಲ್ಲಿ ಸಿಗುವ ಚೇಣಿಕಡ್ಡಿ ಮತ್ತು ಉಪಯೋಗಿಸಿ ಚಾಪೆ ಹೆಣೆಯುತ್ತಾರೆ. ವ್ಯಕ್ತಿಯ ಶ್ರಮವೇ ಈ ಕಸಬಿಗೆ ಬಂಡವಾಳ. ಸ್ತ್ರೀಯರೇ ಹೆಚ್ಚಿನ ಸಂಖ್ಯೆಯಲ್ಲಿ ಈ ವೃತ್ತಿಯನ್ನು ಕೈಗೊಂಡಿರುತ್ತಾರೆ. ಇದು ಇಲ್ಲಿ ಬಹು ಬೇಡಿಕೆಯ ವ್ಯಾಪಾರವಾಗಿರುತ್ತದೆ. ತಯಾರಾದಷ್ಟೂ ಚಾಪೆಗಳು ಗ್ರಾಮದೊಳಗೆಯೇ ವ್ಯಾಪಾರವಾಗಿ ಬಿಡುತ್ತವೆ. ಮುಂಗಡವಾಗಿಯೇ ಹಣವನ್ನು ಕೊಟ್ಟು ಚಾಪೆ ಹೆಣೆಯಲು ಹೇಳುವವರೂ ಇರುತ್ತಾರೆ.

6.2.1.3 **ಮಂಚ ತಯಾರಿಕೆ** ಕೊಳ್ಳೇಗಾಲದ ಮಾರ್ಟಳ್ಳಿ, ಸಂದನಪಾಳ್ಯ, ಸುಳ್ಳುವಾಡಿ, ವಡ್ಡರದೊಡ್ಡಿ ಮುಂತಾದ ಕಡೆಗಳಲ್ಲಿ ಹಗ್ಗದ ಮಂಚ ತಯಾರಿಸುತ್ತಾರೆ. ಎಲ್ಲರ

ಮನೆಗಳಲ್ಲೂ ಈ ಮಂಚಗಳೇ ಪೀಠೋಪಕರಣದ ಸ್ಥಾನ ವಹಿಸುತ್ತವೆ. ಇದಕ್ಕೆ ಬೇಕಾಗುವ ಪೊರುಚ್ಚಿ ಮರವನ್ನು ಕಾಡಿನಿಂದ ಕಡಿದುತಂದು, ಮಂಚದ ಕಾಲುಗಳನ್ನೂ ಚೌಕಟ್ಟನ್ನೂ ತಯಾರಿಸಿಕೊಂಡು, ತಾವೇ ತಯಾರಿಸಿದ ಹಗ್ಗಗಳನ್ನು ಹೆಣೆದು ಬಿಗಿದು ಮಂಚವನ್ನು ತಯಾರಿಸುತ್ತಾರೆ. ಇದನ್ನು ಸುಲಭವಾಗಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಗಿಸಬಹುದು. ಮಾತ್ರವಲ್ಲ ಕುಳಿತುಕೊಳ್ಳಲು, ಮಲಗಲು ಈ ಮಂಚಗಳನ್ನೇ ಉಪಯೋಗಿಸುವರು. ಇದು ಬಹುಬೇಡಿಕೆ ಇರುವ ತಯಾರಿಕೆಯಾಗಿದೆ.

6.2.1.4 **ಪಶುಪಾಲನೆ** ಹುಲ್ಲುಗಾವಲು ಹೆಚ್ಚಾಗಿರುವ ಪ್ರದೇಶಗಳಲ್ಲಿ ಕುರಿಸಾಕಾಣಿಕೆ ಒಂದು ಉಪಕಸಬಾಗಿದೆ. ಹಸು, ಎತ್ತು ಕೆಲವೆಡೆಗಳಲ್ಲಿ ಮಾತ್ರ ಎಮ್ಮೆ ಸಾಕುವುದು ಕಂಡುಬರುತ್ತದೆ. ಕುರಿ ಕಾಯಲು ಹುಡುಗರೇ ಮುಂದಿರುತ್ತಾರೆ. ಮಾರ್ಟಳ್ಳಿ, ಸಂದನಪಾಳ್ಯಂ, ವಡ್ಡರದೊಡ್ಡಿ, ಕೌದಳ್ಳಿ ಮುಂತಾದ ಕಡೆ ಕುರಿಗಳಿಗಾಗಿಯೇ ಮನೆಯ ಹಿತ್ತಲಲ್ಲಿ 'ಆಡುಪೆಟ್ಟಿ'ಗಳನ್ನು ಕಟ್ಟಿರುತ್ತಾರೆ. ಹಸು ಮತ್ತು ಎಮ್ಮೆ ಹಾಲನ್ನು ಹೈನುಪದಾರ್ಥಗಳಿಗೆ ಉಪಯೋಗಿಸಿಕೊಂಡು, ಉಳಿದದ್ದನ್ನು ಮಾರಿಯೂ ಜೀವನ ಸಾಗಿಸುತ್ತಾರೆ. ಕೊಳ್ಳೇಗಾಲದ ಕ್ರೈಸ್ತರ ಬಳಿ ಹುಡುಕಿ ತೆಗೆದಂತೆ ಊರಿಗೆಲ್ಲಾ ಕೆಲವೆ ಟ್ರಾಕ್ಟರುಗಳಿವೆ. ಇಲ್ಲಿನ ಜನ ಇಂದಿಗೂ ಉಳುಮೆಗೆ ಎತ್ತುಗಳನ್ನೇ ಬಳಸುತ್ತಾರೆ. ಅದರಿಂದ ಎತ್ತು ಮೂಲ ಉದ್ಯೋಗಕ್ಕೆ ಉಪಯುಕ್ತವಾದ ಸಾಕುಪ್ರಾಣಿಯಾಗಿದೆ.

ತಮಿಳು ಕ್ರೈಸ್ತರಲ್ಲಿ ಸಾಕುಪ್ರಾಣಿಗಳನ್ನು ವಾರಕ್ಕೆ ಬಿಡುವ ಪದ್ಧತಿ ಇದೆ. ಹಸು, ಆಡು, ಕುರಿ, ಹಂದಿ, ಕೋಳಿ, ಎಮ್ಮೆ ಇತ್ಯಾದಿ ಪ್ರಾಣಿಗಳನ್ನು ವಾರಕ್ಕೆ ಬಿಡುತ್ತಾರೆ. ಇದನ್ನು ಅವರು 'ಪಾಲಿಗೆ' ಬಿಡುವುದು ಎಂದೂ ಹೇಳುತ್ತಾರೆ. ಅದರಲ್ಲಾಗುವ ಮರಿಗಳು ಒಮ್ಮೆ ಮಾಲೀಕನಿಗಾದರೆ, ಮತ್ತೊಮ್ಮೆ ಸಾಕುವವನಿಗಾಗುತ್ತವೆ. ಇದರಿಂದ ಆರ್ಥಿಕವಾಗಿ ಹಿಂದುಳಿದಿರುವ ಜನರು ಚೇತರಿಸಿಕೊಳ್ಳಲು ಅವಕಾಶವಾಗುತ್ತದೆ. ಅಲ್ಲದೆ ಪ್ರಾಣಿಗಳ ಉತ್ಪಾದನೆಯೂ ಹೆಚ್ಚಾಗುವು ದರಿಂದ ಮಾಲೀಕನಿಗೂ ಲಾಭವೇ ಆಗುತ್ತದೆ, ಕೋಳಿಗಳನ್ನು ಸಾಮಾನ್ಯವಾಗಿ ಮನೆಗಳಲ್ಲಿ ಆಹಾರಕ್ಕೆಂದೇ ಸಾಕುತ್ತಾರೆ. ನೆಂಟರಿಷ್ಟರು ಬಂದಾಗ, ಹಬ್ಬಹರಿದಿನಗಳಲ್ಲಿ, ಮದುವೆ ಮುಂತಾದ ಸಂಭ್ರಮದ ದಿನಗಳಲ್ಲಿ ಕೋಳಿ ಕೊಯ್ದು ಮಾಂಸದಡುಗೆ ಮಾಡುತ್ತಾರೆ. ಬಾಣಂತಿಗೆ ವಾರಕ್ಕೊಮ್ಮೆ ತಲೆಗೆ ನೀರು ಹಾಕುವಾಗ, ಕೋಳಿಮಾಂಸದ ಸಾರನ್ನು ಮಾಡಿ ಉಣಬಡಿಸುತ್ತಾರೆ. ವಿಶೇಷವಾಗಿ ಭಾನುವಾರಗಳಲ್ಲಿ ಮಾಂಸದಡುಗೆಯನ್ನು ಮಾಡುವುದು ಕ್ರೈಸ್ತರಲ್ಲಿ ರೂಢಿಯಲ್ಲಿದೆ. ಮಾರ್ಟಳ್ಳಿಯ ಕ್ರೈಸ್ತರು ಮೊಲ, ಜಿಂಕೆ, ಕಾಡುಕೋಳಿ, ಕೌದಾರಿ (ಕೋಳಿಜಾತಿಗೆ ಸೇರಿದ ಹಾರುವ ಪಕ್ಷಿ) ಮುಂತಾದವುಗಳನ್ನು ಬೇಟೆಯಾಡಿ, ಆ ಮಾಂಸವನ್ನು ಭುಜಿಸುತ್ತಾರೆ. ಮಾಂಸ ಹೆಚ್ಚಿನ ಪ್ರಮಾಣದಲ್ಲಿದ್ದರೆ ತೆಳ್ಳಗೆ ಕೊಯ್ದು ಬಿಸಿಲಿನಲ್ಲಿ ಒಣಗಿಸಿಡುತ್ತಾರೆ. ಇಲ್ಲಿ ಬೇಟೆ

ನಿಷಿದ್ಧವಾಗಿದ್ದರೂ ಅವಕಾಶ ಸಿಕ್ಕಲ್ಲಿ ಬಿಡದೆ ಮಾಂಸ ಶೇಖರಣೆ ಮಾಡುತ್ತಾರೆ. ಇವರು ಗುಳ್ಳೆನರಿಯ ಮಾಂಸವನ್ನೂ ತಿನ್ನುತ್ತಾರೆ. ನಾಯಿಕೆಮ್ಮು ಕಾಯಿಲೆಗೆ ಇದನ್ನು ಔಷಧಿಯಾಗಿ ಬಳಸುತ್ತಾರೆ. ಕೋಳಿ ತಿನ್ನುವ ಆಸೆಯಿಂದ ಹಿತ್ತಲಿಗೆ ಬರುವ ಗುಳ್ಳೆನರಿಗಳು ಸುಲಭವಾಗಿ ಬೇಟೆಗೆ ಸಿಗುತ್ತವೆ. ಗುಳ್ಳೆನರಿಯ ಬಾಲವನ್ನು ಮನೆಯ ಸೂರಿಗೆ ನೇತುಹಾಕುತ್ತಾರೆ. ಬೆಳಿಗ್ಗೆ ಎದ್ದು ನರಿಯ ಬಾಲವನ್ನು ನೋಡಿದರೆ ಅದೃಷ್ಟ ಎಂದು ತಿಳಿದಿದ್ದಾರೆ. 'ನರಿಯ ಮುಖ ನೋಡಿದ್ದಾನೆ' ಎಂಬ ಗಾದೆಯನ್ನು ಇಲ್ಲಿ ಸ್ಮರಿಸಬಹುದು.

6.2.1.5 **ಕೃಷಿ** ಬುಡಕಟ್ಟು ಕ್ರೈಸ್ತರು ನಾನಾವೃತ್ತಿಗಳನ್ನು ಅವಲಂಬಿಸಿದ್ದರೂ ಅವರಿಗೆ ತಮ್ಮ ವೃತ್ತಿಯ ಬಗ್ಗೆ ಕೀಳರಿಮೆ ಇಲ್ಲ, ಮತಾಂತರ ಹೊಂದುವುದಕ್ಕಿಂತ ಪೂರ್ವದಲ್ಲಿ ಅವಲಂಬಿಸಿದ್ದ ವೃತ್ತಿಗಳನ್ನೇ ಈಗಲೂ ಮುಂದುವರೆಸಿಕೊಂಡು ಬಂದಿದ್ದಾರೆ. ಇದರಿಂದ ಇವರ ವೃತ್ತಿಗೌರವ ವ್ಯಕ್ತವಾಗುತ್ತದೆ.

ಯಾವ ವೃತ್ತಿಯನ್ನು ಕೈಗೊಂಡಿದ್ದರೂ ಧಾರ್ಮಿಕ ಜೀವನದಲ್ಲಿ ಮೇಲುವರ್ಗದವರೊಡನೆ ಇವರಿಗೆ ಸಮಾನತೆ ದೊರೆತಿದೆ.ಇವರು 'ವಾರಕ್ಕೆ' ಅಥವಾ 'ಪಾಲಿಗೆ' ಬಿಡುವುದರ ಮೂಲಕ ಸಮಾಜದಲ್ಲಿ ಆರ್ಥಿಕವಾಗಿ ಹಿಂದುಳಿದವರಿಗೆ ಸಹಾಯಹಸ್ತ ನೀಡುವ ಅವಕಾಶವನ್ನು ಕಲ್ಪಿಸಿಕೊಂಡಿದ್ದಾರೆ. ಆ ಮೂಲಕ ಸಹಕಾರ ಜೀವನವನ್ನು ಉಳಿಸಿಕೊಂಡಿದ್ದಾರೆ.ಊರಿನ ಹಬ್ಬಗಳಲ್ಲಿ ಧಾರ್ಮಿಕ ಹಾಗೂ ಆರ್ಥಿಕ ಚಟುವಟಿಕೆಗಳಲ್ಲಿ ಸಕ್ರಿಯಪಾತ್ರ ವಹಿಸುವುದರಿಂದ ಇವರ ಒಗ್ಗಟ್ಟು ವ್ಯಕ್ತವಾಗುತ್ತದೆ.

ಇವರ ಆರ್ಥಿಕ ವ್ಯವಸ್ಥೆಯಲ್ಲಿ ಆದಾಯ ಒಂದು ಮುಖವಾದರೆ ವೆಚ್ಚ ಮತ್ತೊಂದು ಮುಖವಾಗಿರುತ್ತದೆ.

6.2.1.6 **ವಾಣಿಜ್ಯ ಬೆಳೆಗಳು** ಕೊಳ್ಳೇಗಾಲದ ಗ್ರಾಮಗಳಲ್ಲಿ ನೆಲಸಿರುವ ತಮಿಳು ಕ್ರೈಸ್ತರು ತೋಟದ ಬೆಳೆಯನ್ನಾಗಿ ತೆಂಗನ್ನು ಬೆಳೆಯುತ್ತಾರಾದರೂ ಅವರ ಪಾಲಿಗೆ ಇದು ವ್ಯಾಪಾರದ ಬೆಳೆಯಾಗಿಲ್ಲ. ಕೆಲವರು ಮಾತ್ರ ಅಂಗಡಿಗಳಿಗೆ ಕಾಯಿ ಮಾರಾಟಮಾಡುವರು. ಆದರೆ ತೆಂಗು ಬೆಳೆಯುವ ಜನ ಮನೆಗೆ ಬಂದವರಿಗೆಲ್ಲಾ ಎಳನೀರು ಕುಡಿಸದೆ ಕಳುಹಿಸುವುದಿಲ್ಲ. ಇದು ಅವರ ಅತಿಥಿ ಸತ್ಕಾರವನ್ನು ಪರಿಚಯಿಸುತ್ತದೆ.

ಮೆಣಸಿನಕಾಯಿ, ಅವರೇಕಾಯಿ, ಟೊಮೋಟೋ, ಕುಂಬಳಕಾಯಿ ಇವು ವ್ಯಾಪಾರಕ್ಕೆ ನಿಲುಕುವ ಬೆಳೆಗಳಾಗಿವೆ. ಹೆಚ್ಚಿನ ಪ್ರಮಾಣದಲ್ಲಿ ಬೆಳೆದು ಕೊಳ್ಳೇಗಾಲಕ್ಕೆ ತಂದು ವ್ಯಾಪಾರ ಮಾಡುತ್ತಾರೆ.ನೀರಿನ ಆಶ್ರಯವಿದ್ದಲ್ಲಿ ಕ್ರೈಸ್ತರು ಬದನೆ, ಅವರೆ,ಗೋರಿಕಾಯಿ, ಸೊಪ್ಪಿನಕಡ್ಲೆ, ಹುರುಳಿಕಾಯಿ ಇತ್ಯಾದಿಗಳನ್ನು ಬೆಳೆದುಕೊಳ್ಳುವುದು ಅತಿಸಾಮಾನ್ಯ.

**6.2.1.7 ಆಹಾರ ಬೆಳೆಗಳು** ಮಾನವ ಕಷ್ಟಪಟ್ಟು ತನ್ನ ಹೊಟ್ಟೆಪಾಡಿಗಾಗಿಯೂ, ತನ್ನನ್ನೇ ನಂಬಿಕೊಂಡಿರುವ ತನ್ನ ಸಂತತಿಗಾಗಿಯೂ ದುಡಿಯುತ್ತಾನೆ. ರಾಗಿ ಮೈಸೂರಿನ ಎಲ್ಲಾ ತಾಲ್ಲೂಕುಗಳಲ್ಲಿಯೂ ಸಾಮಾನ್ಯ ಬೆಳೆಯಾಗಿರುವುದರಿಂದ ಇಲ್ಲಿಯವರ ಮುಖ್ಯ ಆಹಾರವಾಗಿದೆ. ಇವರು ಭೋಜನಕ್ಕಾಗಿ ಹೆಚ್ಚು ಹಣ ವ್ಯಯಮಾಡುವಂತಿಲ್ಲ. ಮೈಸೂರು ನಗರದಲ್ಲಿ ವಾಸಿಸುವ ಜನ ಅಕ್ಕಿಯನ್ನು ಕೊಂಡು ತಿನ್ನುವರು, ಹಳ್ಳಿಗಳಲ್ಲಿ ಅಕ್ಕಿಗಿಂತಲೂ ರಾಗಿಗೆ ಆದ್ಯತೆ. ಇಂದಿಗೂ ಹಳ್ಳಿಗಳ ಕಡೆ ಮದುವೆಗಳಲ್ಲಿ ರಾಗಿ ಮುದ್ದೆ ಬಡಿಸುವ ಪದ್ಧತಿ ರೂಢಿಯಲ್ಲಿದೆ.

ಕೊರಗ ಕ್ರೈಸ್ತರಿಗೆ ಸಾಂಬಾರು ತಯಾರಿಸಲು ಬೇಳೆಯೇ ಆಗಬೇಕೆಂದಿಲ್ಲ. ತಾವು ತಮ್ಮ ಹೊಲಗಳಲ್ಲಿ ಬೆಳೆದ ಕಾಳುಗಳನ್ನೇ ಉಪಯೋಗಿಸುತ್ತಾರೆ. ಬೆಳಗಿನ ತಿಂಡಿಗೆ ತಂಗಳು ಉಳಿದಿದ್ದರೆ ಮಾತ್ರ ಮಧ್ಯಾಹ್ನಕ್ಕೆ ಮುದ್ದೆ, ಸಾರು ಮಾಡಿಕೊಳ್ಳುವರು. ನಂತರ ಒಲೆ ಹಚ್ಚುವುದು ದುಡಿಮೆಯಿಂದ ಹಿಂತಿರುಗಿದ ಮೇಲೆಯೇ. ಇತರ ಧರ್ಮೀಯರಿಗಿಂತ ಕ್ರೈಸ್ತರು ಈ ಪದ್ಧತಿಯಲ್ಲಿ ಭಿನ್ನವಾಗಿಲ್ಲ. ಭಾನುವಾರ ಶ್ರೇಷ್ಠ ದಿನವೆಂದು ಆಚರಿಸುವುದರಿಂದ ಮನೆಗಳಲ್ಲಿ ಸಾಕುವ ಕೋಳಿಗಳನ್ನೋ, ಬೇಟೆಯಾಡಿ ಶೇಖರಿಸಿರುವ (ಕಾಡುಗಳಿದ್ದಲ್ಲಿ ಮಾತ್ರ) ಮಾಂಸವನ್ನೋ ಭುಜಿಸುತ್ತಾರೆ.

ಸಿದ್ದಿ ಕ್ರೈಸ್ತರು ಗದ್ದೆಗಳಲ್ಲಿ ಸಿಗುವ 'ನಳ್ಳಿ'ಯನ್ನು ಬಹುಪ್ರಿಯವಾಗಿ ಅಡುಗೆಗೆ ಉಪಯೋಗಿಸುತ್ತಾರೆ. ಅಂತೆಯೇ ಅಣಬೆ ಮಳೆಯ ಕಾಲದಲ್ಲಿ ಅಣಬೆ ಅಡುಗೆ ವಿಶೇಷ. ನುಗ್ಗೆಸೊಪ್ಪು, ಅಣ್ಣಿಸೊಪ್ಪು ಗಳನ್ನು 'ಉಪ್ಪೆಸ್ರು' ಮಾಡಲು ಉಪಯೋಗಿಸುತ್ತಾರೆ. ಕೆಸುವು, ಬಾಳೆದಿಂಡು, ಕಳಲೆ ಇತ್ಯಾದಿ ಗಳನ್ನು ವಿರಳವಾಗಿ ಬಳಸುತ್ತಾರೆ. ಮಾರ್ಟಳ್ಳಿಯಲ್ಲಿ 'ಕಂಬಕ್ಕಿಯನ್ನು ಕುಟ್ಟಿ' ಆ ನುಚ್ಚಿನಿಂದ ಅನ್ನವನ್ನು ಮಾಡುತ್ತಾರೆ. ಕಂಬಕ್ಕಿಯಿಂದ ಹಿಟ್ಟು ಮಾಡಿಸಿ ಮುದ್ದೆ, ರೊಟ್ಟಿಗಳನ್ನು ಮಾಡಿ ಆಹಾರವಾಗಿ ಉಪಯೋಗಿಸುತ್ತಾರೆ. ಎಷ್ಟೇ ದುಡಿದರೂ ಸಾಧಾರಣವಾದ ಎರಡು ಹೊತ್ತಿನ ಊಟಕ್ಕೆ ಸರಿಹೋಗುವುದರಿಂದ ಭಕ್ಷ-ಭೋಜನಗಳು ಇವರ ವಿಶೇಷ ಆಹಾರವೆಂದರೆ ಅಪರೂಪಕ್ಕೆ ಕಾಡಲ್ಲಿ ಸಿಗುವ ಮೊಲ ಮಾತ್ರ ಕ್ರೈಸ್ತರಲ್ಲಿ ಮುಖ್ಯವಾಗಿ ಎರಡೇ ಹಬ್ಬಗಳು ಆಚರಣೆಯಲ್ಲಿವೆ. ಅಲ್ಲದೆ ಗ್ರಾಮದ ಚರ್ಚಿನ ಹಬ್ಬವನ್ನು ಆಚರಿಸುವುದು ವಾಡಿಕೆ. ಹಿಂದುಗಳಲ್ಲಿ ಆಚರಣೆಯಲ್ಲಿರುವಂತೆ ಅನೇಕ ಹಬ್ಬಗಳು ಕ್ರೈಸ್ತರಲ್ಲಿ ಆಚರಣೆಯಲ್ಲಿಲ್ಲ. ಅಂದರೆ ಹಬ್ಬಗಳ ನೆಪದಿಂದಲಾದರೂ ಆಗಾಗ ತಿಂಡಿತಿನಿಸುಗಳನ್ನು ತಯಾರಿಸಿಕೊಂಡು ತಿನ್ನುವ ಅವಕಾಶ ಇವರಿಗೆ ಇಲ್ಲ.

ಪಟ್ಟಣಗಳಲ್ಲಿ ವಾಸಿಸುವ ಮೈಸೂರು ಜಿಲ್ಲೆಯ ಕ್ರೈಸ್ತರ ಪದ್ಧತಿ ಇದಕ್ಕೆ ತದ್ವಿರುದ್ಧವಾಗಿದೆ. ಸಾಮಾನ್ಯವಾಗಿ ದಂಪತಿಗಳಿಬ್ಬರೂ ನೌಕರಿ ಮಾಡುವುದರಿಂದ ಅವರಿಗೆ ಒಳ್ಳೆಯ ವರಮಾನ ವಿರುತ್ತದೆ.ರುಚಿರುಚಿಯಾದ ಅಡುಗೆಗಳನ್ನು ಅಣಿಗೊಳಿಸಿಕೊಳ್ಳಲು

ತೊಡಕುಗಳಿರುವುದಿಲ್ಲ. ಅದೇನೇ ಇರಲಿ, ಜನಪದ ಆರ್ಥಿಕಸ್ಥಿತಿಗತಿಗಳ ಒಂದು ಸ್ಪಷ್ಟಚಿತ್ರ ಸಿಗುವುದು ಹಳ್ಳಿಗಳಲ್ಲಿಯೇ ಎಂಬುದರಲ್ಲಿ ಸಂದೇಹವಿಲ್ಲ.

6.2.1.8 **ವಿನಿಮಯ ಪದ್ಧತಿ** ಕರ್ನಾಟಕದ ಬುಡಕಟ್ಟು ಕ್ರೈಸ್ತರಲ್ಲಿ ಇಂದಿಗೂ ಧಾನ್ಯವಿನಿಮಯ ಪದ್ಧತಿ ರೂಢಿಯಲ್ಲಿದೆ.ಕೊರಗ ಮತ್ತು ಸಿದ್ದಿ ಕ್ರೈಸ್ತರು ತಾವು ವಾಸಿಸುವ ಸ್ಥಳಗಳಿಂದ ತಾವು ಬೆಳೆದ ಬೆಳೆಗಳಾದ ತರಕಾರಿ,ಬಾಳೆಹಣ್ಣು,ಹಲಸಿನಹಣ್ಣು ಇತ್ಯಾದಿಗಳನ್ನು ಪಟ್ಟಣಗಳಿಗೆ ತಂದು ಕೊಟ್ಟು ತಮಗೆ ಬೇಕಾದ ದಾನ್ಯಗಳನ್ನು ಪಡೆಯುತ್ತಾರೆ. ಕೊಂಬುತೂಕಿ, ದೊಡ್ಡೆಣೆ ಮುಂತಾದ ಮಲೆಗಳಲ್ಲಿ ವಾಸಿಸುವ ತಮಿಳು ಕ್ರೈಸ್ತರು ಹುಣಸೇಹಣ್ಣು, ಹಲಸಿನಹಣ್ಣು ಇತ್ಯಾದಿಗಳನ್ನು ಮಾರ್ಟಳ್ಳಿಗೆ ತಂದುಕೊಟ್ಟು ರಾಗಿ, ಮೆಣಸಿನಕಾಯಿ, ಕಂಬಕ್ಕಿ, ಮೆಕ್ಕೆಜೋಳ ಮುಂತಾದುವುಗಳನ್ನು ಪಡೆಯುತ್ತಾರೆ. ಬುಡಕಟ್ಟು ಕ್ರೈಸ್ತರಲ್ಲೂ ಈ ಪದ್ಧತಿಯನ್ನು ಪಾಲಿಸಿಕೊಂಡು ಬರುತ್ತಿದ್ದಾರೆ. ತಾವು ಬೆಳೆಯುವ ಬೆಳೆಯನ್ನು ನೆರೆಹೊರೆಯವರೊಂದಿಗೆ ವಿನಿಮಯ ಮಾಡಿಕೊಳ್ಳುವ ಪದ್ಧತಿಯನ್ನು ಉಳಿಸಿಕೊಂಡಿದ್ದಾರೆ.

6.2.1.9 **ಗುತ್ತಿಗೆ** ಡೋರ್ನಹಳ್ಳಿ ಸಮೃದ್ಧವಾದ ಗ್ರಾಮ. ಇಲ್ಲಿನ ಮುಖ್ಯ ಬೆಳೆ ಭತ್ತ ಮತ್ತು ರಾಗಿ ತಮ್ಮ ಕುಟುಂಬಗಳಿಗಾಗುವಷ್ಟು ಮಾತ್ರ ಬೆಳೆದು ಕೊಳ್ಳುತ್ತಾರೆ. ತಮ್ಮ ಭೂಮಿಯನ್ನು ಗುತ್ತಿಗೆ ಕೊಡುವುದು ಇಲ್ಲಿ ಎರಡು ವಿಧದಲ್ಲಿ ರೂಢಿಯಲ್ಲಿದೆ.

1) ಗುತ್ತಿಗೆ ಕೊಡುವುದಾಗಲೀ ಬೆಳೆಯುವ ಧಾನ್ಯದ ನಿಗದಿತ ಭಾಗವನ್ನು ಕೊಡುವುದಾಗಿ ತೀರ್ಮಾನಿಸಕೊಳ್ಳುವುದು.

2) ವಾರಕ್ಕೆಂದು ಕೊಡುವುದಾದರೆ ಬೆಳೆದ ಧಾನ್ಯದ ಅರ್ಧಭಾಗವನ್ನು ಮಾಲೀಕನಿಗೆ ಕೊಟ್ಟು ಉಳಿದದ್ದನ್ನು ದುಡಿಯುವವನು ಇಟ್ಟುಕೊಳ್ಳುವುದು, ಕೂಡಲೂರು, ನಾಗನಹಳ್ಳಿಗಳಲ್ಲೂ ಇದೇ ಪದ್ಧತಿ ಜಾರಿಯಲ್ಲಿರುವುದು ಕಂಡು ಬರುತ್ತದೆ.

ಬುಡಕಟ್ಟು ಕ್ರೈಸ್ತರಲ್ಲೂ ಈ ಪದ್ಧತಿ ರೂಢಿಯಲ್ಲಿದ್ದು, ಅವರು ಅದನ್ನು "ಪಾಲಿಗೆ ಬಿಡುವುದು" ಎಂದು ಹೇಳುತ್ತಾರೆ. ಬೆಳೆದ ಬೆಳೆಯಲ್ಲಿ ಮೂರನೆಯ ಒಂದು ಭಾಗವನ್ನು ಮಾಲಿಕನಿಗೆ ಕೊಡುವುದು ಕ್ರಮ.

6.2.1.10 **ವಾರದ ಸಂತೆ** ಕರ್ನಾಟಕದ ರಾಜ್ಯದ ಹಳ್ಳಿಗಳಲ್ಲಿ ವಾರದ ಸಂತೆ ವ್ಯವಸ್ಥೆ ಇರುತ್ತದೆ.ಕೊರಗರು ಮತ್ತು ಸಿದ್ದಿಗಳು ತಾವು ಬೆಳೆದ ಅಥವಾ ಕಾಡಿನಲ್ಲಿ ವಸ್ತುಗಳನ್ನು ತಮ್ಮ ತಾಲ್ಲೂಕಿನ ಪ್ರಮುಖ ಪಟ್ಟಣಗಳಲ್ಲಿ ಮಾರುತ್ತಾರೆ. ಸಿದ್ದಿಗಳು ಮುಂಡಗೋಡಿನಲ್ಲಿ ಹಾಗೂ ಕೊರಗರು ಬೆಳ್ತಂಗಡಿಯಲ್ಲಿ ಮಾರಾಟಮಾಡುವುದನ್ನು

ಕಾಣಬಹುದು ಪ್ರಮುಖವಾಗಿ ಕೋಳಿ,ತರಕಾರಿ,ಅವರೆ,ತೊಗರಿ,ಮೆಣಸಿನಕಾಯಿ, ಇತರ ತರಕಾರಿಗಳನ್ನು ಹೊತ್ತು ತಂದು ರಾಶಿ ಹಾಕಿ ಮಾರುತ್ತಾರೆ. ಕೊಳ್ಳುವವರೂ ವಾರಕ್ಕೊಮ್ಮೆ ಸಂತೆಯಿಂದ ತಮ್ಮ ಜೀವನಕ್ಕೆ ಬೇಕಾಗುವ ವಸ್ತುಗಳನ್ನು ಕೊಂಡುಕೊಳ್ಳುತ್ತಾರೆ. 'ವಾರ' ಎಂಬುದು ಗ್ರಾಮೀಣ ಬದುಕಿನಲ್ಲಿ ಬಹುಮುಖ್ಯ ಸ್ಥಾನ ಪಡೆದಿದೆ. ಏಕೆಂದರೆ ಕೂಲಿ ಕೆಲಸ ಮಾಡುವವರು ತಮ್ಮ ದುಡಿಮೆಯ ಫಲವನ್ನು ವಾರಕ್ಕೊಮ್ಮೆ ಬಟವಾಡೆಯ ರೂಪದಲ್ಲಿ ಪಡೆಯುತ್ತಾರೆ ಎಂಬುದು ಒಂದು ಕಾರಣವಾದರೆ, ಯಾವ ತರಕಾರಿಯೇ ಆಗಲಿ ವಾರಕ್ಕಿಂತಲೂ ಹೆಚ್ಚು ದಿನ ಇಡಲಾಗದು ಎಂಬುದು ಮತ್ತೊಂದು ಕಾರಣವಾಗಿದೆ.

## ಅಡಿ ಟಿಪ್ಪಣಿ

1 ವಕ್ತೃ: ಬೇಬಿ ಸಿಕ್ವೇರಾ, ವಯಸ್ಸು 50, ಕೆ.ಆರ್.ಪೇಟೆ.
2. ವಕ್ತೃ: ಪಾಸ್ಕಿನ್ ದಿಯೋಗ ಸಿದ್ದಿ ವಯಸ್ಸು 50, ಕಿರುವತ್ತಿ.
3. ವಕ್ತೃ : ರೋಜಾ ವಯಸ್ಸು 30, ಕೆ.ಆರ್.ಪೇಟೆ.
4. ರೂಪಾಂತರ : ಮನೆಯ ಯಾಜಮಾನಿಯೇ ಹೊರಗೆ ಬಾ, ನಿನ್ನ ಮಗ ಸೊಸೆ ನಿನ್ನ ಮನೆಗೆ ಬಂದಿದ್ದಾರೆ.
5. ವಕ್ತೃ : ಮರಿಯಮ್ಮ ವಯಸ್ಸು 65, ಡೋರ್ನಹಳ್ಳಿ
6. ಕನ್ನಡ ರೂಪಾಂತರ : ಹಳಿಗುಳಿಮನೆ, ಆಡುತ್ತಿರುವ ವಧುವರರು ತಾಳಿ ಬಂಧನವೆಂಬ ಜೋಡು ಸರಪಳಿಯಿಂದ ಬಂಧಿತರಾಗಿದ್ದಾರೆ.
7. ವಕ್ತೃ: ರೀಟಾಜಯ್ಸ್ ವಯಸ್ಸು 50, ಮೈಸೂರು.
8. ವಕ್ತೃ : ಮರಿಯಮ್ಮ, ವಯಸ್ಸು 60, ನಾಗನಹಳ್ಳಿ.
9. ವಕ್ತೃ : ಮರಿಯಣ್ಣ ವಯಸ್ಸು 70, ಮೈಸೂರು.
10. "ನಾ ನಿನ್ನಲ್ಲಿ, ನೀ ನನ್ನಲ್ಲಿ ದೈವವು ನಮ್ಮಲ್ಲಿ" –ಎಸ್–ಮ್ಯಾನುವೇಲ್.
11. ವಕ್ತೃ: ಆರೋಗ್ಯಮ್ಮಳ, ವಯಸ್ಸು 70, ವಡ್ಡರದೊಡ್ಡಿ, ಕೊಳ್ಳೆಗಾಲ.
12.ವಕ್ತೃ: ಮರಿಯಾ ಸಂತಾನ್ ಸಿದ್ದಿ, ವಯಸ್ಸು 60, ಮೈನಹಳ್ಳಿ.
13.ವಕ್ತೃ: ಸಿರಿಲ್ ಡಿಸೋಜ ವಯಸ್ಸು 60, ವೇಣೂರು.
14.ವಕ್ತೃ: ಸೈಮನ್ ಸಂತಾನ್ ವಯಸ್ಸು 40, ಉಗ್ಗಿನಕೇರಿ , ಮುಂಡಗೋಡ.
15.ವಕ್ತೃ: ಶಾಂತರಾಜ್ ವಯಸ್ಸು 35, ನಾಗಹಳ್ಳಿ, ಎಚ್.ಡಿ.ಕೋಟೆ.

16.ವಕ್ತೃ: ಅಂತೋಣಿಯಮ್ಮಳ ವಯಸ್ಸು 55, ಸಂದನಪಾಳ್ಯ.

17.ವಕ್ತೃ: ಲೂಯಿಸ್ ಡಿಕಾಸ್ತ ವಯಸ್ಸು 55, ಕೆಳಂಗಂಡಿ, ಬೆಳ್ತಂಗಡಿ ತಾಲ್ಲೂಕು.

18.ವಕ್ತೃ: ಮರಿಯಸಗಾಯಂ, ವಯಸ್ಸು 55, ವಡ್ಡರದೊಡ್ಡಿ ಕೊಳ್ಳೆಗಾಲ

# ಅಧ್ಯಾಯ– 7

## ಮೌಖಿಕ ಸ್ವಾಹಿತ್ಯದಲ್ಲಿ ಅಭಿವ್ಯಕ್ತಗೊಳ್ಳುವ ಜೀವನ ಮತ್ತು ಸಂಸ್ಕೃತಿ

7.1 **ಕಥೆಗಳು** ಕರ್ನಾಟಕದಲ್ಲಿ ಕಥೋಲಿಕ ಕ್ರೈಸ್ತರ ಸಂಖ್ಯೆ ಕಡಿಮೆ ಇದ್ದರೂ ಅವರದೇ ಆದ ಸಾಹಿತ್ಯ ಪರಂಪರೆಯಿದೆ. ಕ್ರೈಸ್ತ ಸಾಹಿತ್ಯವು ಹೆಚ್ಚಾಗಿ ಅನುವಾದ ಇಲ್ಲವೇ ರೂಪಾಂತರ ರೂಪದಲ್ಲಿದೆ. ಲಭ್ಯ ಇರುವ ಕೃತಿಗಳಲ್ಲಿ ಧಾರ್ಮಿಕ ತತ್ವವುಳ್ಳ ಧಾರ್ಮಿಕ ಕೃತಿಗಳದೇ ಸಿಂಹಪಾಲು. ಇದಕ್ಕೆ ಕಾರಣವೂ ಇಲ್ಲದಿಲ್ಲ. ಮತಪ್ರಚಾರದ ಗುರಿಯನ್ನಿಟ್ಟುಕೊಂಡು ಇಲ್ಲಿಗೆ ಆಗಮಿಸಿದ ಪಾಶ್ಚಾತ್ಯ ಮಿಷನರಿಗಳು ಕನ್ನಡ ಕಲಿತು ಕನ್ನಡದಲ್ಲೇ ಯೇಸುವಿನ ಸಂದೇಶವನ್ನು ಮನಮುಟ್ಟುವಂತೆ ಜನರಿಗೆ ತಿಳಿಸುವ ಉದ್ದೇಶಕ್ಕಾಗಿ ಪುಸ್ತಕಗಳನ್ನು ಬರೆದರು. "ಮತಪ್ರಸಾರದ ದೃಷ್ಟಿಯಿಂದ ದೇಶೀಯರ ಪರಿವರ್ತನಕ್ಕೆ ಉಪಯೋಗ ಬೀಳುವ ಸಾಹಿತ್ಯವು ಯಾವುದೇ ಭಾಷೆಯಲ್ಲಿರಲಿ ಅದನ್ನು ಅನುವಾದಿಸಿ ಮುದ್ರಿಸುವುದು ಅವರಿಗೆ ಸೂಕ್ತವಾಗಿ ಕಂಡಿತು. ಅಂತೆಯೇ ಅನೇಕ ಅನುವಾದಗಳಲ್ಲಿ ಮೂಲ ಲೇಖಕ ಅಥವಾ ಅನುವಾದಕರ ಹೆಸರನ್ನು ಹೇಳಿಲ್ಲ" (ಶ್ರೀನಿವಾಸ ಹಾವನೂರ:1974:418). ಹೀಗಾಗಿ ಧಾರ್ಮಿಕ ಕೃತಿಗಳ ಸಂಖ್ಯೆಯೇ ಅಧಿಕವಾಯಿತು.

"ಜನಪದ ಸಾಹಿತ್ಯವೆನ್ನುವುದು ಜಾನಪದ ಚಕ್ರದ ಒಂದು ಪುಟ" (ಹಾಮಾನಾ 1971:29). ಆದ್ದರಿಂದ ಕ್ರೈಸ್ತಜನಪದ ಸಂಪ್ರದಾಯಗಳ ಈ ಅಧ್ಯಯನದಲ್ಲಿ ಕ್ರೈಸ್ತಜನಪದ ಸಾಹಿತ್ಯವನ್ನು ಅಭ್ಯಸಿಸುವುದು ಯುಕ್ತವಾಗಿದೆ. ಮೈಸೂರು ಜಿಲ್ಲೆ ಜನಪದ ಸಾಹಿತ್ಯದ ಶ್ರೀಮಂತ ಪ್ರದೇಶವಾಗಿದೆ (ಜೀಶಂಪ 1975:93). ಇಂತಹ ಫಲವತ್ತಾದ ನೆಲದಲ್ಲಿ ಕ್ರೈಸ್ತ ಜಾನಪದ ಕೃಷಿ ಅಲ್ಪಸ್ವಲ್ಪವಾದರೂ ನಡೆದಿರುವುದು ಸಮಾಧಾನಕರ ಸಂಗತಿ. ಏಕದೇವತಾ

ಉಪಾಸಕರಾದ ಕ್ರೈಸ್ತರಲ್ಲಿ ಜನಪದ ಅಸ್ತಿತ್ವ ತಾಳುವುದು ಕಷ್ಟವೇ ಆದರೂ ಜಗತ್ತಿನ ಎಲ್ಲೆಡೆಯಲ್ಲಿಯೂ ಇಂತಹ ಏಕದೇವೋಪಾಸಕ ಜನರಲ್ಲೂ ಜನಪದ ವಿಫುಲವಾಗಿ ಬೆಳೆದಿರುವುದನ್ನು ಕಾಣುತ್ತೇವೆ. ಒಂದು ಕಾಲಕ್ಕೆ ಕ್ರೈಸ್ತರಿಗೆ ನಿಷೇಧವೆಂದು ಕೊಂಡಿದ್ದ ಎಲ್ಲಾ ಸಾಂಸ್ಕೃತಿಕ ಸಂದರ್ಭಗಳೂ ಇಲ್ಲಿನ ವಿಶಿಷ್ಟ ಸನ್ನಿವೇಶದಿಂದಾಗಿ ಒಂದಲ್ಲ ಒಂದು ರೀತಿಯಲ್ಲಿ ಮಹತ್ವವನ್ನು ಪಡೆದುಕೊಂಡಿವೆ. ಬುಡಕಟ್ಟುಕ್ರೈಸ್ತರ ಜನಪದ ಸಾಹಿತ್ಯ ಈ ಕಾರಣಕ್ಕಾಗಿ ವಿಶೇಷ ಪರಿಶೀಲನಾರ್ಹವಾಗಿದೆ.

ಮಾನವನ ಜೀವನದಲ್ಲಿ ಜರುಗುವ ಜನನ, ಮದುವೆ, ಮರಣ ಇತ್ಯಾದಿ ಸಂದರ್ಭಗಳಲ್ಲಿ ಧಾರ್ಮಿಕ ಆಚರಣೆಗೆ ಧಕ್ಕೆ ಬರದಂತೆ ಸಾಮಾಜಿಕ ಆಚರಣೆಗಳನ್ನು ವಿಶಿಷ್ಟ ರೀತಿಯಲ್ಲಿ ಅಳವಡಿಸಿಕೊಂಡಿರುವ ಕ್ರೈಸ್ತರಲ್ಲಿ ಹಾಡುಗಳನ್ನು ಹಾಡುವುದು ರೂಢಿಯಲ್ಲಿದೆ. ಇದರಲ್ಲಿ ಲಾಲಿ ಹಾಡುಗಳಷ್ಟೇ ಪ್ರಾಮುಖ್ಯತೆ ಶವಸಂಸ್ಕಾರದಲ್ಲಿ ಹಾಡುವ ಶೋಕಗಳಿಗೂ ಇದೆ. ಇವು ಕನ್ನಡ, ತಮಿಳು, ಕೊಂಕಣಿ, ತುಳು ಮಾತನಾಡುವ ಕರ್ನಾಟಕದ ಎಲ್ಲಾ ಕ್ರೈಸ್ತರಲ್ಲೂ ರೂಢಿಯಲ್ಲಿವೆ. ಬುಡಕಟ್ಟು ಕ್ರೈಸ್ತರು ಅನ್ಯಧರ್ಮೀಯರೊಡನೆ ಹೊಂದಾಣಿಕೆಯ, ಸಾಮರಸ್ಯದ ಬಾಳನ್ನು ಬಾಳುತ್ತಿರುವುದರಿಂದ ಇವರ ಧಾರ್ಮಿಕ ವಿಧಿಗಳ ಹೊರತು ಉಳಿದೆಲ್ಲಾ ಆಚಾರ-ವಿಚಾರಗಳೂ ಬಹುತೇಕ ಹಿಂದೂಗಳನ್ನೇ ಅನುಕರಿಸಿದಂತಿದೆ.

ಜನಪದ ಸಾಹಿತ್ಯ ಜನಪದ ಜೀವನದ ದರ್ಪಣವಾಗಿದೆ. ದಿನವೆಲ್ಲಾ ದುಡಿದು ದಣಿದ ಜೀವದ ಅನಿಸಿಕೆಗಳು ಹಾಡುಗಳಾಗಿಯೂ, ಕಥೆಗಳಾಗಿಯೂ ಹರಿದು, ಅವರ ಜೀವನ ಮತ್ತು ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ. ಮಗು ಹುಟ್ಟಿದಾಗಲೇ ಜನಪದ ಜಗತ್ತನ್ನು ಪ್ರವೇಶಿಸುತ್ತದೆ. ತಾಯಿ ಹಾಡುವ ಲಾಲಿಯಿಂದ ಪ್ರಾರಂಭವಾಗುವ ಜೀವನ ಬಾಳುನುದ್ದಕ್ಕೂ ಜನಪದ ಸಂಪ್ರದಾಯಗಳ ಅನುಭವವನ್ನು ಸ್ವತಃ ಪಡೆಯುತ್ತದೆ. ಹೀಗೆ ಸಾಗುವ ಮಾನವನ ಜೀವನ ಕಥೆ, ಗೀತೆ, ಗಾದೆ, ಒಗಟುಗಳ ರೂಪದಲ್ಲಿ ಸಾಕಾರ ಪಡೆಯುತ್ತ ಹೋಗುತ್ತದೆ.

"ಕಥೋಲಿಕ ಸಾಹಿತ್ಯದಲ್ಲಿ ಲೌಕಿಕ ಕೃತಿಗಳ ಸಂಖ್ಯೆ ದೊಡ್ಡದಲ್ಲ. ಹೆಚ್ಚಿನ ಪ್ರಮಾಣ ಧಾರ್ಮಿಕ ಕೃತಿಗಳದ್ದು" (ಎಡ್ವರ್ಡ್ ನೊರೋನ:1984:59). ಅಂತೆಯೇ ಮೈಸೂರು ಜಿಲ್ಲೆಯ ಕ್ರೈಸ್ತರಲ್ಲಿ ಪ್ರಚಲಿತವಿರುವ ಜನಪದ ಕಥೆಗಳೂ ಧಾರ್ಮಿಕ ಹಿನ್ನೆಲೆಯನ್ನು ಪಡೆದು ನೀತಿಪ್ರಧಾನವಾಗಿವೆ. ರಾತ್ರಿಯ ಹೊತ್ತು ಮಲಗುವಾಗ ಮಕ್ಕಳಿಗೆ ಹೇಳುವ ಕಥೆಗಳು ದೇವರ ಬಗೆಗಿನ ಭಯ ಮತ್ತು ನಂಬಿಕೆಗಳನ್ನು ಧೃಢಪಡಿಸುವಂಥವಾಗಿವೆ. ಹೇಗೆ ನಡೆದುಕೊಂಡರೆ ಪರಮಾತ್ಮ ಮೆಚ್ಚುತ್ತಾನೆ? ಅನ್ಯಾಯ ಮಾಡಿದವನಿಗೆ ಶಿಕ್ಷೆ ಇದ್ದೇ ಇರುತ್ತದೆ. ಅದೇ ದೃಷ್ಟಿಯಲ್ಲಿ ಮುಂದುವರಿದರೆ ಪಶ್ಚಾತ್ತಾಪಪಟ್ಟವನಿಗೆ ಕ್ಷಮೆ ದೊರೆಯುತ್ತದೆ. ಇತ್ಯಾದಿ ಅಂಶಗಳು ಹೊರಹೊಮ್ಮುತ್ತವೆ. ಕ್ರೈಸ್ತರು ಲೋಕಕ್ಕೆ ಬೆಳಕಿನಂತಿರಬೇಕು ಎಂಬುದು

ಬೈಬಲ್ಲಿನ ಉಕ್ತಿಯಾಗಿದೆ. ಅಂತೆಯೇ ತಮ್ಮ ಧರ್ಮವೇ ಶ್ರೇಷ್ಠ ಹಾಗೂ ಸತ್ಯವಾದುದು ಎಂಬುದನ್ನು ಪ್ರಚುರಪಡಿಸುವ ಪ್ರಯತ್ನ ಇಲ್ಲಿನ ಬುಡಕಟ್ಟು ಕ್ರೈಸ್ತ ಜನಪದ ಸಾಹಿತ್ಯದಲ್ಲಿ ಇದೆ. (ಅನುಬಂಧ 2 ನೋಡಿ )

ಮೈಸೂರು ಜಿಲ್ಲೆಯ ಕ್ರೈಸ್ತರಲ್ಲಿ ವಾಕ್ಪರಂಪರೆಯಲ್ಲಿ ಪ್ರಚಲಿತವಿರುವ ಒಂದು ಕಥೆ ಮೇಲಿನ ಮಾತಿಗೆ ಸಮರ್ಥನೆ ಒದಗಿಸುತ್ತದೆ.

ಈ ಕಥೆಯನ್ನೇ ಹೋಲುವ 'ದುರಾಶೆಯ ಪ್ರತಿಫಲ' ಎಂಬ (ರಾಗೌ 1969:81) ಕಥೆಯಲ್ಲಿ ದೆವ್ವಗಳ ಬದಲಿಗೆ ಹುಲಿಯು ಬ್ರಾಹ್ಮಣನಿಗೆ ಆಭರಣಗಳನ್ನು ನೀಡುತ್ತದೆ. ಅದರಲ್ಲಿ ನೆರೆಮನೆಯವನ ಮತ, ಪ್ರಾರ್ಥನೆಗಳ ಪ್ರಸ್ತಾಪವಿಲ್ಲ. ನೆರೆಮನೆಯವನು ದುರಾಸೆಯ ಪ್ರತಿಫಲವನ್ನು ಪಡೆಯುತ್ತಾನೆ ಅಷ್ಟೇ. ಆದರೆ ನೆರೆಮನೆಯವನ ಪಾತ್ರ ಇಲ್ಲಿನ ಕಥೆಯಲ್ಲಿ ಉಪದೇಶಿಯ ಪಾತ್ರವಾಗಿದೆ.

ಉಪದೇಶಿಯ ಪಾತ್ರಕ್ಕೆ ಇಲ್ಲಿ ಹೆಚ್ಚಿನ ಮಹತ್ವ ಪ್ರಾಪ್ತವಾಗಲು ಕಾರಣಗಳಿವೆ. ಉಪದೇಶಿಯು ಗುರುಗಳಿಗೆ ತೀರ ಹತ್ತಿರದವನಾಗಿದ್ದು ಗೌರವಾನ್ವಿತ ಸ್ಥಾನದಲ್ಲಿರುತ್ತಾನೆ. ಕೆಲವೊಮ್ಮೆ ಗುರುಗಳ ಗೈರುಹಾಜರಿಯಲ್ಲಿ ಅವನು ಧಾರ್ಮಿಕ ಕಾರ್ಯಗಳನ್ನು ನಿರ್ವಹಿಸುತ್ತಾನೆ. ಉದಾಹರಣೆಗೆ ದೀಕ್ಷಾಸ್ನಾನ ಕೊಡುವುದು, ನಿಶ್ಚಿತಾರ್ಥವನ್ನು ನೆರವೇರಿಸುವುದು ಇತ್ಯಾದಿ. ವಿಚಾರಣೆಯಲ್ಲಿರುವ (Parish) ಎಲ್ಲಾ ಕುಟುಂಬಗಳನ್ನು ಆತ ಬಲ್ಲವನಾಗಿರುತ್ತಾನೆ. ಎಲ್ಲರ ಮಾಹಿತಿಗಳನ್ನೂ ಗುರುಗಳಿಗೆ ಒಪ್ಪಿಸುವವನಾಗಿರುತ್ತಾನೆ. ಪ್ರಕೃತ ಕಥೆಯನ್ನು ಉಪದೇಶಿಗೆ ಆಗದವರು ರೂಪಾಂತರ ಮಾಡಿ ಹೇಳಿರುವ ಸಾಧ್ಯತೆಗಳಿವೆ ಅಥವಾ ಅಂದಿನ ಉಪದೇಶಿಯಲ್ಲಿ ದುರಾಸೆಯ ಗುಣಗಳನ್ನು ಗುರುತಿಸಿ ಈ ಬದಲಾವಣೆಯನ್ನು ತಂದಿರುವ ಸಾಧ್ಯತೆಯೂ ಇದೆ. ಅದೇನೇ ಇರಲಿ, ಪ್ರಾರ್ಥನೆಯ ಪ್ರಸ್ತಾಪವಾಗಿರುವುದರಿಂದ "ಹುಲಿ"ಯ ಬದಲಿಗೆ ದೆವ್ವದ ಪಾತ್ರ ಕಾಣಿಸಿಕೊಂಡಿದೆ ಎನಿಸುತ್ತದೆ.

ರೂಪಾಂತರ ಹೊಂದಿರುವ ಈ ಕಥೆಯಲ್ಲಿ ಬುಡಕಟ್ಟು ಕ್ರೈಸ್ತರ ಸಂಸ್ಕೃತಿ ಅಲ್ಲಲ್ಲಿ ವ್ಯಕ್ತವಾಗಿದೆ. ಕ್ರೈಸ್ತಧರ್ಮದಲ್ಲಿ ಒಂದೇ? ಕ್ರೈಸ್ತನಾಗದವನಿಗೆ ಮೋಕ್ಷವಿಲ್ಲ ಎಂಬ ನಂಬಿಕೆ ಇಲ್ಲಿನ ಕ್ರೈಸ್ತರಲ್ಲಿ ಗಾಢವಾಗಿದೆ. ಧರ್ಮಾಭಿಮಾನವುಳ್ಳ ಕ್ರೈಸ್ತರು ಪರಧರ್ಮವನ್ನು ಅಲ್ಲಗಳೆದಿರುವುದು ಈ ಕಥೆಯಲ್ಲಿ ಗಮನಿಸಬೇಕಾದ ಅಂಶವಾಗಿದೆ. ಬ್ರಾಹ್ಮಣ ಯಾವ ಮಂತ್ರವನ್ನು ಹೇಳಿದರೂ ದೆವ್ವಗಳು ಹೋಗಲಿಲ್ಲ. "ಶಿಲುಬೆ" ಪದ ಪ್ರಯೋಗದಿಂದಲೇ ಅವು ಅಂಜಿ ಓಡಿಹೋದವು. ಅಷ್ಟೇ ಅಲ್ಲ ಸಂಭಾವನೆಯನ್ನೂ ಕೊಟ್ಟು ಹೋದವು ಎಂಬ ಸಂಗತಿಯಿಂದ ಇತರ ಧರ್ಮಗಳ ಬಗೆಗೆ ಕ್ರೈಸ್ತರಿಗಿರುವ ಸಂಕುಚಿತ ಮನೋಭಾವನೆ ವ್ಯಕ್ತವಾಗುತ್ತದೆ. ಅದೇನೇ ಇರಲಿ ದೇವರು ಒಲಿಯುವುದು ಶ್ರದ್ಧೆಯಿಂದ ಮಾತ್ರ

ದುರುದ್ದೇಶದ ಪ್ರಾರ್ಥನೆಯನ್ನಲ್ಲ. ಅಂತಹ ಪ್ರಾರ್ಥನೆ ನಿರರ್ಥಕವಾದದ್ದೆಂದು ಇಲ್ಲಿ ತಿಳಿದು ಬರುತ್ತದೆ.

ಬುಡಕಟ್ಟು ಕ್ರೈಸ್ತರು ಪ್ರಾರ್ಥನೆಗೆ ಹೆಚ್ಚಿನ ಪ್ರಾಶಸ್ತ್ಯ ನೀಡುತ್ತಾರೆ. ಪ್ರಾರ್ಥನೆ ಕ್ರೈಸ್ತರ ಜೀವನದ ಜೀವಾಳವಾಗಿರುತ್ತದೆ. ಆದ್ದರಿಂದ ಮಕ್ಕಳಿಗೆ ಬಾಲ್ಯದಿಂದಲೇ ಪ್ರಾರ್ಥನೆ ಸಲ್ಲಿಸುವ ರೂಢಿಯನ್ನು ಮಾಡಿರುತ್ತಾರೆ. ಮಗು ಬೆಳಿಗ್ಗೆ ಏಳುವಾಗ ಬಲ ಮಗ್ಗುಲಲ್ಲಿ ಎದ್ದು ಕುಳಿತು, ಶಿಲುಬೆ ಗುರುತು ಹಾಕಲು ಕಲಿಸುತ್ತಾರೆ. ಮಲಗುವಾಗಲೂ ಅದನ್ನೇ ಕಲಿಸುತ್ತಾರೆ. ಊಟಕ್ಕೆ ಮುನ್ನ ಹಾಗೂ ಊಟದ ಅನಂತರ "ಪಿತನ, ಸುತನ ಮತ್ತು ಪವಿತ್ರಾತ್ಮನ ನಾಮದಲ್ಲಿ ಆಮೆನ್" ಎಂದು ಹೇಳಿಸುತ್ತಾರೆ. ಈ ಪದ್ಧತಿ ಕ್ರೈಸ್ತರ ಜೀವನಕ್ರಮವನ್ನು ಪರಿಚಯಿಸುತ್ತದೆ. ಪ್ರಾರ್ಥನೆಯ ಪ್ರಾಮುಖ್ಯತೆಯನ್ನು ತಿಳಿಸಲು ಹಲವಾರು ಕಥೆಗಳು ಬುಡಕಟ್ಟು ಕ್ರೈಸ್ತರಲ್ಲಿ ಹುಟ್ಟಿಕೊಂಡಿವೆ:- (ಅನುಬಂಧ 3 ನೋಡಿ)

ಕಡ್ಡಾಯವೇನೊ ಎನ್ನುವಂತೆ ಬುಡಕಟ್ಟುಕ್ರೈಸ್ತರಲ್ಲೂ ಪ್ರಾರ್ಥನೆ ರೂಢಿಯಲ್ಲಿದೆ. ಪ್ರತಿದಿನ ಸಂಜೆ ಧೂಪಹಾಕಿ "ಜಪಸರ" ಪ್ರಾರ್ಥನೆಯನ್ನು ಹೇಳುವುದು ವಾಡಿಕೆ. ಧೂಪದ ಹೊಗೆ ಮೇಲಮೇಲಕ್ಕೆ ಹೋದಂತೆ ತಮ್ಮ ಪ್ರಾರ್ಥನೆಯೂ ಅದರೊಂದಿಗೆ ದೇವರ ಬಳಿಗೆ ಹೋಗುತ್ತದೆ ಎಂದು ನಂಬುತ್ತಾರೆ. ಧೂಪದ ಪರಿಮಳ ದೆವ್ವವನ್ನು ದೂರಕ್ಕೆ ಓಡಿಸುತ್ತದೆ ಎಂದೂ ನಂಬುತ್ತಾರೆ.

"ಕ್ರೈಸ್ತಮತೀಯ ಸಾಹಿತ್ಯದಲ್ಲಿ ಪ್ರಶ್ನೋತ್ತರೋಪದೇಶಕ್ಕೆ (Catachism) ವಿಶಿಷ್ಟ ಸ್ಥಾನವಿದೆ. ಹೊಸದಾಗಿ ಮತಾಂತರ ಹೊಂದಿದವರ ದೃಢೀಕರಣಕ್ಕಾಗಿಯೂ, ಕ್ರೈಸ್ತ ಶಾಲೆಗಳಲ್ಲಿ ಅಭ್ಯಾಸ ಮಾಡುವವರ ಧಾರ್ಮಿಕ ಶಿಕ್ಷಣಕ್ಕಾಗಿಯೂ ಇವು ರಚಿತವಾದವು (ಹಾವನೂರ: 1974:429). ಇಂತಹ ಪ್ರಶ್ನೋತ್ತರ ರೀತಿಯ ನೀತಿಬೋಧನೆ ಪ್ರತಿ ಭಾನುವಾರ ಪೂಜೆಗೆ ಮುನ್ನ ಕಾಲುಗಂಟೆಯ ಕಾಲ ನಡೆಯುತ್ತಿತ್ತು. ಇದಾದ ನಂತರ ಪೂಜೆ ಪ್ರಾರಂಭವಾಗುತ್ತಿತ್ತು. ಈ ನೀತಿಬೋಧನೆಯಲ್ಲಿ ಉಪದೇಶಿಯದೇ ಪ್ರಮುಖ ಪಾತ್ರ".

ಉದಾಹರಣೆಗೆ:

| | | |
|---|---|---|
| ಉಪದೇಶಿ | : | ಮೋಕ್ಷ ಎಂದರೆನು? |
| ಮಕ್ಕಳು | : | ದೇವರನ್ನು ಮುಖಾಮುಖಿಯಾಗಿ ದರ್ಶಿಸುವ ನಿರಂತರ ಆನಂದವೇ ಮೋಕ್ಷ |
| ಉಪದೇಶಿ | : | ವಿವಾಹ ಎಂದರೇನು? |
| ಮಕ್ಕಳು | : | ಗಂಡು-ಹೆಣ್ಣನ್ನು ದೈವಿಕ ಸಂಬಂಧದಲ್ಲಿ ಒಂದುಗೂಡಿಸುವ ಸಂಸ್ಕಾರ. |

ಹೀಗೇ ದಿವ್ಯ ಸಂಸ್ಕಾರಗಳ, ಆಧ್ಯಾತ್ಮಿಕ ಸಾಧನೆಯ ಅರ್ಥವನ್ನು ತಮಗರಿವಿಲ್ಲದಂತೆಯೇ ಮಕ್ಕಳು ಕಂಠಪಾಠವಾಗಿ ಕಲಿಯುತ್ತಿದ್ದರು. ಬುಡಕಟ್ಟು ಕ್ರೈಸ್ತರು ಬಾಲ್ಯದಿಂದಲೇ ತಮ್ಮ ಜೀವನ ಮತ್ತು ಸಂಸ್ಕೃತಿಯ ಪ್ರಭಾವವನ್ನು ತಮ್ಮ ಪೀಳಿಗೆಯ ಮೇಲೆ ಬೀರುತ್ತಿದ್ದರೆಂಬುದಕ್ಕೆ ಇಂತಹ ಧರ್ಮೋಪದೇಶವೇ ಸಾಕ್ಷಿಯಾಗಿದೆ. ಧಾರ್ಮಿಕ ಪ್ರಜ್ಞೆಯನ್ನು ಬೆಳೆಸುವುದು ಮಾತ್ರವಲ್ಲ ಮನಕ್ಕೆ ಮುದ ನೀಡುವ ಕಥೆಗಳನ್ನೂ ಮಕ್ಕಳಿಗೆ ಹೇಳುವುದು ಇವರಲ್ಲಿ ರೂಢಿಯಲ್ಲಿದೆ. ಇದರಲ್ಲಿ ಅಜ್ಜಿಯ ಪಾತ್ರವೇ ಹೆಚ್ಚಿನದು. ಅಂತಹ ಕಥೆಗಳಲ್ಲೂ ಬುಡಕಟ್ಟು ಕ್ರೈಸ್ತರ ಜೀವನ ಮತ್ತು ಸಂಸ್ಕೃತಿ ವ್ಯಕ್ತವಾಗುತ್ತದೆ.

ಅಗಮ್ಯಗಮನ (incest) ನಿಷೇಧವನ್ನು ಹೇಳುವ ಈ ಕಥೆಯನ್ನೇ ಹೋಲುವ 'ಬಾಳೆಮೀನು–ಮುಗುಡುಮೀನು' ಎಂಬ ಕಥೆಯಲ್ಲಿ ಅಣ್ಣನು ತಂಗಿಯನ್ನು ಮದುವೆಯಾಗ ಬಯಸುವ ಸಂಗತಿ ಕಾಣಿಸುತ್ತದೆ. ಇದರ ಬಗ್ಗೆ ಬಿಳಿಮಲೆ ಅವರು "ಅಗಮ್ಯಗಮನವು ನಿಷಿದ್ಧವಾಗಿರುವ ಸಮಾಜದಲ್ಲಿ ಈ ಕಥೆಯು ಜನಪ್ರಿಯವಾಗಿರಬೇಕು. ಇಲ್ಲವೇ ಅಗಮ್ಯಗಮನದ ಅವಕಾಶವಿರುವೆಡೆ ಅದನ್ನು ನಿಯಂತ್ರಿಸಲು ಈ ಕಥೆ ಹೆಣಗುತ್ತಿರಬೇಕು" ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ (ಬಿಳಿಮಲೆ:1990:65). ತಂದೆ ಮತ್ತು ಮಗಳ ನಡುವೆ ವಿವಾಹ ನಿಷಿದ್ಧ ಎಂಬ ವಿಷಯವನ್ನು "ಮರದಬೊಂಬೆ" ಕಥೆಯು ಪ್ರತಿಪಾದಿಸುತ್ತದೆ. ಅಲ್ಲದೆ ಈ ಕಥೆಯಲ್ಲಿ ಚರ್ಚಿನ ಪ್ರಸ್ತಾಪವನ್ನು ತಂದು ಬಲಿಪೂಜೆಯಲ್ಲಿ ಕ್ರೈಸ್ತರ ಪಾಲ್ಗೊಳ್ಳುವಿಕೆಯ ಪ್ರಾಮುಖ್ಯಯತೆಯನ್ನು ತಿಳಿಸಲಾಗಿದೆ. ತಂದೆಯನ್ನು ವಿವಾಹವಾಗುವುದು ಪಾಪವೆಂದರಿತ ರಾಜಕುಮಾರಿ ಅರಮನೆಯಿಂದ ಹೊರಹೊರಟು ಉಪಾಯದಿಂದ ರಾಜಕುಮಾರನ ಅರಮನೆಯಲ್ಲಿ ಸೇರಿ, ಅವನನ್ನು ವಿವಾಹವಾಗುತ್ತಾಳೆ. ಕಥೆ ಅಲ್ಲಿಗೇ ಮುಗಿಯದೆ ತಂದೆಯನ್ನು ಅಲ್ಲಿಗೆ ಬರಮಾಡಿ ಅವನ ಕ್ಷಮಾಯಾಚನೆಯೊಂದಿಗೆ ಕಥೆ ಸುಖಾಂತದಲ್ಲಿ ಮುಕ್ತಾಯವಾಗುವುದು ಗಮನಾರ್ಹ. (ಅನುಬಂಧ 4 ನೋಡಿ )

ಕ್ರೈಸ್ತರಲ್ಲಿ ತಪ್ಪೊಪ್ಪಿಕೊಳ್ಳುವಿಕೆಗೆ ಮಹತ್ತರ ಸ್ಥಾನವಿದೆ. "ಪಾಪನಿವೇದನೆ" ಎಂಬ ಸಂಸ್ಕಾರ ಕಥೋಲಿಕರಲ್ಲಿ ಆಚರಣೆಯಲ್ಲಿದೆ. ಘನವಾದ ಪಾಪ (Mortal sin) ಮಾಡಿದವನು. ಪಾಪನಿವೇದನೆ ಮಾಡದೆ ತೀರಿಕೊಂಡರೆ ನರಕವೇ ಗತಿ ಎಂಬ ಹಿನ್ನೆಲೆಯಲ್ಲಿ ಕಥೆಯೊಂದು ಹುಟ್ಟಿ ಕೊಂಡಿದೆ. ಸನ್ಯಾಸಿಯೊಬ್ಬಳು ತೀರಿಕೊಂಡಾಗ ಶವಸಂಸ್ಕಾರದ ವೇಳೆಯಲ್ಲಿ ಶವವನ್ನು ಚರ್ಚಿನ ಮಧ್ಯಭಾಗದಲ್ಲಿಟ್ಟು ಪೂಜೆ ಅರ್ಪಿಸುತ್ತಿದ್ದರು. ಚರ್ಚಿನ ತುಂಬಾ ಸನ್ಯಾಸಿನಿಯ ಅಭಿಮಾನಿಗಳು ತುಂಬಿದ್ದರು. ಗುರುಗಳು ಮೃತವ್ಯಕ್ತಿಯ ಬಗೆಗೆ ನಾಲ್ಕಾರು ಮಾತುಗಳನ್ನು ಹೇಳುವ ಸಮಯದಲ್ಲಿ ಶವವು ಎದ್ದು ಕುಳಿತು "ನನಗೆ ಪೂಜೆ ಅರ್ಪಿಸುವುದು ವ್ಯರ್ಥ, ನಾನೀಗ ನರಕದಲ್ಲಿದ್ದೇನೆ, ನಾನು ಘನವಾದ ಪಾಪವನ್ನು ಮಾಡಿ, ಪಾಪನಿವೇದನೆಯಲ್ಲಿ ಅದನ್ನು ಬಚ್ಚಿಟ್ಟುಕೊಂಡು ಸತ್ತವಳಾಗಿದ್ದೇನೆ" ಎಂದು ಹೇಳಿ ಬಿದ್ದುಕೊಂಡಿತು. ಇಂತಹ

ಕಥೆಗಳು ಪಾಪ ನಿವೇದನೆಯ ಬಗೆಗೆ ಸೂಕ್ತ ತಿಳಿವಳಿಕೆ ನೀಡುವಂಥವುಗಳಾಗಿವೆ. ನರಕದ ಭಯವನ್ನು ಹುಟ್ಟಿಸಲು ಇಂತಹ ಕಥೆಗಳು ಹುಟ್ಟಿಕೊಂಡಿರಬಹುದು.

ಕರ್ನಾಟಕ ಬುಡಕಟ್ಟುಕ್ರೈಸ್ತರ ಜಾನಪದ ಜಗತ್ತಿನಲ್ಲಿ ಮಾತೆ ಮರಿಯಮ್ಮನಿಗೆ ಅಗ್ರಸ್ಥಾನ. ಆಕೆಗೆ ಜನಪದ ಪ್ರಾರ್ಥನೆಯನ್ನು ಸಲ್ಲಿಸುವುದು ವಿಶೇಷ. ದೀನ ಭಕ್ತರಿಗೆ ಆಕೆಯ ಸಹಾಯಹಸ್ತವಿದೆ ಎಂಬುದರ ಬಗೆಗೆ ಕಥೆಗಳು ಪ್ರಚಲಿತವಿದೆ. ಭಕ್ತನೊಬ್ಬ ಜೂಜಿನಲ್ಲಿ ಎಲ್ಲವನ್ನೂ ಸೋತು ಮಾತೆಯ ಬಳಿ ಬಂದು ನೀನೇ ನನಗೆ ದಿಕ್ಕು, ದಾರಿ ತೋರಿಸು ಎಂದಾಗ ಮಾತೆಯ ಪ್ರತಿಮೆ ತನ್ನ ಶಿರವನ್ನು ಬಲಕ್ಕೆ ವಾಲಿಸಿ ತನ್ನ ಶಿರದ ಮೇಲಿನ ಚಿನ್ನದ ಕಿರೀಟವನ್ನು ತೆಗೆದುಕೊಳ್ಳಲು ಅನುವು ಮಾಡಿಕೊಟ್ಟಿತು. ಅದರಿಂದಲೇ ಮಾತೆಯ ಪ್ರತಿಮೆಯ ಶಿರವು ಸ್ವಲ್ಪ ಬಲಕ್ಕೆ ವಾಲಿಕೊಂಡಿರುವುದು ಎಂಬ ನಂಬಿಕೆ ಇಂದಿಗೂ ಇದೆ. ಕಿರೀಟವನ್ನು ಪಣವಿಟ್ಟು ಜೂಜಾಡಿದಾಗ ಅವನು ಕಳೆದುಕೊಂಡಿದ್ದನೆಲ್ಲಾ ಮತ್ತೆ ಗಳಿಸಿದ. ಆದರೆ ಮಾತೆಯ ಪವಾಡದಿಂದ ಅವನ ಮನಪರಿವರ್ತನೆ ಆಯಿತು ಎಂದು ಹೇಳುತ್ತಾರೆ.

ಕರ್ನಾಟಕದಲ್ಲಿ ನೆಲಸಿರುವ ಬುಡಕಟ್ಟು ಕ್ರೈಸ್ತರಲ್ಲಿ ಅವಿಭಕ್ತ ಕುಟುಂಬಗಳೇ ಹೆಚ್ಚಾಗಿ ಕಾಣಸಿಗುತ್ತವೆ. ಹೀಗಾಗಿ ಅತ್ತೆ-ಸೊಸೆಯರ ಕಥೆಗಳು ಹೆಚ್ಚಿನ ಸಂಖ್ಯೆಯಲ್ಲಿ ಹುಟ್ಟಿಕೊಂಡಿವೆ. ಕೊಂಕಣಿ ಕ್ರೈಸ್ತರಲ್ಲಿ ಪ್ರಚಲಿತವಿರುವ ಒಂದು ಕಥೆಯನ್ನು ಇಲ್ಲಿ ಉಲ್ಲೇಖಿಸಲಾಗಿದೆ: ಸಿದ್ದಿ ಕ್ರೈಸ್ತರು "ಪಾತೊಳ್ಯೊ" ಎಂಬ ಸಿಹಿತಿಂಡಿಯನ್ನು ಮಾಡುತ್ತಾರೆ. ಅಕ್ಕಿಬೆಲ್ಲವನ್ನು ರುಬ್ಬಿ ಅರಿಸಿನದ ಎಲೆಯಲ್ಲಿ ಸುತ್ತಿ ಹಬೆಯಲ್ಲಿ ಬೇಯಿಸುತ್ತಾರೆ. ಸಿದ್ದಿ ಕ್ರೈಸ್ತರಿಗೆ ಇದು ಬಹುಪ್ರಿಯವಾದ ತಿಂಡಿ. (ಅನುಬಂಧ 5 ನೋಡಿ )

ಈ ಕಥೆಯಲ್ಲಿ ಕ್ರೈಸ್ತರ ಕುಟುಂಬ ವ್ಯವಸ್ಥೆಯ ಚಿತ್ರಣ ಕಂಡು ಬುರತ್ತದೆ. ಅತ್ತೆಯೇ ಮನೆಯ ಯಜಮಾನಿಯಾಗಿರುತ್ತಾಳೆ. ಅತ್ತೆಯ ಅನುಮತಿಯಿಲ್ಲದೆ ಸೊಸೆ ಏನನ್ನೂ ಮಾಡುವಂತಿಲ್ಲ. ಇದೇ ಅಂಶವನ್ನು ವ್ಯಕ್ತಪಡಿಸುವ ಮತ್ತೊಂದು ಕಥೆ ಹೀಗಿದೆ.
ಅತ್ತೆಯೊಬ್ಬಳು ಸೊಸೆಯನ್ನು ಹೊಡೆದು, ಬಡಿದು ಕೆಲಸ ಮಾಡಿಸುತ್ತಿದ್ದಳು. ಸೊಸೆಗೂ ಇದು ಒಗ್ಗಿಹೋಗಿತ್ತು. ಅತ್ತೆಯಿಂದ ಹೊಡೆಸಿಕೊಳ್ಳದೆ ಅವಳಿಗೆ ಕೆಲಸಮಾಡಲು ಆಗುತ್ತಿರಲಿಲ್ಲ. ಒಮ್ಮೆ ಮನೆಗೆ ನೆಂಟರಿಷ್ಟರು ಬಂದಿದ್ದರು. ಆದರೂ ಸೊಸೆ ಅಡುಗೆಮನೆ ಸೇರದೆ ನಡುಮನೆ ಮೂಲೆಯಲ್ಲಿ ಕೂತಿದ್ದಳು. ಅತ್ತೆ ಎಷ್ಟು ಕಣ್ಸನ್ನೆ ಮಾಡಿದರೂ ಹೋಗದೆ "ಕೊಡೋದ ಕೊಡತ್ತ ಹೊಯ್ತೀನಿ" ಎನ್ನುತ್ತಿದ್ದಳು. ಅತ್ತೆ ಎದ್ದು ಬಂದು "ಬಾರೇ ನನ್ಮುದ್ದಿನ ಸೊಸೆ ಕೊಡುತ್ತಿನಿ ಬಾ" ಎಂದು ಕೋಣೆಗೆ ಕರೆದೊಯ್ದು ದಬದಬನೆ ಏಟು ಕೊಟ್ಟ ಮೇಲೆ ಸೊಸೆ ಅಡುಗೆ ಮನೆಗೆ ಹೋಗಿ, ಕೆಲಸದಲ್ಲಿ ತೊಡಗಿದಳು.

ಈ ಕಥೆಯಲ್ಲಿ ಅತ್ತೆಯ ದಬ್ಬಾಳಿಕೆ, ದೌರ್ಜನ್ಯದ ಗುಣಗಳನ್ನು ಕಾಣಬಹುದು.

ಮೈಸೂರು ಜಿಲ್ಲೆಯ ಕ್ರೈಸ್ತರಲ್ಲಿ ಪ್ರಚಲಿತವಾಗಿರುವ "ಪದ್ಮಾವತಿ ಸೂಳೆ" (ಅನುಬಂಧ 6 ನೋಡಿ ) ಎಂಬ ಕಥೆಯ "ರನ್ನದ ಮರ, ಚಿನ್ನದ ಗೊನೆ ಗುದಿಗುದಿಕಾಯಿ" (ತೀ.ನಂ.ಶಂ.1974:1) ಎಂಬ ಕಥೆಯನ್ನು ಬಹುಮಟ್ಟಿಗೆ ಹೋಲುತ್ತದೆ. "ರನ್ನದ ಮರ ಚಿನ್ನದಗೊನೆ ಗುದಿಗುದಿಕಾಯಿ" ಕ್ಥೆಯಲ್ಲಿ ರಾಜನ ಹಿರಿಯ ಹೆಚಿಡತಿ ದೊಂಬರ ಸೂಳೆಚಿಯಾಗಿ ರಾಜನ ಮನವೊಲಿಸುವ ಸಾಹಸವನ್ನು ಮಾಡುತ್ತಾಳೆ. "ಪದ್ಮಾವತಿ ಸೂಳೆ" ಎಂಬ ಕ್ಥೆಯಲ್ಲಿ ಹಿರಿಯರಾಣಿಯ ಮಗಳು ಗಂಡುವೇಷಧಾರಿಯಾಗಿ, ಪದ್ಮಾವತಿಯೊಡನೆ ಪಗಡೆಯಾಡಿ ಗೆದ್ದು, ಅವಳೊಂದಿಗೆ ಪಗಡೆಯಾಡಿ ಸೋತು ಕವಡೆಯ ಮೂಗುದಾರ ಹಾಕಿಕೊಂಡು ಸೌದೆ ಸೀಳುತ್ತಿದ್ದ ಅವಳ ಅಣ್ಣಂದಿರನ್ನು ಬಿಡಿಸಿಕೊಂಡು ಬರುತ್ತಾಳೆ. ಮುಂದೆ ಕಥೆಯು ಬೇರೆ ತಿರುವನ್ನು ಪಡೆಯುತ್ತದೆ. ಇಲ್ಲಿ ನಾಯಕಿಯ ಪಾತ್ರ ಹಿರಿಯ ರಾಣಿಯ ಮಗಳದು. ನಾಯಕನ ಪಾತ್ರ ಪದ್ಮಾವತಿಯ ಗಂಡನಾಗಿದ್ದ ಆ ಊರಿನ ರಾಜ. ಕಥೇಯ ಉತ್ತಾರ್ಧವು "ಪತಿವ್ರತೆ" (ರಾಗೌ:1969:11) ಎಂಬ ಕಥೆಯ ಉತ್ತಾರಾರ್ಧವನ್ನು ಹೋಲುತ್ತದೆ.

ಸುಧೀರ್ಘವಾದ "ಪದ್ಮಾವತಿ ಸೂಳೆ"ಯ ಕಥೆಯಲ್ಲಿ ಪದ್ಮಾವತಿ ಸೂಳೆ ಪಗಡೆಯಾಡುವ ಮುನ್ನ ಸವಾಲನ್ನು ಒಡ್ಡುತ್ತಾಳೆ. ಕೊತ್ತಿಯನ್ನು ಕೂರಿಸಿ, ಅದರ ತಲೆಚಿು ಮೇಲೆ ಒಚಿದು ತೊಪ್ಪೆ ಸಗಣಿಯನ್ನಿಟ್ಟು ಅಂಗೈಯಗಲ ಬತ್ತಿಹಾಕಿ, ಒಚಿದು ಬಾಟ್ಲಿ ಎಣ್ಣೆಸುರಿದು ದೀಪ ಹಚ್ತೀನಿ, ಪಗಡೆಯಾಟ ಸುರು ಮಾಡನ, ಕೊತ್ತಿ ಬೆಳಗಾನ ಆ ದೀಪ ಹೊತ್ಕಂಡ್ ನಿಂತ್‌ಬುಟ್ರೆ ನಾಗೆದ್ದೆ, ನೀವು ಸೋತ್ರಿ. ನೀವು ಸೋತ್ರೆ ಕವಡೆ ಮೂಗ್ದಾರ ಹಾಕ್ಕಂಡು ನನ್ಮನೆ ಮುಂದೆ ಸೌದೆ ಸೀಳ್ಕಂಡಿರ್ಬೇಕು. ನಾನೇನಾರ ಸೋತ್ರೆ ತಲೆಗೆ ಮೂರ್ಪಟ್ಟೆ ಹೊಡೆದು ಕತ್ತೆಮೇಲೆ ಮೆರಣಿಗೆ ತಂದು, ಸಿಗ್ದು ಹೆಬ್ಬಾಗಿಲಿಗೆ ತೋರಣ ಕಟ್ಟಿ" ಎಚಿದು ಹೇಳುತ್ತಾಳೆ. "ರನ್ನದಮರ ಚಿನ್ನದಗೊನೆ ಗುದಿಗುದಿಕಾಯಿ" ಕಥೆಯಲ್ಲಿ ಸವಾಲಿನ ಈ ಪ್ರಕರಣವೇ ಬರುವುದಿಲ್ಲ.

ಈ ಕಥೆ ಮನಚಿರಂಜನೆಗಾಗಿ ಹೇಳುವಚಿತಹ ಕಥೆಯಾದರೂ ಇಲ್ಲಿ ಸೇರ್ಪಡೆಯಾಗಿರುವ ಕೆಲವು ಅಂಶಗಳು ಕ್ರೈಸ್ತರ ಸಂಸ್ಕೃತಿಯ ಮೇಲೆ ಬೆಳಕು ಚೆಲ್ಲುತ್ತದೆ. ಗಂಡುವೇಷ ಧರಿಸಿ ಪದ್ಮಾವತಿಯನ್ನು ಪಗಡೆಯಾಟದಲ್ಲಿ ಸೋಲಿಸಿದ ಕಥೆಯ ನಾಯಕಿಯನ್ನು ಗಂಡನೋ ಹೆಂಗಸೋ ಎಂದು ಕಂಡು ಹಿಡಿಯಲು ರಾಜ ಮತ್ತು ಮಂತ್ರಿ ಸೇರಿ ಕೆಲವು ಪರೀಕ್ಷೆಗಳನ್ನೊಡ್ಡುತ್ತಾರೆ. ಅದರಲ್ಲಿ ಬುಡಕಟ್ಟು ಕ್ರೈಸ್ತರ ಆಚರಣೆಗಳು ಕಂಡುಬರುತ್ತವೆ. "ಸ್ನಾನಕ್ಕೆ ನೀರು ಕಾಯಿಸಿ, ಒಚಿದು ಚಿಪ್ಪು ಸೀಗೆಪುಡಿ, ಒಂದುಚಿಪ್ಪು ಅರಿಸಿನ ಇಟ್ಟಿರುತ್ತಾರೆ ಎಂಬಲ್ಲಿ ಕ್ರೈಸ್ತ ಮಹಿಳೆಯರಿಗೆ ಸ್ನಾನದ ಸಮಯದಲ್ಲಿ ಅರಿಸಿನಪುಡಿಯ ಅವಶ್ಯಕತೆ ತಿಳಿದು ಬರುತ್ತದೆ.

"ಹೆಂಗಸಾದರೆ ಪೊರಕೇನಾ ತೆಗೆದಿಟ್ಟು ಬಂದು, ಆತುರಾತುರವಾಗಿ ಊಟ ಮಾಡುತ್ತಾಳೆ" ಎಂಬಲ್ಲಿ ಸ್ತ್ರೀಯರ ಅಚ್ಚುಕಟ್ಟುತನ ಹಾಗೂ ಕುತೂಹಲ ಕಂಡು ಬರುತ್ತದೆ. "ಹೆಣ್ಣಾದ್ರೆ ಹೂಗಳನ್ನು ಕಂಡೊಡನೆ ಅವುಗಳನ್ನು ಕಿತ್ತುಕೊಳ್ಳಲು ಧಾವಿಸುತ್ತಾಳೆ" ಎಂಬಲ್ಲಿ ಸ್ತ್ರೀ ಸಹಜವಾದ ಗುಣಗಳನ್ನು ಹೇಳಲಾಗಿದೆ. ಇವು ಮೂಲ ಕಥೆಯಲ್ಲಿಲ್ಲ.

ಮೈಸೂರು ಜಿಲ್ಲೆಯ ಕ್ರೈಸ್ತರಲ್ಲಿ ಕೋಳಿ, ಹಂದಿಗಳನ್ನು ಸಾಕುವಿಕೆ ಒಂದು ಉಪಕಸುಬಾಗಿದೆ. ಅಂತೆಯೇ ಕಥಾನಾಯಕಿ ದೊಂಬರ ಹೆಣ್ಣಿನಥೆ ಕಾಣಿಸಿಕೊಂಡಾಗ ರಾಜನನ್ನು ಎರಡುದಿನ ಕಾಯಿಸುವ ಪ್ರಕರಣವನ್ನು ತಂದು ಒಂದು ದಿನ ಕೋಳಿಗೆ, ಮತ್ತೊಂದು ದಿನ ಹಂದಿಗೆ ಮೇವನ್ನು ಹಾಕುವಂತೆ ಮಾಡಿ, ಕಳುಹಿಸುತ್ತಾಳೆ. ಮೈಸೂರು ಜಿಲ್ಲೆಯ ತಾಲ್ಲೂಕುಗಳಲ್ಲಿ ನೆಲೆಸಿರುವ ಕ್ರೈಸ್ತರ ಮುಖ್ಯ ಆಹಾರ ಬೆಳೆ ರಾಗಿ, ಅದರ ಪ್ರಸ್ತಾಪವನ್ನೂ ಇಲ್ಲಿ ಮಾಡಲಾಗಿದೆ.

ಈ ಕಥೆಯಲ್ಲಿ ವಾಸ್ತವವಾಗಿ ಪದ್ಮಾವತಿ ಸೂಳೆಯಲ್ಲ. ಒಬ್ಬ ರಾಜನ ಹೆಂಡತಿ. ಆಕೆ ಒಲ್ಲದ ಸವಾಲನ್ನು ಹಾಕಿ ಗಂಡಸರನ್ನು ಪಗಡೆಯಾಟದಲ್ಲಿ ಸೋಲಿಸಿ, ಕವಡೆ ಮೂಗುದಾರ ಹಾಕಿಸಿ ಮನೆಯ ಮುಂದೆ ಸೌದೆಕಡಿಯುವಂತೆ ಮಾಡಿ ತನ್ನ ಸಾಮರ್ಥ್ಯವನ್ನು ಮೆರೆಯುತ್ತಿರುತ್ತಾಳೆ. ಗಂಡನನ್ನು ತುಚ್ಛವಾಗಿ ಕಾಣುವ ಹೆಣ್ಣು ಕುಲೀನಳಲ್ಲ ಎಂಬ ಒಂದು ಕಾರಣದಿಂದಲೂ, ಗಂಡುವೇಷಧಾರಿ ನಾಯಕಿಯನ್ನು ಪರೀಕ್ಷಿಸಲು ಒಂದು ರಾತ್ರಿ ಪದ್ಮಾವತಿಯೊಡನೆ ಇರಿಸಿದಾಗ, ಆಕೆ ತನ್ನ ಸೋದರಮಾವನನ್ನು ತನ್ನ ಬದಲಿಗೆ ಪದ್ಮಾವತಿಯ ಬಳಿ ಕಳುಹಿಸುತ್ತಾಳೆ, ಪದ್ಮಾವತಿ ಅವನನ್ನು ಸೇರುತ್ತಾಳೆ. ಇದರಿಂದ ಅನ್ಯ ಪುರುಷನ ಸಂಗ ಮಾಡಿದ ಪದ್ಮಾವತಿ ಪತಿವ್ರತೆಯಲ್ಲ ಎಂಬ ಕಾರಣದಿಂದಲೂ ಕ್ರೈಸ್ತರು ಈ ಕಥೆಗೆ "ಪದ್ಮಾವತಿ ಸೂಳೆ" ಎಂಬ ಹೆಸರು ಕೊಟ್ಟಿರುವಂತಿದೆ. "ರನ್ನದಮರ ಚಿನ್ನದಗೊನೆ ಗುದಿಗುದಿಕಾಯಿ" ಕಥೆಯಲ್ಲಿ "ಪದ್ಮಾವತಿ" ಸೂಳೆಯೇ ಆಗಿರುತ್ತಾಳೆ. ಆ ಕಥೆಯಲ್ಲಿ ಪದ್ಮಾವತಿಯ ಪಾತ್ರವೂ ಹೆಚ್ಚನದೇನಲ್ಲ. ಆದರೆ "ಪದ್ಮಾವತಿಸೂಳೆ"ಯ ಕಥೆಯಲ್ಲಿ ಕೊನೆಯವರೆಗೂ ಪದ್ಮಾವತಿಯ ಗಂಡ ತನ್ನ ಹೆಂಡತಿಯ ಸೋಲಿಗಾಗಿ ಸೇಡು ತೀರಿಸಿಕೊಳ್ಳಲು ನಾಯಕಿಯೊಡನೆ ಹೆಣಗಾಡುತ್ತಾನೆ. ಆದ್ದರಿಂದ ಕ್ರೈಸ್ತರಲ್ಲಿ ಪ್ರಚಲಿತವಿರುವ ಈ ಕಥೆಗೆ ಅವರು ಕೊಟ್ಟಿರುವ ಹೆಸರು ಸೂಕ್ತವಾಗಿದೆ.

**7.1.1 ಈ ಕಥೆಗಳಲ್ಲಿ ವ್ಯಕ್ತವಾಗುವ ಬುಡಕಟ್ಟು ಕ್ರೈಸ್ತರ ನಂಬಿಕೆಗಳು ಮತ್ತು ಆಚರಣೆಗಳು**

1. ಮಲಗುವಾಗ ಪ್ರಾರ್ಥನೆ ಮಾಡದೆ ಮಲಗಿದ್ದರೆ ದೆವ್ವ ಬಂದು ಎದೆಯಮೇಲೆ ಕುಳಿತುಕೊಳ್ಳುತ್ತದೆ.
2. ಏಳುವಾಗ ಬಲಮಗ್ಗಲಲ್ಲೇ ಏಳಬೇಕು.

3. ಶಿಲುಬೆಯನ್ನು ಕಂಡರೆ ದೆವ್ವಗಳು ಓಡಿಹೋಗುತ್ತವೆ.
4. ಸೋದರ ಸಂಬಂಧಿಗಳಲ್ಲಿ ವಿವಾಹ ನಿಷಿದ್ಧ.
5. ಪಾಪನಿವೇದನೆ ಮಡುವಾಗ ತಾನು ಮಾಡಿರುವ ಯಾವೊಂದು ತಪ್ಪನ್ನೂ ಮರೆಮಾಚದೆ ಗುರುಗಳು ಬಳಿ ಹೇಳಬೇಕು.
6. ನಿಂದಾಸ್ತುತಿಯು ದೇವರ ಅಸಿತ್ವವನ್ನು ನಿರೂಪಿಸುತ್ತದೆ.
7. ಅತ್ತೆಯ ಕಿರುಕುಳವನ್ನು ಸಹಿಸಿಕೊಂಡು ಗಂಡನೊಡನೆ ಬಾಳುವೆ ಮಾಡುವ ಸ್ತ್ರೀಯನ್ನು "ಗರತಿ"ಎಂದು ಸಮಾಜ ಒಪ್ಪಿಕೊಳ್ಳುತ್ತದೆ.
8. ಹೆಂಗಸರು ಪೊರಕೆಯನ್ನು ತುಳಿಯಬಾರದು.
9. ಸ್ತ್ರೀ ಎಷ್ಟೇ ಉನ್ನತಸ್ಥಾನದಲ್ಲಿದ್ದರೂ ಪುರುಷನನ್ನು ಹೀನಾಯವಾಗಿ ಕಾಣಬಾರದು.

ಮೊದಲನೆಯ ನಂಬಿಕೆಯು ಮಕ್ಕಳಲ್ಲಿ ಧಾರ್ಮಿಕ ಪ್ರಜ್ಞೆಯನ್ನು ಬೆಳೆಸುವ ಸಲುವಾಗಿ ಹುಟ್ಟಿಕೊಂಡಿದೆ. "ಕುಳಿತು ಮಲಗಬೇಕು" ಎಂಬ ಗಾದೆಯನ್ನು ಇಲ್ಲಿ ಸ್ಮರಿಸಬಹುದು. ಒಂದು ಕ್ಷಣ ಹಾಸಿಗೆಯ ಮೇಲೆ ಕುಳಿತು, ಸಾವಧಾನವಾಗಿ ಮಲಗುವ ಅಭ್ಯಾಸ ವೈಜ್ಞಾನಿಕವಾಗಿ ಉತ್ತಮವಾದುದೇ ಆಗಿದೆ. ದಿನವೆಲ್ಲಾ ವಿಚಲಿತವಾಗಿರುವ ಮನಸ್ಸು ದೇವರ ಚಿಂತನೆಯಿಂದ ಏಕಾಗ್ರಗೊಂಡು, ಮಲಗುವ ಅಭ್ಯಾಸವಾಗಲೆಂದು "ದೆವ್ವ ಬರುತ್ತದೆ" ಎಂಬ ಭಯವನ್ನು ಹುಟ್ಟಿಸಿರಬಹುದು.

ಎರಡನೆಯ ನಂಬಿಕೆಯು ಮೇಲ್ನೋಟಕ್ಕೆ ಧಾರ್ಮಿಕತೆಯನ್ನೇ ಹೊಂದಿದೆ. ಎಡಭಾಗಕ್ಕೆ ಪಿಶಾಚಿಗಳೂ, ಬಲಭಾಗಕ್ಕೆ ದೇವದೂತರೂ ಸದಾ ಇರುತ್ತಾರೆ. ಪಿಶಾಚಿಗಳು ಕೆಟ್ಟದ್ದನ್ನೂ, ದೇವದೂತರು ಒಳ್ಳೆಯದನ್ನೂ ಮಾಡಲು ಪ್ರೇರೇಪಿಸುತ್ತಾರೆ ಎಂಬ ನಂಬಿಕೆ ಕ್ರೈಸ್ತರಲ್ಲಿದೆಯಾದ್ದರಿಂದ ಬಲಮಗ್ಗುಲಿಗೇ ಏಳಬೇಕು ಎಂದು ಹೇಳುತ್ತಾರೆ. ಆದರೆ ಹೃದಯ ಎದೆಯ ಎಡಭಾಗದಲ್ಲಿರುವ್ಯದರಿಂದ ಬಲಗಡೆ ಏಳುವುದು ಒಳ್ಳೆಯದೆಂಬುದು ವೈಜ್ಞಾನಿಕ ಸತ್ಯವಾಗಿದೆ.

ಮೂರನೆಯ ನಂಬಿಕೆಯು ಬುಡಕಟ್ಟು ಕ್ರೈಸ್ತರಿಗೆ ತಮ್ಮ ಧರ್ಮಲಾಂಛನದ ಮೇಲಿರುವ ಅಭಿಮಾನವನ್ನು ಸೂಚಿಸುತ್ತದೆ. ಇವರು ತಮ್ಮ ಮನೆಯ ಬಾಗಿಲುಗಳ ಮೇಲೆ ಶಿಲುಬೆಯ ಗುರುತನ್ನು ಹಾಕುವುದು ಇಂದಿಗೂ ರೂಢಿಯಲ್ಲಿದೆ. ಮಾತ್ರವಲ್ಲ ದಾರದಲ್ಲಿ ಅಥವಾ ಸರದಲ್ಲಿ ಸಣ್ಣ ಶಿಲುಬೆಯನ್ನು ಪೋಣಿಸಿ ಕುತ್ತಿಗೆಗೆ ಹಾಕಿಕೊಳ್ಳುವರು.

ನಾಲ್ಕನೆಯ ನಂಬಿಕೆಯು ಬಂಧುತ್ವವನ್ನು ಕುರಿತದ್ದಾಗಿದೆ. ತಂದೆ-ಮಕ್ಕಳು, ಅಣ್ಣ-ತಂಗಿಯರ ನಡುವೆ ವಿವಾಹ ನಿಷಿದ್ಧ. ಇದನ್ನು ಮಕ್ಕಳಿಗೆ ಮನವರಿಕೆ ಮಾಡಿಕೊಡುವ ಪ್ರಯತ್ನ ಇಲ್ಲಿದೆ. ಈ ರೀತಿಯಾದ ವಿವಾಹ ಸಂಬಂಧದಿಂದ ಜನಿಸುವ ಮಕ್ಕಳು ದೇಹ

ಹಾಗೂ ಮಾನಸಿಕ ಆರೋಗ್ಯದ ಕೊರತೆಯಿಂದ ನರಳುತ್ತಾರೆ (ಎಸ್. ಮ್ಯಾನುಯೆಲ್ 1987:37).

ಐದನೆಯ ನಂಬಿಕೆಯು ಮಗು ಹತ್ತುವರ್ಷದ ಪ್ರಾಯದ್ದಾಗಿನಿಂದಲೂ ಅಭ್ಯಾಸವಾಗುತ್ತದೆ. ಇದು ಮನಸ್ಸಿನ ಶುದ್ಧೀಕರಣಕ್ಕೆ ಸಂಬಂಧಿಸಿದ ವಿಷಯ. ನಿಯಮ ಪಾಲನೆಗಾಗಿ ಪಾಪನಿವೇದನೆ ಮಾಡದೆ, ಪ್ರಾಮಾಣಿಕವಾಗಿ ತಪ್ಪೊಪ್ಪಿಕೊಳ್ಳುವಿಕೆ, ಮತ್ತೆ ಮತ್ತೆ ತಪ್ಪು ಮಾಡುವುದನ್ನು ತಡೆಗಟ್ಟುತ್ತದೆ. ಮಾಡಿದ ಪಾಪವನ್ನು ಬಚ್ಚಿಟ್ಟರೆ ಸತ್ತಮೇಲೆಯೂ ಸಂತೋಷವಿಲ್ಲ ಎಂಬ ಅಂಶಗಳನ್ನೊಳಗೊಂಡ, ನರಕದ ಬಗೆಗಿನ ಭಯಂಕರ ವೇದನೆಗಳ ಬಗ್ಗೆ ಕಲ್ಪಿತ ಕಥೆಗಳನ್ನು ಹೇಳಿ ಪಾಪ ನಿವೇದನೆಯ ಅರಿವು ಮೂಡಿಸುತ್ತಾರೆ.

ಜನಪದರ ಪ್ರಾರ್ಥನೆಯಲ್ಲಿ ಪ್ರಮಾಣಿಕತೆ ಇರುತ್ತದೆ. ಕಲ್ಲಿನ ಶಿಲೆಯೇ ಆಗಿದ್ದರೂ, ಅವರಲ್ಲಿ ದೇವತೆಯನ್ನು ಕಂಡಿದ್ದಾರೆ. ಅವರಿಗೆ ದೇವರು ಇನ್ನೆಲ್ಲೋ ಕಾಣದ ಲೋಕದಲ್ಲಿಲ್ಲ. ಅವರ ಹಿರಿಯರು ಕಂಡಿರುವ ಶಿಲೆಗಳಲ್ಲಿ ಅವರೂ ದೇವರನ್ನು ಕಾಣುತ್ತಾರೆ. ಸ್ತುತಿಗಳಲ್ಲಿ ನಿಂದಾಸ್ತುತಿಗಳನ್ನು ಪ್ಮರಂದರದಾಸರ ಕೀರ್ತನೆಗಳಲ್ಲೂ ಕಾಣಬಹುದು. “ನೀನ್ಯಾಕೋ ನಿನ್ನ ಹಂಗ್ಯಾಕೋ” ಎಂಬ ಹಾಡಿನಲ್ಲಿಯೂ “ಜಾರನೆನಿಸಿಕೊಳ್ಳಲೇಕೆ ರಂಗ, ಚೋರನೆನಿಸಿಕೊಂಬ ದೂರು ನಿನಗೇಕೆ, ವಾರಜಾಕ್ಷಿಯರ ಕೂಡಲೇಕೆ” (ಎಂ. ವಿ. ವರದರಾಜನ್:91:158) ಎಂಬ ಹಾಡುಗಳಲ್ಲಿ ಜಾರ, ಚೋರ ಎಂದು ಮಧುರವಾಗಿ ದೇವರನ್ನು ನಿಂದಿಸಿದ ಧ್ವನಿ ಎದ್ದುಕಾಣುತ್ತದೆ. ನೇಮಿಚಂದ್ರನ “ಅರ್ಧನೇಮಿಪುರಾಣ” ಎಂಬ ಕೃತಿಯಲ್ಲಿ ನಚಿದನು ಯಶೋಧೆಗೆ ಹುಟ್ಟಿದ ಹೆಣ್ಣು ಮಗುವನ್ನು ತಂದು ದೇವತೆಯ ಮುಂದಿಟ್ಟು “ದೇವತೆಗೂ ಈ ವಂಚನೆಯ ಬುದ್ಧಿಯ ಹೇಳು? ನನ್ನ ಹೆಂಡತಿ ಗಂಡುಮಗುವನ್ನು ಬೇಡಿಕೊಂಡರೆ ಹುಳಿತ ಹಣ್ಣನ್ನು ಕೊಟ್ಟಿರುವೆಯಾ” ನಿನ್ನ ಹೆಣ್ಣನ್ನು ನೀನೆ ತೆಗೆದುಕೋ. ನನ್ನ ಹೆಂಡತಿ ನಿನಗೆ ಇಷ್ಟು ಹರಕೆಹೊತ್ತು ಹಸಿದು ಪಾಡುಪಟ್ಟಿದ್ದಕ್ಕೆ, ಗಂಡಾಗುವದೆಂದು ಹಿಂದೆ ನೀನು ಕೊಟ್ಟ ಹರಕೆಯನ್ನು ಮತ್ತೆ ಕೊಡು; ಇಲ್ಲವಾದರೆ ನಿನ್ನನ್ನು ಈ ಮನೆಯೊಳಗೆ ನಿಜವಾದ ದೇವತೆಯಂತೆ ಒಡವೆ ವಸ್ತ್ರಗಳನ್ನು ಇಟ್ಟು ತೊಟ್ಟು ಮೆರೆಯುವುದಕ್ಕೆ ನಾನು ಬಿಡುವುದಿಲ್ಲ. “ವಿಷ್ಣುಗುಪ್ತಂ ಲಿಂಗದನೆತ್ತಿಯೊಳಿಕ್ಕಿದಂತೆ ದೊಡ್ಡದೊಂದು ಕರಿಯ ಕಲ್ಲನ್ನೆತ್ತಿ ತಂದು ನಿನ್ನ ನೆತ್ತಿಯ ಮೇಲೆ ಕುಕ್ಕಿ ಗೊಲ್ಲತಿಯರನ್ನು ಠಕ್ಕಿಸಿ ನುಣ್ಣಗೆ ನುಂಗಿದ್ದನ್ನೆಲ್ಲವನ್ನೂ ಮೂಗಿಂದ ಬಾಯಿಂಥ ಕಕ್ಕಿಸಿಬಿಡುತ್ತೇನೆ” ಎಂದು ದೇವರನ್ನು ಬಾಯಿಗೆ ಬಂದಂತೆ ಅನ್ನುತ್ತಾನೆ. ಇಲ್ಲಿ ಭಕ್ತರು. ಮೂರ್ತಿಗಳಲ್ಲಿ ದೇವರನ್ನು ಕಾಣುತ್ತಾರೆ. ಇದು ಭಕ್ತಿಯ ಪರಮಾವಧಿ, ನಿಂದನೆಯೂ ದೇವರನ್ನು ಭಕ್ತನೆಡೆಗೆ ವಾಲುವಂತೆ ಮಾಡುತ್ತದೆ. ಇಲ್ಲಿ ಅವರ ಭಾಷೆಗಿಂಲೂ ಭಾವನೆಚಿಯ ಶುದ್ಧತೆ ಪ್ರಮುಖವಾದುದು. ಪಾತೊಳ್ಯೋ ಕಥೆಯಲ್ಲಿ ಅತ್ತೆಗೆ ಅಂಜಿದ

ಸೊಸೆಯ ವರ್ತನೆಯಿಂದಾಗಿ ಬಾಯಿಮೇಲೆ ಕೈಯಿಟ್ಟುಕೊಂಡ ದೇವತೆಯನ್ನು ಸೊಸೆ ತನ್ನ ಮುಗ್ಧತೆಯಿಂದ ಗೆಲ್ಲುತ್ತಾಳೆ.

ಏಳನೆಯ ನಂಬಿಕೆಯು ತಾಯಿಮಕ್ಕಳ ಅನ್ಯೋನ್ಯತೆಯನ್ನು ಸೂಚಿಸುತ್ತದೆ. ತಾಯಿಯನ್ನು ಪ್ರೀತಿಸುವ ಮಗ ಹೆಂಡತಿಯನ್ನು ಕಾಪಾಡುತ್ತಾನೆ, ಎಂಬ ಗಾದೆ ಇಲ್ಲಿಯ ಕ್ರೈಸ್ತರಲ್ಲಿದೆ. ಆದ್ದರಿಂದ ಮೈಸೂರು ಜಿಲ್ಲೆಯ ಕ್ರೈಸ್ತರ ಕುಟುಂಬಗಳಲ್ಲಿ ಅತ್ತೆಯದೇ ಮೇಲುಗೈ ತಾನು ಗಂಡನೊಡನೆ ನೆಮ್ಮದಿಯಾಗಿ ಬಾಳಬೇಕಾದರೆ ಅತ್ತೆಯು ಮೇಲುಗೈ ತಾನು ಗಂಡನೊಡನೆ ನೆಮ್ಮದಿಯಾಗಿ ಬಾಳಬೇಕಾದರೆ ಅತ್ತೆಯು ಕೊಡುವ ಕಷ್ಟಗಳನ್ನು ಸಹಿಸಿಕೊಳ್ಳಬೇಕು. ಇಂತಹ ಹಲವಾರು ಕಥೆಗಳು ಮೈಸೂರಿನ ಕ್ರೈಸ್ತರಲ್ಲಿ ಪ್ರವಲಿತವಿದೆ. ಅತ್ತೆಯ ಯಜಮಾನಿಕೆಯನ್ನು ಸೊಸೆಗೆ ವಹಿಸಿಬಿಟ್ಟರೆ, ಮಗನು ಹೆಂಡತಿಯ ಕಡೆ ಸೇರಿಕೊಂಡು ತನ್ನನ್ನು ನಿರ್ಲಕ್ಷ್ಯ ಮಾಡಬಹುದೆಂಬ ಕಾರಣಕ್ಕಾಗಿ ಅತ್ತೆಯ ಯಜಮಾನಿಕೆ ರೂಢಿಯಲ್ಲಿರಬಹುದು.

ಎಂಟನೆಯ ನಂಬಿಕೆಯು ಮೈಸೂರಿನ ಕ್ರೈಸ್ತರಲ್ಲಿ ಮಾತ್ರವಲ್ಲ ಇತರ ಧರ್ಮಿಯರಲ್ಲೂ ಕಂಡು ಬರುತ್ತದೆ. ಪೊರಕೆ ಮನೆಯ ಒಂದು ಮೂಲೆಯಲ್ಲಿರುವುದೇ ಲಕ್ಷಣ. ಮನೆಯನ್ನು ಅಚ್ಚುಕಟ್ಟಾಗಿರಿಸುವುದು ಸ್ತ್ರೀಯರ ಕರ್ತವ್ಯ. ಅದು ಅವರಿಗೆ ಒಗ್ಗಿಹೋಗಿರುತ್ತದೆ. ಮನೆಯ ಕಸವನ್ನು ಗುಡಿಸಿ ಶುಚಿಮಾಡಲು ಸಹಾಯಕವಾಗಿರುವ ಪೊರಕೆ ಕಾಲಿಗೆ ತಗುಲಿದರೆ, ಮುಟ್ಟಿಕಣ್ಣಿಗೊತ್ತೊಕೊಂಡು ತೆಗೆದಿಡುವ ರೂಢಿ ಮೈಸೂರು ಜಿಲ್ಲೆಯ ಕ್ರೈಸ್ತ ಸ್ತ್ರೀಯರಿಗೂ ಇದೆ. ಮೂಲಕಥೆಯಲ್ಲಿರುವ ಇಂತಹ ಕೆಲವು ಸಂಗತಿಗಳನ್ನು "ಪದ್ಮಾವತಿಸೂಳೆ" ಎಂಬ ಕಥೆಯಲ್ಲಿ ಸೇರಿಸಿಕೊಂಡು ಹೆಣ್ಣುಮಕ್ಕಳಿಗೆ ಸೂಚನೆ ನೀಡಿದಂತಿದೆ.

ಒಂಬತ್ತನೆಯ ನಂಬಿಕೆಯು ಪಿತೃಪ್ರಧಾನ ಕುಟುಂಬದಿಂದಾಗಿ ರೂಢಿಯಲ್ಲಿ ಬಂದಿದೆ. ಮೈಸೂರು ಜಿಲ್ಲೆಯ ಕ್ರೈಸ್ತ ಸಮಾಜದಲ್ಲಿ ಪುರುಷನಿಗೆ ಶ್ರೇಷ್ಠಸ್ಥಾನ. ಗಂಡಸು ಸೋಮಾರಿಯಾಗಿ ಪೋಲಿಬಿದ್ದು ಅಲೆಯುತ್ತಿದ್ದರೆ ಅಥವಾ ಕಾಯಿಲೆಯಿಂದ ನರಳುತ್ತಿದ್ದರೆ ಸ್ತ್ರೀ ತಾನೆ ದುಡಿದು ಅವನನ್ನೂ, ಅವನ ಮಕ್ಕಳನ್ನೂ ನೋಡಿಕೊಳ್ಳುವುದು ಅನಿವಾರ್ಯ. ಆದರೂ ಪುರುಷನನ್ನು ಹೀನಾಯವಾಗಿ ಕಾಣುವುದನ್ನು ಸಮಾಜ ದೂಷಿಸುತ್ತದೆ; ಅವನನ್ನು ಗೌರವಿಸದಿದ್ದಲ್ಲಿ ಸ್ತ್ರೀಯ ಶೀಲವನ್ನೇ ಶಂಕಿಸುತ್ತದೆ. ಇದು "ಪದ್ಮಾವತಿಸೂಳೆ" ಕಥೆಯಲ್ಲಿ ಚೆನ್ನಾಗಿ ಚಿತ್ರಿತವಾಗಿದೆ.

ಹೀಗೆ "ಎಲ್ಲಾ ಕಾಲ, ದೇಶಗಳಲ್ಲೂ ಮಾನವ ಮನಸ್ಸು ಕೆಲಸಮಾಡುವ ರೀತಿ ಒಂದೇ ಎಂಬುದನ್ನು ತೋರಿಸಿ "ಮನುಷ್ಯಜಾತಿ ತಾನೊಂದೆ ವಲಂ" ಎಂಬ ಸತ್ಯವನ್ನು

ಸ್ಥಾಪಿಸತಕ್ಕ ಪ್ರಕಾರವಿದು" (ಸಿ.ಪಿ.ಕೆ. 1981:35) ಎಂಬ ಅಭಿಪ್ರಾಯವನ್ನು ಇಲ್ಲಿ ನೆನೆಚಿಬಹುದು. ಕಥೆಗಳು ಬೇರೆ ಬೇರೆ ಭೌಗೋಳಿಕ ಪರಿಸರಗಳಲ್ಲಿ ಹುಟ್ಟಿ ಬೆಳೆದುಕೊಂಡಿದ್ದರೂ ಅವುಗಳೆಲ್ಲದರ ಮನೋಧರ್ಮ ಒಂದೇ ಆಗಿರುತ್ತದೆ ಎಂಬುದು ಕ್ರೈಸ್ತರಲ್ಲಿ ಪ್ರಚಲಿತವಿರುವ ಕಥೆಗಳಿಂದ ತಿಳದುಬರುತ್ತದೆ. ಅಲ್ಲದೆ ರೂಪಾಂತರಗೊಂಡ ಬದಲಾವಣೆಗಳಲ್ಲಿ ಅಲ್ಲಿನ ಸಂಸ್ಕೃತಿಯು ಪ್ರತಿಬಿಂಬಿತವಾಗಿರುವುದನ್ನು ಗುರುತಿಸಲಾಗಿದೆ.

ಮೈಸೂರು ಜಿಲ್ಲೆಯ ಕ್ರೈಸ್ತರ ಜನಪದ ಸಾಹಿತ್ಯದಲ್ಲಿ ಕಥೆಗಳಿಗಿಂತಲೂ ಅಧಿಕ ಪ್ರಮಾಣದಲ್ಲಿ ಪ್ರಚಲಿತದಲ್ಲಿರುವುದು ಗೀತಸಾಹಿತ್ಯ. ಅದರಲ್ಲೂ ಧಾರ್ಮಿಕ ಗೀತೆಗಳೇ ಹೆಚ್ಚಾಗಿ ಲಭ್ಯವಿವೆ. ನೂರಾರು ವರ್ಷಗಳ ಹಿಂದಿನಿಂದ ಬಳಕೆಗೆ ಬಂದಂತಹ ಕ್ರೈಸ್ತ ಜನಪದ ಗೀತೆಗಳು ನಮಗೆ ಸಿಗುತ್ತವೆ (ಪೈ 1989:69). ಮಾನವಶಾಸ್ತ್ರದ ದೃಷ್ಟಿಯಿಚಿದ ಮಾನವನ ಜೀವನದ ಎಲ್ಲಾ ಸಂದರ್ಭಗಳನ್ನು ಗುರುತಿಸಿ ವಿಂಗಡಿಸುವಂತೆ ಧಾರ್ಮಿಕ ಗೀತೆಗಳನ್ನೂ ವಿಂಗಡಿಸಿಕೊಂಡಿರುವುದ ಕಂಡು ಬರುತ್ತವೆ. ಮೈಸೂರು ಜಿಲ್ಲೆಯ ಕ್ರೈಸ್ತರ ಗೀತೆಗಳಲ್ಲೂ ಇಂತಹ ವಿಂಗಡನೆಯನ್ನು ಕಾಣಬಹುದು. ಕ್ರಿಸ್ತಜಯಂತಿಯ ಗೀತೆಗಳು, ಕ್ರಿಸ್ತನಪಾಡು ಮರಣದ ಗೀತೆಗಳು, ಪ್ರಜಾವೇಳೆಯಲ್ಲಿ ಹಾಡುವ ಗೀತೆಗಳು, ವಿವಾಹಸಂಸ್ಕಾರದ ಪ್ರಜಾವೇಳೆಯಲ್ಲಿ ಹಾಡುವ ಗೀತೆಗಳು, ವಿವಾಹಸಂಸ್ಕಾರದ ಪ್ರಜಾವೇಳೆಯಲ್ಲಿ ಹಾಡುವಗೀತೆಗಳು, ಶವಸಂಸ್ಕಾರದ ಪ್ರಜಾವೇಳೆಯಲ್ಲಿ ಹಾಡುವ ಗೀತೆಗಳು, ಸಚಿತರ ಮೇಲಿನ ಭಕ್ತಿಗೀತೆಗಳು, ಇಷ್ಟೇ ಅಲ್ಲ, ತಮ್ಮ ಜೀವನದ ಪ್ರಮುಖ ಹಂತಗಳಲ್ಲಿ ಆಚರಿಸುವ ವಿಧಿ ವಿಧಾನಗಳ ಸಚಿದರ್ಭಗಳಲ್ಲಿ ಹಾಡುವ ಹಾಡುಗಳಲ್ಲಿ ಇವರ ಸಂಸ್ಕೃತಿ ವ್ಯಕ್ತವಾಗುತ್ತದೆ.

## 7.2 ಗೀತೆಗಳು

**7.2.1 ಭಕ್ತಿ ಗೀತೆಗಳು** ಪ್ರಥಮವಾಗಿ ಭಕ್ತಿಗೀತೆಗಳನ್ನು ಗಮನಿಸಬಹುದು. ಕ್ರೈಸ್ತ ಧರ್ಮದ ಉಪಾಸನೆಗೆ ಬೇಕಾದ ಗೀತೆಗಳು ಈ ಮೂಲದಲ್ಲಿ ತುಂಬಿವೆ. ಇವು ಯೇಸುಕ್ರಿಸ್ತನ ಜೀವನ ಮತ್ತು ಬೋಧೆ ಯನ್ನು ನಿರೂಪಿಸುತ್ತವೆ. ಯೇಸುವಿನ ಜಯಂತಿಯ ಸಮಯದಲ್ಲಿ ಹಾಡುವ ಗೀತೆಗಳು, ತಪಸ್ಸು ಕಾಲದ ಗೀತೆಗಳು, ತಮ್ಮ ಜೀವನದ ಪ್ರಮುಖ ಹಂತಗಳಲ್ಲಿ ಆಚರಿಸುವ ವಿಧಿ–ಸಂಸ್ಕಾರಗಳಾದ ವಿವಾಹ, ಜನನ, ಮರಣಗಳ ಸಮಯದಲ್ಲಿ ಹಾಡುವಂತಹ ಹಾಡುಗಳು, ದಿನನಿತ್ಯ ಪೂಜೆಗಳಲ್ಲಿ ಹಾಡುವಂತಹ ಹಾಡುಗಳು – ಹೀಗೆ ವಿಂಗಡಿಸಿಕೊಳ್ಳಬಹುದು.

" ಆರಂಭದ ಕ್ರೈಸ್ತ ಗೀತೆಗಳು ಜರ್ಮನ್, ಇಂಗ್ಲೀಷ್ ಭಾಷೆಗಳಿಂದ ಬಂದವುಗಳಲ್ಲದೆ ಅದೇ ಧಾಟಿಯಲ್ಲಿ ಇದ್ದವೆಂಬುದನ್ನೂ ಕ್ರಮೇಣ ದೇಶೀಯ ರಾಗಗಳನ್ನು ಅಳವಡಿಸಿಕೊಳ್ಳುವಾಗ ಷಟ್ಪದಿ, ಚೌಪದಿಗಳನ್ನು ಬಳಸಿದರೂ ಮುಂದೆ ಆಧುನಿಕ ಭಾವಗೀತೆಗೆ

ಸಮೀಪವೆನಿಸುವಂತಹ ರಾಗ, ಮಟ್ಟುಗಳಲ್ಲಿ ಅನುವಾದಿಸಿದ್ದು ಕಂಡು ಬರುತ್ತದೆ '' (ಹಾವನೂರ, 1974:425) ಎಂಬ ವಿದ್ವಾಂಸರ ಅಭಿಪ್ರಾಯದಂತೆ ಇತ್ತೀಚಿನ ಗೀತೆಗಳು ಪದವಿನ್ಯಾಸ, ರಾಗ ಮಟ್ಟುಗಳಲ್ಲಿ ಗುರುತಿಸುವಂತಹ ವ್ಯತ್ಯಾಸಗಳನ್ನು ಹೊಂದಿವೆ. ಕ್ರೈಸ್ತ ಜಯಂತಿಯ ಹಾಡುಗಳು ಮನೋಜ್ಞ- ವಾಗಿಯೂ, ಅರ್ಥಗರ್ಭಿತವಾಗಿಯೂ ಇವೆ. ಭಾವಪೂರ್ಣವಾದ ಈ ಹಾಡುಗಳು ಕ್ರಿಸ್ಮಸ್ ಹಬ್ಬಕ್ಕೆಂದೇ ರಚಿತವಾದ ಗೀತೆಗಳಾಗಿವೆ. ಉದಾಹರಣೆಗೆ:

ಜೋ ಜೋ ಜೋ ಎಚಿದು ಜೋಗುಳ ಹಾಡಿ
ನಿನ್ನನ್ನು ಮಲಗಿಸುವೆ ಕಂದಾ ನೀ ಮಲಗು
ಜನಿಸಲು ನಿನಗೊಂದು ಮನೆಯಿಲ್ಲವೇ
ಗೋದಲಿಯೊಳಗೆ ಮಲಗಿರುವೆ
ಧರಣಿಯ ಒಡೆಯಾ ಮಲಗದಿರು
ಎನ್ನ ಮನದಲಿ ನಿನಗೆ ಸ್ಥಳ ಕೊಡುವೆ (ಅಮೃತ 722).

ಹೀಗೆ ತಮ್ಮ ಮಗುವಿಗೆ ಜೋಗುಳ ಹಾಡುವಚಿತೆ ಚರ್ಚಿನಲ್ಲಿ ಸ್ತ್ರೀ ಪುರುಷರೆಲ್ಲರೂ ಒಕ್ಕೊರಲಿನಿಂದ ಹಾಡುತ್ತಾರೆ.

ಅಂತೆಯೇ ಈಸ್ಟರ್ ಹಬ್ಬದ ಸಮಯದಲ್ಲಿ ಶೋಕಭರಿತವಾದ ಹಾಡುಗಳನ್ನು ರಚಿಸಿ ಹಾಡುತ್ತಾರೆ.

ಪ್ರೇಮದ ಸಾಗರ ಯೇಸು
ಪಾಪಿಯ ಪಾಲಕ ಯೇಸು
ಲೋಕದ ಪಾಪಕೆ ಯೇಸು, ಯಾತನೆ ಸಹಿಸಿದೆ ನೀನು
ಪ್ರೀತಿಯ ಆಳವದೇನು? ಅರಿಯದೆ ಆಳುತಿಹೆ ನಾನು (ಅಮೃತ 789)

ಅಲ್ಲದೆ ಪ್ರಜಾವಿಧಿಗಳಲ್ಲಿ ಪ್ರಾರಂಭದ ಗೀತೆಗಳು, ಅರ್ಪಣಾಗೀತೆ, ಸತ್ಪ್ರಸಾದ ವಿನಿಯೋಗ ಮಾಡುವಾಗ ಹಾಡುವ ಗೀತೆ, ಮುಕ್ತಾಯಗೀತೆ ಹೀಗೆ ಸಚಿದರ್ಭಾನುಸಾರ ಗೀತೆಗಳನ್ನು ಹಾಡುತ್ತಾರೆ.

ಕ್ರೈಸ್ತ ಜನಪದ ಗೀತೆಗಳು ಸಮ್ಮಿಶ್ರ ಸಂಸ್ಕೃತಿಯ ಅಂಗವೆಂದು ಹೇಳಬಹುದು. ಜನಪದ ಗೀತೆಗಳಲ್ಲಿ ಪ್ರೇರಣೆಯ ಸ್ಥಾನ ಅಧಿಕ. ಮಾನವನ ಅನುಭವಕ್ಕೆ ಬರುವ ಎಲ್ಲಾ ವಿಷಯಗಳು ಒಂದು ಪ್ರೇರಣೆಯಾಗಿ ಪರಿಣಮಿಸುತ್ತವೆ. ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕಿಗೆ ಸೇರಿದ ಕೂಡಲೂರು, ಎಚ್.ಡಿ. ಕೋಟೆಯ ನಾಗನಹಳ್ಳಿ, ಕೆ.ಆರ್.ನಗರದ ಡೋರ್ನಹಳ್ಳಿ, ಚಾಮರಾಜನಗರದ ನಾಗವಳ್ಳಿ, ಮಾದಾಪುರ, ಕಿರಗಸೂರು ಮುಂತಾದ ಕಡೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕನ್ನಡಿಗ ಕ್ರೈಸ್ತರು ಕಂಡು ಬರುತ್ತಾರೆ. ಇವರು ಹಬ್ಬ ಹುಣ್ಣಿಮೆಗಳಲ್ಲಿ ಕೋಲಾಟ, ನಾಟಕ, ಮುಂತಾದ ಕಲೆಗಳನ್ನು ಪ್ರದರ್ಶಿಸುತ್ತಾರೆ. ಮೈಸೂರಿನ ಕ್ರೈಸ್ತರಲ್ಲಿ ' ಜ್ಞಾನಸುಂದರಿ ' ಎಂಬ ಗರತಿಯ ನಾಟಕ ರೂಢಿಯಲ್ಲಿದೆ. ಈಲ್ಲೆಯ ಎಲ್ಲಾ

ಹಳ್ಳಿಗಳಲ್ಲೂ ಈ ನಾಟಕ ಪ್ರಖ್ಯಾತಿ ಪಡೆದಿರುವುದು ಆಶ್ಚರ್ಯದ ಸಂಗತಿ. ಕೆಲವೊಮ್ಮೆ ಸಂತ ಅಂತೋಣಿಯವರ ನಾಟಕವನ್ನೂ ಪ್ರದರ್ಶಿಸುತ್ತಾರೆ.

**7.2.2 ಜನಪದ ಗೀತೆಗಳು** ಜನಪದ ಗೀತೆಗಳು ಸಂಧರ್ಭಕ್ಕೆ ಪೂರಕವಾಗಿ ಜನಗಳ ಬಾಯಲ್ಲಿ ಹೊರ ಹೊಮ್ಮುವ ಸಹಜ ಪ್ರತಿಮೆಯ ಅಭಿವ್ಯಕ್ತಿಯಾಗಿರುತ್ತದೆ. ಕೆಲಸದಲ್ಲಿ ನಿರಂತರವಾಗಿರಬೇಕು ಕೊಳ್ಳುವಾಗ ಬೀಸುವಾಗ ಸೃಷ್ಟಿಯಾಗುತ್ತದೆ. ಮೈಸೂರು ಜಿಲ್ಲೆಯ ಕ್ರೈಸ್ತರು ಕ್ರಿಸ್ತಜಯಂತಿ ಸಚಿದರ್ಭದಲ್ಲಿ ಹಾಡುವ ಹಾಡುಗಳು ತಮ್ಮ ಮಕ್ಕಳಿಗೆ ಹಾಡುವ ಲಾಲೀ ಹಾಡುಗಳೇ ಆಗಿರುತ್ತವೆ: (ಅನುಬಂಧ 7 ನೋಡಿ )

ಜೋ ಕಂದಾ ಜೋ ಕಂದಾ
ತೊಟ್ಟಿಲ ನಾ ತೂಗುವೆ
ಜೋಗುಳ ನಾ ಹಾಡುವೆ
ಮಲಗು ಮಮತೆ ಮಡಿಲಲಿ

ಜೋಗುಳ ಹಾಡುವಿಕೆ ಪ್ರತಿಯೊಬ್ಬ ತಾಯಿಯ ಅನುಭವಕ್ಕೆ ನಿಲುಕುವಂಥದ್ದು.

ಮೈಸೂರಿನ ಕ್ರೈಸ್ತರು ಯೇಸುವಿನ ತಾಯಿ ಮರಿಯಮ್ಮಳನ್ನು ತಮ್ಮೂರ ಗರತಿಯಂತೆ ಕಲ್ಪಿಸಿಕೊಂಡು ಆಕೆಯನ್ನು ಮನೆ ತುಂಬಿಸಿಕೊಳ್ಳುವ ರೀತಿ ಹೀಗಿದೆ:

ಪಾದ ತೊಳಕಂಡೊ ಮುಂಜೆರಗ ಹೊದಕಂಡು
ಮುಂದ್ಮುಂದ್ಬತ್ತಾರ ಮರಿಯವ್ವ ಮಠದೊಳಗ
ಬಲಗಾಲಲಕ್ಕಿ ಒದೆಯೂತ॥
ಒಕ್ಕಳಕ್ಕೆ ಒದ್ದು ಬಳಬಂದ್ರು ಮರಿಯವ್ವ
ಮಕ್ಕಳ ಮೈಯ ತಡವೀರೊ ಮಠದಲ್ಲಿ
ಪೀಠ ಏರಿದರೋ ಮರಿಯವ್ವ॥ (ತಲ್ವಾಡಿ: 1983:96)

ಅಕ್ಕಿ ಒದ್ದುಕೊಂಡು ಮದುವೆಹೆಣ್ಣು ಅತ್ತೆಮನೆಚಿುನ್ನು ಪ್ರವೇಶಿಸುವ ಸಂಪ್ರದಾಯ ಹಿಂದೂ ಧರ್ಮಿಯರಲ್ಲಿದೆ. ಇದೇ ಸಂಪ್ರದಾಯ ಕನ್ನಡ ಕ್ರೈಸ್ತರಲ್ಲೂ ರೂಢಿಯಲ್ಲಿದೆ.

ಬೆಂಡೋಲೆ ಇಟ್ಕಂಡು ಮೂಗುತಿ ಇಟ್ಕಂಡು
ಗಾಜಿನ ಬಳೆಗಳ ತೊಟ್ಕಂಡು ಬಂದಾಳೆ
ನಮ್ಮೂರ ಗರತಿ ಮರಿಯವ್ವ॥

ಎಷ್ಟೇ ಬಡವರಾದರೂ ಮದುವೆಯಲ್ಲಿ ಹೆಣ್ಣಿಗೆ ಒಂದು ಜೊತೆ ಓಲೆ, ಮೂಗುತಿ, ಕೈತುಂಬಾ ಗಾಜಿನಬಳೆ ಇತ್ಯಾದಿಗಳನ್ನು ತೊಡಿಸುವುದು ವಾಡಿಕೆ. ಇಂತಹ ಅಲಂಕಾರವನ್ನು "ಮಾತೆ ಮರಿಯಮ್ಮ" ನಿಗೆ ಆರೋಪಿಸಿ ತೃಪ್ತಿಪಟ್ಟು ಕೊಳ್ಳುತ್ತಾರೆ.

"ಮಾತೆಮರಿಯಮ್ಮ" ನಿಗೆ ಆರತಿಮಾಡುವ ಈ ಹಾಡಿನಲ್ಲಿ ಸ್ತ್ರೀಯರು ಧನ್ಯರೆ ಇರುವುದು ತಾಯಿಯಾಗುವುದರಲ್ಲಿ ಎಂಬ ಭಾವನೆ ವ್ಯಕ್ತವಾಗಿದೆ.

ಎತ್ತಿರಾರುತಿಯ ಮರಿಯವ್ವನ್ಗೆ ಬೆಳಗೀರಾರುತಿಯ
ಆರು ವರ್ಷದಿಂದ ತಪ್ಸಿದ್ದ ಬಿಳಿಯೋಲೆ
ತಾಯಿ ಮರಿಯವ್ನ ತಪ್ಸಿದ್ದ ಹೊಟ್ಟೇಲಿ'
ಹುಟ್ಟೇದ ಸಣ್ಣ ಶಿಸು ಬಾಲ (ಎತ್ತೀರಾರುತಿಯ)
ಹತ್ತು ವರ್ಷದಿಂದ ತಪ್ಸಿದ್ದ ಬಿಳಿಯೋಲೆ
ತಾಯಿ ಮರಿಯವ್ನ ತಪ್ಸಿದ್ದ ಹೊಟ್ಟೇಲಿ'
ಹುಟ್ಟೇದ ಸಣ್ಣ ಶಿಸು ಬಾಲ (ಎತ್ತೀರಾರುತಿಯ)

ಸ್ತ್ರೀಗೆ ಸಂತಾನಪ್ರಾಪ್ತಿಯಾಗುವುದು ಆಕೆಯ ತಪಸ್ಸಿನ ಫಲ. ಅದರಲ್ಲೂ ಜಗದ್ರಕ್ಷಕನ ತಾಯಿ, ವಿಶ್ವವದ ಎಲ್ಲಾ ಸ್ತ್ರೀಯರಿಗಿಂತಲೂ ಧನ್ಯಳು ಎಂಬ ಭಾವನೆ ಕ್ರೈಸ್ತರಿಗಿದೆ. ಮರಿಯಮ್ಮನ ಜೀವನವೇ ಒಂದು ತಪ್ಪಸ್ಸು. ತಾನು ಹಡೆಯಲಿರುವುದು ದೇವತಾಪುರುಷನನ್ನು ಎಂಬುದು ಆಕೆಗೆ ತಿಳಿದಿತ್ತು. ಮಾತ್ರವಲ್ಲ ಆತನ ಶಿಲುಬೆ ಮರಣದ ವಿಷಯವೂ ತಿಳಿದಿತ್ತು. ಹೀಗಾಗಿ ಆಕೆ ಪ್ರತಿಕ್ಷಣ ವ್ಯಾಕುಲಭರಿತಳಾಗಿರುತ್ತಾಳೆ:

ಉಪ್ಪರಿಗೆ ಒಳಗೆ ಎನ್ಮಾಡ್ತೀರಿ ಮ್ಯರಿಯವ್ವ
ತುಪ್ಪದ ದೀವಿಗೆ ಬೆಳಕಲ್ಲಿ ಮ್ಯರಿಯವ್ವ
ಶಿಲುಬೆಗೆ ಮುತ್ತ ಬಿಡಿಸವರೆ॥
ಮಾಳಿಗೆ ಒಳಗೆ ಏನ್ಮಾಡ್ತೀರಿ ಮ್ಯರಿಯವ್ವ
ಮೇಣದ ಬತ್ತಿ ಬೆಳಕಲ್ಲಿ ಕೂತ್ಕೊಂಡು
ಶಿಲುಬೆಗೆ ಮುತ್ತ ಪೋಣಿಸವರೆ॥ (ತಲ್ವಾಡಿ 1983:109)

ಉಪ್ಪರಿಗೆ ಮನೆ, ತುಪ್ಪದದೀವಿಗೆ ಇವೆಲ್ಲಾ ಶ್ರೀಮಂತಿಕೆಯ ಸೂಚನೆಯೇ ಆದರೂ ಆಕೆಯ ಮನಸ್ಸೆಲ್ಲಾ ಚಿಂತಿಸುವುದು ಶಿಲುಬೆಯನ್ನು ಮಾತ್ರ ತನ್ನ ಮಗ ಬಲಿಯಾಗಲಿರುವ ಆ ಶಿಲುಬೆಗೆ ಮುತ್ತವನ್ನು ಬಿಡಿಸುವ ಕೆಲಸವನ್ನೇ ಮಾಡುತ್ತಾಳೆ.

ಮೇಣದ ಬತ್ತಿಗೆ ಕ್ರೈಸ್ತ ಜೀವನದಲ್ಲಿ ಅಗ್ರಸ್ಥಾನ, ದೀಕ್ಷಾಸ್ನಾನ, ಧೃಡೀಕರಣ, ಪರಮಪ್ರಸಾದ ಸಂಸ್ಕಾರಗಳಲ್ಲಿ ಮೇಣದಬತ್ತಿಯ ಪಾತ್ರ ಹಿರಿದು. ಪ್ರತಿದಿನ ಮನೆಯಲ್ಲಿ ಮೇಣದ ಬತ್ತಿ ಹಚ್ಚಿ ಪ್ರಾರ್ಥನೆ ಮಾಡುತ್ತಾರೆ. ಇದು ಬೆಳಕಿನ ಸಂಕೇತ ಮಾತ್ರವಲ್ಲ ತ್ಯಾಗ

ಹಾಗೂ ನಿಸ್ವಾರ್ಥದ ಸಂಕೇತವೂ ಆಗಿದೆ. ಮೇಣದ ಬತ್ತಿ ಇತರರಿಗೆ ಬೆಳಕನ್ನು ನೀಡಲು ಕರಗುತ್ತಾ ಕರಗುತ್ತಾ ತಾನೇ ಇಲ್ಲವಾಗುತ್ತದೆ.

ಏಕಮಾತ್ರ ಪುತ್ರನನ್ನು ಕಳೆದುಕೊಂಡು ದುಃಖಿಸುವ ವ್ಯಾಕುಲಮಾತೆಗೆ ಭಕ್ತರ ಸಚಿತಾಪ ಇಚಿತಿದೆ:

ಬಾಡೀದ ಮೊಕದಲ್ಲಿ ಈಸೊಂದು ನೋವೇನ
ಅಳಬೇಡ ತಾಯಿ ಮರಿಯವ್ವ ನಿನಮಗ
ರಥದ ಮೇಲೇರಿ ಬಂದಾನು॥

ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕಿಗೆ ಸೇರಿದ ಕೂಡಲೂರು ಗ್ರಾಮದ ಕ್ರೈಸ್ತರು ಸಂದರ್ಭೋಚಿತವಾಗಿ ಹಾಡುಗಳನ್ನು ರಚಿಸಿ ಹಾಡುವುದರಲ್ಲಿ ನಿಸ್ಸೀಮರು ವಿಚಾರಣೆ ಗುರುಗಳ (Parish Priest) ಹಬ್ಬಗಳಲ್ಲಿ ಹಾಡುವ ಕೋಲಾಟದ ಪದ ಹೀಗಿದೆ:

ಜ್ಞಾನಗುರುವೇ ಯೇಸುಸ್ವಾಮಿ ಮನವಿ ಲಾಲಿಸೈ
ನಮ್ಮ ವಿಚಾರಣೆ ಸ್ವಾಮಿಯವರ ಕಾದು ರಕ್ಷಿಸೈ
ದೇವಮಾತೆ ಸತ್ಯವಚಿತೆ ಮೋಕ್ಷನಾಯಕಿ
ಜೀವವರವ ನೀಡಿರಮ್ಮ ಭಕ್ತಪೋಷಕಿ
ಕಾನಾನಗರ ಮದುವೆಯಲ್ಲಿ ಮಾಡಿದಂದದಿ
ಜ್ಞಾನಕರವ ನೀಡಿ ಸಲಹೆ ಮರೆಯದಂದದಿ

ತಮ್ಮ ವಿಚಾರಣೆಗುರುಗಳ ಶ್ರೇಯಸ್ಸಿಗಾಗಿ ಮಾತೆಯು ತಮ್ಮ ಮಗ "ಯೇಸು"ವನ್ನು ಕೋರಲಿ ಎಂಬ ಆಶಯ ಈ ಹಾಡಿನಲ್ಲಿದೆ.

ಮೈಸೂರು ಜಿಲ್ಲೆಯ ಕ್ರೈಸ್ತರಲ್ಲಿ ಗುರುವಿಗೆ ಶ್ರೇಷ್ಠ ಸ್ಥಾನವಿದೆ. "ಗುರುಮೊಳಿಕ್ಕು ಮರುಮೊಳಿಯಿಲ್ಲೈ" ಎಂಬ ತಮಿಳು ಗಾದೆಯು ಪ್ರಚಲಿತವಿದೆ. ಗುರುವಿನ ತೀರ್ಮಾನವೇ ಅಂತಿಮ ತೀರ್ಮಾನವೆಂದು ಕ್ರೈಸ್ತರು ಒಪ್ಪಿಕೊಳ್ಳುತ್ತಾರೆ.

ಗುರುಪಟ್ಟದ ಸಂದರ್ಭದ ಸಂಭ್ರಮ ಹೀಗಿರುತ್ತದೆ.

ಯಾಲಕ್ಕಿ ಗೊನೆಬಿಟ್ಟು ಆಲೂಗಡಿಗ್ಯಾದೋ
ಜಾಣ ತಮ್ಮಯ್ಯನ ಗುರುಪಟ್ಟಕ್ಕೆ ಬಂದೋರುಂಡು
ಮಿಕ್ಕಿದ್ದು ಮುನ್ನೂರು ಹೆಸಗೇಲಿ॥ (ತಲ್ವಾಡಿ: 1983:62)

ಜಪಸರದ ಮಾಲೇರಿ ಮುತ್ತೊಂದು ಹೊಳೆದಿತ್ತು
ಹೊಳೆದಂತ ಮುತ್ತ ತಂದಿಟ್ಟು ಮರಿಯವ್ವ
ನಿಮ್ಮಯ ಪಾದಕೆ ಎರಗೀನಿ.

ಕುಟುಂಬದ ಸದಸ್ಯರೊಬ್ಬರು ಗುರುವಾದರೆ ಆ ಕುಟುಂಬಕ್ಕೆ ದೇವರ ಅನುಗ್ರಹ ಇರುವ್ಯದೆಂದು ಕ್ರೈಸ್ತರು ನಂಬುತ್ತಾರೆ. "ಶರಣ" ನಲ್ಲಿ ಶಿವನನ್ನು ಕಾಣುವ ಶಿವಶರಣರಂತೆ ಗುರುವಿನಲ್ಲಿ ಸಾಕ್ಷಾತ್ ಯೇಸುಕ್ರಿಸ್ತನನ್ನು ಕಾಣುವರು.

ಶರಣರ ನೆನೆದಾರ ಸರಗೀಯ ಇಟ್ಟಾಂಗ
ಅರಳ ಮಲ್ಲೀಗೆ ಮುಡಿದಂಗ ಕಲ್ಯಾಣ
ಶರಣರ ನೆನಯೋ ನನ ಮನವೇ॥ (ಗದ್ದಗಿಮಠ 1963:23)

ಶರಣರನ್ನು ಸಾಕ್ಷಾತ್ ಶಿವನೆಂದು ತಿಳಿಯುವ ಭಾವ ವೀರಶೈವರಲ್ಲಿರುವಂತೆಯೇ ಮೈಸೂರಿನ ಕ್ರೈಸ್ತರಲ್ಲಿಯೂ ಇದೆ. ಧರ್ಮಸಭೆಯ (Church) ಆಡಳಿತ ಸಾಮಾನ್ಯ ಜನರಿಗೆ ನೇರವಾಗಿ ತಲುಪುವುದಿಲ್ಲ. ಅದು ಗುರುಸ್ವಾಮಿಯ ಮೂಲಕವೇ ತಮಗೆ ತಿಳಿಯಬೇಕು. ಆದ್ದರಿಂದ ಧರ್ಮಸಭೆಯನ್ನೇ ಗುರುಗಳಲ್ಲಿ ಕಾಣುವ ಜನ ಹೀಗೆಂದು ಹಾಡಿದ್ದಾರೆ:

ಗುರುಸ್ವಾಮಿ ಬತ್ತಾರೆಂದು ಗುಡಿಗೆ ಸುಣ್ಣವ ಊದೆ
ಗುರುಸ್ವಾಮಿಯಿಮದ ತಿರುಸಭೆ ಬತ್ತಾರೆಂದು
ಗುಡಿಗೆ ಚಿತ್ತಾರ ಬರೆದೀನಿ॥ (ತಲ್ವಾಡಿ: 1983:59)

"ಗುಡಿ" (Church) ಎಚಿದರೆ ಕ್ರೈಸ್ತರಿಗೆ ಜೀವಚಿತ ದೇವರನ್ನು ಕಾಣುವ ಸ್ಥಳ. "ಯೇಸು" ವನ್ನು ಪ್ರತಿನಿಧಿಸುವ ಗುರುಗಳು ಬಂದರೆ ಅಲಯವನ್ನು ಅಲಂಕರಿಸುವ ಹ್ರೆಣೆಯನ್ನು ಹೊತ್ತಿರುತ್ತಾರೆ. ಕೂಡಲೂರಿನಲ್ಲಿ, ಅಲ್ಲಿನ ವಿಚಾರಣೆ ಗುರುಗಳ ಹಬ್ಬದಂದು ಹಾಡಿದ ಹಾಡೊಂದರಲ್ಲಿ "ಮೃತ್ಯುಂಜಯ ಹೊಂದಿದಂತ ಸಂದ್ಯಾಗಪ್ಪರೆ" ಎಂದು ಹಾಡಿದ್ದಾರೆ. ಇಲ್ಲಿ ಗುರುಗಳ ಮೇಲಿನ ಭಕ್ತಿ ಎಲ್ಲೆಮೀರಿ "ಮೃತ್ಯುಂಜಯ" ಪದವನ್ನು ಬಳಸಿದ್ದಾರೆ. ಮೃತ್ಯುಂಜಯರಾದವರು ಯೇಸುಕ್ರಿಸ್ತರೊಬ್ಬರೇ ಆಗಿರುವ್ಯದರಿಂದ ಇದು ಅತಿರೇಕವೇ ಆಗಿದೆ.

ಯೇಸುವಿನ ತಂದೆ ಸಂತ ಜೋಸೆಫರನ್ನು ಪ್ರತಿಯೊಂದು ಕುಟುಂಬದ ಯಜಮಾನರಾಗಿ ಮೈಸೂರಿನ ಕ್ರೈಸ್ತರು ಅಂಗೀಕರಿಸಿದ್ದಾರೆ. ಅಲ್ಲದೆ ಆತ ಬಡಗಿಯಾದ್ದರಿಂದ "ಕೆಲಸಗಾರರ" ಎಂದು ಪ್ರಾರ್ಥಿಸುವುದುಂಟು. ಮೇ 1ನೇ ತಾರೀಖು ಕಾರ್ಮಿಕರ ದಿನಾಚರಣೆಯಂದು ಮೈಸೂರು ನಗರದಲ್ಲಿ ಸಂತ ಜೋಸೆಫರ ಹಬ್ಬವನ್ನು ಆಚರಿಸುತ್ತಾರೆ. ಜಗದ್ರಕ್ಷಕನ ತಂದೆಯಾದ್ದರಿಂದ ಅವರ ಮಗನಂತೆಯೇ ತಮ್ಮ ಮಕ್ಕಳನ್ನೂ ಪೋಷಿಸಲಿ ಎಂದು ಹೀಗೆ ಹಾಡುತ್ತಾರೆ:

ಬಾಲರ ಹಿಡಕಂದು ಲೋಲಾಗಿ ನಿಂತಿರ
ಬಡಗಿ ಜೋಸೆಫರು ಬೆಡಗಿನ ಮಠದಲ್ಲಿ

ಬಡವರ ಪಾಲಕ ಬಡಗಿಯ ಜೋಸೆಫರ
ಕೈಯೆತ್ತಿ ಮುಗಿದೇವು ಹಣ್ಣುಕಾಯಿ ಹೊಡೆದೇವು
ಚಂದದ ಜೋಸೆಫರ ಹರಕೆಯ ಒಪ್ಪಿಸುವ
ಮಕ್ಕಳ ಹರಸೀರಿ ಪಾಲನೆ ಮಾಡಿರಿ.

ಈ ಹಾಡಿನಲ್ಲಿ "ಹಣ್ಣುಕಾಯಿ ಹೊಡೆದೇವು" ಎಂಬ ಪದಗಳನ್ನು ಬಳಸಿದ್ದಾರೆ. ಹಿಂದೆ ಇಂಥವೆಲ್ಲ ನಿಷಿದ್ದ ಎಂಬುದು ಧರ್ಮಸಭೆಯ ಕಟ್ಟಳೆಯಾಗಿತ್ತು. ಆದರೆ ಈಗ ಮರಿಯಮ್ಮನವರಿಗೆ ಕಾಯಿಹೊಡೆದು ಅದರಲ್ಲಿ ದೀಪ ಹಚ್ಚುವ ರೂಢಿಯಲ್ಲಿರುವುದನ್ನು ಕಾಣಬಹುದು.

ಮೈಸೂರು ಜಿಲ್ಲೆಯಲ್ಲಿ ನಡೆಯುತ್ತಿರುವ ಪ್ರಸಿದ್ಧವಾದ ಜಾತ್ರೆಯೆಂದರೆ ಡೋರ್ನಹಳ್ಳಿಯ ಸಂತ ಅಂತೋಣಿಯವರ ಹಬ್ಬದ ಜಾತ್ರೆ. ಇದು ಅಂಗಡಿ ಮುಂಗಟ್ಟುಗಳು, ಮನೋರಂಜನಾ ಕಾರ್ಯಕ್ರಮಗಳು ಹರಕೆ, ತೇರು, ಮೆರವಣಿಗೆ ಇತ್ಯಾದಿಗಳನ್ನೊಳಗೊಂಡ ಬೃಹತ್ ಜಾತ್ರೆಯಾಗಿದೆ. ಏಷ್ಟೇ ಸಂಭ್ರಮಗಳಿದ್ದರೂ ಜನರು ಸಂತರಿಂದ ಬಯಸುವುದು ಅಧ್ಯಾತ್ಮಿಕತೆಯನ್ನೇ ಎಂಬುದು ಈ ಹಾಡಿನಲ್ಲಿ ವ್ಯಕ್ತವಾಗುತ್ತದೆ.

ಗುಡಿಯ ಕಟ್ಟಿಸಿ ಸ್ವಾಮಿ
ಗುಡಿಯ ಕಟ್ಟಿಸಿ
ಗುಡಿಯ ಒಳಗೆ ಅಂತೋಣರು
ಪೂಜೆಗೊಂಡಾರೆ
ಗುಡಿಯ ಒಳಗೆ ಜೇಸುನಾಥರು
ಪೂಜೆಗೊಂಡಾರೆ
ಯಾರು ಬಂದವರೆ ಸ್ವಾಮಿ
ಯಾರು ಬಂದವರೆ
ಏನು ತಂದವರೆ ಸ್ವಾಮಿ
ಏನು ತಂದವರೆ
ಶಿಲುಬೆ ಗುರುತು ಜಪದಮಾಲೆ ತಂದವರೆ

ಸಂತರು ತರುವುದು ಶಿಲುಬೆಗುರುತು, ಜಪದಮಾಲೆ ಮಾತ್ರವಾದರೂ, ಭಕ್ತರು ಅವರ ಮೇಲಿನ ಭಕ್ತಿಯಿಂದ ಹಾಡಿ, ಹರಸಿ ತಮಗೆ ಬೇಕಾದ್ದನ್ನೆಲ್ಲಾ ಪಡೆಯಬಹುದು ಎಂಬ ನಂಬಿಕೆಯನ್ನು ಹೊಂದಿದ್ದಾರೆ. ಭಕ್ತಿಗೀತೆಗಳು, ಸ್ತುತಿಗೀತೆಗಳು ಮಾತ್ರವಲ್ಲ ಇತರ ಸಾಮಾಜಿಕ ಅಂಶಗಳನ್ನುಳ್ಳ ಹಾಡುಗಳೂ ಮೈಸೂರು ಜಿಲ್ಲೆಯ ಕ್ರೈಸ್ತರಲ್ಲಿವೆ. ಕುಟುಂಬ ಎಂದಮೇಲೆ ಅತ್ತೆಸೊಸೆ, ಅತ್ತಿಗೆ– ನಾದಿನಿಯರ ವೈಮನಸ್ಯಗಳು ಸಹಜವೇ ಆಗಿರುತ್ತವೆ. ಮುನಿಸಿಕೊಂಡ ನಾದಿನಿಯನ್ನು ಸಮಾಧಾನ ಪಡಿಸುವ ಈ ಹಾಡು ಕೂಡಲೂರು, ನಾಗನಹಳ್ಳಿ, ಡೋರ್ನಹಳ್ಳಿಗಳಲ್ಲಿ ಪ್ರಚಲಿತವಾಗಿದೆ.

ನಾದಿನಿಯೇ ನಾದಿನಿಯೇ ಸಣ್ಣ ಸೂಜಿ ಮುಡಿಯೋಳೆ
ಯಾರಿಂದ ಬಂತೇ ಕದನವು
ಬಾ ನನ್ನ ನಾದಿನಿಯೇ

ಹಳ್ಳವ ಇಳಿಲಾರೆ ದಿಬ್ಬಾವ ಹತ್ಲಾರೆ
ಮೂರಾಣಿ ಸೀರೆ ಉಡ್ಲಾರೆ
ಎರಡಾಣಿ ರವಿಕೆ ತೊಡ್ಲಾರೆ

ಸೀರೆಯ ಉಡ್ಸವ್ನೆ ಮಲ್ಲಿಗೆ ಮುಡ್ಸವ್ನೆ
ಬಾರೆ ಹೆಣ್ಣೆ ತವರೀಗೆ
ಬಾ ನನ್ನ ನಾದಿನಿಯೇ

ಕುಂಟು ನೆಪಹೇಳಿ ಮುನಿಸಿಕೊಂಡು ಬಂದ ನಾದಿನಿಯನ್ನು ಅತ್ತಿಗೆ ಉಪಾಯವಾಗಿ ಸಮಾಧಾನಗೊಳಿಸಿರುವುದು ಕಂಡು ಬರುತ್ತದೆ. "ಮೂರಾಣಿ ಸೀರೆ, ಎರಡಾಣಿ ರವಿಕೆ" ಎಂದು ದೂರಿತ್ತರೂ "ಸೀರೆ ಉಡ್ಸವ್ನೆ, ಮಲ್ಲಿಗೆ ಮುಡ್ಸವ್ನೆ" ಎಂಬ ಸಮಾಧಾನದ ಮಾತುಗಳನ್ನು ಹೇಳಿದ್ದಾಳೆ ಅತ್ತಿಗೆ. ನೊಂದು ತವರಿಗೆ ಬಂದ ಹೆಣ್ಣನ್ನು ತವರಿನವರು ಚುಚ್ಚುಮಾತುಗಳನ್ನಾಡಿ ಮತ್ತೂ ನೋಯಿಸಬಾರದು. ಇಷ್ಟಾದರೂ ಅತ್ತಿಗೆಗೆ ನಿಂದನೆ ತಪ್ಪಿದ್ದಲ್ಲ. ಅದಕ್ಕಾಗಿ ಅತ್ತಿಗೆ ಉಪಾಯವಾಗಿಯೇ ನಾದಿನಿಗೆ ಹಿತವಚನಗಳನ್ನು ಹೇಳಿದ್ದಾಳೆ. ಒಮ್ಮೆ ಮದುವೆ ಮಾಡಿಬಿಟ್ಟರೆ, ಗಂಡನ ಮನೆಯೇ ಅವಳಿಗೆ ಶ್ರೇಯಸ್ಸು ಎಂಬ ಅಂಶ ಈ ಹಾಡಿನಲ್ಲಿ ವ್ಯಕ್ತವಾಗುತ್ತದೆ.

ಮೈಸೂರು ಜಿಲ್ಲೆಯ ಕ್ರೈಸ್ತರಲ್ಲಿ ಹಾಸ್ಯದ ಹಾಡುಗಳು ಇಲ್ಲವೆಂದಲ್ಲ ಹಾಡು ಪ್ರಾಸಬದ್ಧವಾಗಿದ್ದು ಇತರರನ್ನು ನಕ್ಕು ನಗಿಸುವಂತಹದ್ದಾಗಿದೆ. ತಮಗೆ ತೋಚಿದಂತೆ "ಪ್ರಾಸ"ವನ್ನೊಳಗೊಂಡಂತೆ ಒಬ್ಬೊಬ್ಬರು ಒಂದೊಂದು ಸಾಲನ್ನು ಹಾಡಿ ಹಾಡನ್ನು ಬೆಳೆಸುತ್ತಾರೆ.

ನಾನು ಬತ್ತೀನಿ ಜಾತ್ರೆಗೆ ಕ್ಯಾತಲಿಂಗನ ತೇರಿಗೆ
ಹುಳ್ಳೀಯ ಹುರ್ಕಂಡು ಕುಳ್ಳಿಯ ಕರ್ಕಂಡು
ಉಚ್ಚೆಳ್ಳು ಹೊತ್ಕೊಂಡಿ ಹುಚ್ಚೀಯ ಕರ್ಕಂಡು
ಕಾಳುರ್ಕಂಡ್ ಕಾಳಿಯ ಕರ್ಕಂಡು
ಒಂಟೆ ಒಡ್ಕಂಡು ಕುಂಟಿಯ ಕರ್ಕಂಡು
ಕುದ್ರಿ ಒಡ್ಕಂಡು ರುದ್ರಿ ಕರ್ಕಂಡು
ಚಡ್ಡಿ ಇಕ್ಕಂಡು ಗಿಡ್ಡಿ ಕರ್ಕಂಡು
ಪಂಚೆ ಉಟ್ಕೆಂಡ ಕೆಂಚಿ ಕರ್ಕಂಡು
ಹಂಡೆ ಹೊತ್ಕೊಂಡು ಗೆಂಡೆ ಕರ್ಕಂಡು

ಪ್ಯಾಂಟ್ ಇಕ್ಕಂಡ್ ಪೆದ್ದಿ ಕರ‍್ಕಂಡು
ಗೋಧಿ ಹೊತ್ಕಂಡು ಗಾದಿ ಕರ‍್ಕಂಡು

ಈ ಹಾಡಿನಲ್ಲಿ ಪ್ರಾಸಕ್ಕೆ ಅಗ್ರಸ್ಥಾನ. ಆದರೂ ಹುರುಳಿ, ಉಚ್ಚೆಳ್ಳು, ಕಾಳುಗಳು ಇವರ ದಿನನಿತ್ಯದ ಆಹಾರ ಪದಾರ್ಥಗಳಾದರೆ ಚಡ್ಡಿ, ಪಂಚೆ, ಪ್ಯಾಂಟು ಇತ್ಯಾದಿ ಇವರ ದಿನನಿತ್ಯದ ಸರಳ ಉಡುಗೆಗಳು ಎಂಬುದನ್ನು ದೃಢೀಕರಿಸುತ್ತವೆ. ಮೈಸೂರು ಜಿಲ್ಲೆಯ ಕ್ರೈಸ್ತರಲ್ಲಿ ಧಾರೆ ಹಾಡುಗಳೂ, ಸೋಬಾನೆ ಪದಗಳು ರೂಢಿಯಲ್ಲಿವೆ.

ಚಪ್ಪರದಟ್ಟೇಲಿ ಹೊಕ್ಕಿ ಬೀಸೋ ಗಾಳಿ
ಇನ್ನೊಂದರೆಗಳಿಗೆ ತಡಿತಡಿ ಉಪದೇಶಪ್ಪ
ಮುತ್ತಿನ ಪುಸ್ತಕ ಹಿಡಕಂಡು
ಮುತ್ತಿನ ಪುಸ್ತಕ ಹಿಡಕಂಡುಪದೇಶಪ್ಪ
ಪುತ್ರಿಗೆ ಧಾರೆ ಎರದಾರೆ.

ಮೈಸೂರು ಜಿಲ್ಲೆಯ ಕನ್ನಡ ಕ್ರೈಸ್ತರಲ್ಲಿ ಮದುವೆ ಸಂದರ್ಭದಲ್ಲಿ ಧಾರೆ ಎರೆಯುವಿಕೆ ರೂಢಿಯಲ್ಲಿದೆ. ಪ್ರಜೆಯ ವೇಳೆಯಲ್ಲಿ ತಾಳಿ ಕಟ್ಟಿಸುವ ಸಂಸ್ಕಾರ ಮುಗಿದ ತರುವಾಯ ಮನೆಯ ಮುಂದೆ "ಚಪ್ಪರದಟ್ಟೇಲಿ" ಧಾರೆ ಎರೆದುಕೊಡುವ ರೂಢಿಯಿದೆ. ಧಾರೆ ಎರೆಯುವಾಗ ಮುಖ್ಯಪಾತ್ರ ಉಪದೇಶಿಯದು. ಉಪದೇಶಪ್ಪ ಸಂಸ್ಕೃತದಲ್ಲೇ ಪ್ರಾರ್ಥನೆ ಮಾಡುತ್ತಾರೆ.

"ಪಿತಾಶ್ಚ, ಸುತಾಶ್ಚ, ಸ್ಪಿರಿತು ಸಾಂಕ್ತುಶ್ಚ ಸ್ವಾಮೀ ಆಮೆನ್" ಎಂಬುದು ಹೇಳುವ ರೀತಿ. ಆದರೆ ಅದನ್ನು ಉಪದೇಶಪ್ಪ ಹೇಳುವ ರೀತಿ ಹೀಗಿದೆ: "ಪಿತನಾಂ ಸುತನಾಂ ಪವಿತ್ರಾತ್ಮಾನಾಂ ಆಮೆನ್". ಹಿಂದುಗಳ ಮದುವೆಯಲ್ಲಿ ಸಂಸ್ಕೃತ ಶ್ಲೋಕಗಳನ್ನು ಹೇಳುವ ಪದ್ಧತಿ ಇದೆ. ಮತ್ತೊಂದು ಧರ್ಮಕ್ಕೆ ಮನಸೋತು ಎಷ್ಟೇ ಒಗ್ಗಿ ಹೋದರೂ, ತಮ್ಮ ಹಿಂದಿನ ಧರ್ಮದ ವಾಸನೆಯು ಬಿಟ್ಟು ಹೋಗುವುದಿಲ್ಲವಾದ್ದರಿಂದ ಸಂಸ್ಕೃತದಲ್ಲೇ ಕ್ರೈಸ್ತರು ಪ್ರಾರ್ಥನೆಗಳನ್ನು ಹೇಳಿ ತೃಪ್ತಿಪಟ್ಟುಕೊಳ್ಳುತ್ತಾರೆ.

ಸೋಬಾನೆ ಪದಗಳು ಹಾಸ್ಯಭರಿತವಾದವುಗಳಾಗಿರುತ್ತವೆ. ಮದುವೆಯ ಓಡಾಟದಲ್ಲಿ ಬಳಲಿದ ನೆಂಟರಿಷ್ಟರನ್ನು ನಗುವಂತೆ ಮಾಡಿ ಆಚಿಯಾಸವನ್ನು ಮರೆಯುವಂತೆ ಮಾಡುತ್ತವೆ:

'ಒಳ್ಳೊಳ್ಳೇವ್ರ್ ಬನ್ನಿ ಕರಿಯಕ್ಕೆ ಅಚಿದ್ರೆ
ಬಂದವ್ರೆ ಮೂರಾಳು ಮುದ್ಕೀರು ಸೋಬಾನವೇ'

"ಒಳ್ಳೇವ್ರ್" ಅಂದ್ರೆ ಒಡವೆ, ವಸ್ತ್ರತೊಟ್ಟು ನೋಡಲು ಚೆನ್ನಾಗಿರುವ ಮುತ್ತೈದೆಯರು ಬನ್ನಿ ಎಂಬುದು ಕರೆಯುವವರ ಉದ್ದೇಶವಾಗಿದ್ದರೆ "ಒಳ್ಳೆಯತನ" ಎಂದು ಭಾವಿಸಿ ಬಂದವರು ವೃದ್ಧೆಯರಾಗಿದ್ದರಂತೆ.

ಸೋಬಾನದ ದಿನ ಮಾಸದೂಟ ಬಡಿಸುವ ಪದ್ಧತಿ ಈ ಎರಡು ಸಾಲುಗಳಲ್ಲಿ ಹೀಗೆ ವ್ಯಕ್ತವಾಗಿದೆ:

"ಹಂದಿ ಕೂದಾರೆ ದುಂಡ ನನಗಿಕ್ಯಾಳು

ಕೋಳಿ ಕೂದಾರೆ ಕೊಕ್ಕ ನನಗಿಕ್ಯಾಳು"

ಅಡುಗೆ ಮನೆಯಲ್ಲಿ "ಕೊಳ್ಳಿಬೆಳಕಲ್ಲಿ" ಒಳ್ಳೋಳ್ಳೇದನ್ನು ತಿಂದುಬಿಡುತ್ತಾರೆ ಎಂದು ಅಡುಗೆಮಾಡಿ ಬಡಿಸಿದವರನ್ನು ಹಾಸ್ಯಮಾಡುತ್ತಾ

ಒಳ್ಳೊಳ್ಳೆ ಖಂಡ ವಳಗಿರ್ಸಿ ಸೋಬಾನವೇ
ಕೊಳ್ಳಿ ಬೆಳಕಲ್ಲಿ ಜಡಿದ್ಯಾಳು ಸೋಬಾನವೇ
ಸೋಬಾನದಿಂದ ಸುಖದಿಂದ ಸೋಬಾನವೇ

ಮೈಸೂರು ಜಿಲ್ಲೆಯ ಕನ್ನಡ ಜನಪದ ಸಾಹಿತ್ಯ ಹಿಂದೂಗಳಲ್ಲಿ ಬೆಳೆದಿರುವಷ್ಟು ಪ್ರಮಾಣದಲ್ಲಿ ಕ್ರೈಸ್ತರಲ್ಲಿ ಇಲ್ಲದಿದ್ದರೂ ಎಲ್ಲಾ ಮಹತ್ವದ ಸಚಿದರ್ಭದಲ್ಲೂ ಜನಪದ ಹಾಡುಗಳು ಕಂಡು ಬರುತ್ತವೆ:

ಮೈಸೂರು ಜಿಲ್ಲೆಯಲ್ಲಿ ನೆಲಸಿರುವ ಕನ್ನಡ ಕ್ರೈಸ್ತರ ಮೂಲವೇ ಮೈಸೂರಾಗಿರುವುದರಿಂದ ಇಲ್ಲಿನ ಜನಪದಗೀತೆಗಳು ಹಿಂದಿನಿಂದಲೂ ವಾಕ್ಪರಂಪರೆಯಲ್ಲಿ ಉಳಿದು ಬಂದವಾಗಿದ್ದವು, ಅವುಗಳಲ್ಲಿ ಕೆಲವು ಬದಲಾವಣೆಗಳನ್ನು ಗುರುತಿಸಬಹುದಾಗಿದೆ.

"ಇದನ್ನು ಕ್ರೈಸ್ತಗಾಯಕರು ಬಹಳ ಬುದ್ಧಿವಂತಿಕೆಯಿಂದ ಬದಲಾಯಿಸಿದ್ದರೂ ಅದರ ಅರ್ಥವನ್ನು ಅಂತೆಯೇ ಉಳಿಸಿಕೊಂಡಿದ್ದಾರೆ. ಆದರೂ ಒಂದು ಮತದಿಂದ ಬೇರೊಂದು ಮತದ ಹಾಡಾಗಿರುವುದೂ ಉಂಟು" (ತಲ್ವಾಡಿ: 1983:46). ತಮ್ಮ ಹೇಳಿಕೆ ತಲ್ವಾಡಿ ನೀಡಿರುವ ಉದಾಹರಣೆ ಇಂತಿದೆ:

ಮೊದಲು ನೆನೆದೇನು ಮದನಾಗೋವಿಂದನಾ
ಹದಿನೆಂಟು ನಾಮ್ಮದೊಡೆಯನಾ ನೆನೆದರೆ
ಹೊತ್ತಿದ್ದ ಪಾಪ ಪರಿಹಾ॥

ಎಂಬ ಹಿಂದೂಗಳ ನಂಬಿಕೆಯ ಮೇಲೆ ಕ್ರಮೇಣ ಕ್ರೈಸ್ತರ ನಂಬಿಕೆಯ ಪ್ರೇರಣೆಯಿಂದಾಗಿ ಕ್ರೈಸ್ತ ಹೆಣ್ಣುಮಗಳೊಬ್ಬಳು ಹೀಗೆ ಹಾಡುತ್ತಾಳೆ.

ಮೊದಲು ನೆನವೇನು ಬುದ್ದಳ್ಳ ಒಡೆಯನಾ
ಏದ್ದೇಳು ಲೋಕ ಸಲಗವರ ಏಸು ತಂದೆ
ಮೊದಲಾಗಿ ನಿಮ್ಮ ನೆನೆದೇನು॥

"ಈ ತ್ರಿಪದಿಯು ಹಿಂದೂಗಳಿಂದ ರಚಿತವಾಗಿದ್ದು ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ಕ್ರೈಸ್ತರದಾಗಿದೆ ಎನಿಸುತ್ತದೆ. ಹಿಂದೂ ಗೀತೆಗಳು ಇಲ್ಲಿ ಶಿಲುಬೆಯೊಂದನ್ನು ಧರಿಸಿ ಹೊಸದಾಗಿ ಮತಾಂತರಗೊಂಡಿವೆ ಅಷ್ಟೆ" (ಸಿ.ಪಿ.ಕೆ. 1983: ) ಈ ಸಂಬಂಧದ ಇನ್ನೂ ಕೆಲವು ಅಭಿಪ್ರಾಯಗಳು ಕೆಳಗಿನಂತಿವೆ:

ಹಿಂದೂ ದೇವ-ದೇವತೆಗಳಿಗೆ ಸಂಬಂಧಿಸಿದ ಹಾಡುಗಳಲ್ಲಿ ಪ್ರಾಸಂಗಿಕವಾಗಿ ಕ್ರೈಸ್ತ ಹೆಸರುಗಳನ್ನು ಸೇರಿಸಿ ಬದಲಿಸಿರುವುದರಿಂದ ಹಾಡುಗಳನ್ನು ಮತಾಂತರಗೊಳಿಸಿದಂತಾಗಿದೆ" (ಜ್ಯೋತಿ ಹೊಸೂರು 1989:64)

"ಜನಪದ ನಂಬಿಕೆಗಳ ಮಟ್ಟಿಗೆ ಅದಕ್ಕೆ ಕ್ರೈಸ್ತ ಎಂಬ ವಿಶೇಷಣವನ್ನು ಜೋಡಿಸಿದರೆ ಅನ್ಯಾಯವಾದೀತು" (ಸಿ.ಪಿ.ಎ.ಪೈ 1989:67). ಆದರೆ ಇಂತಹ ಹಲವಾರು ವಿಶೇಷಣಗಳು ಮೈಸೂರು ಜಿಲ್ಲೆಯ ಕ್ರೈಸ್ತರ ಸಾಹಿತ್ಯದಲ್ಲಿ ಕಂಡುಬರುವುದು ಅನಿವಾರ್ಯ. "ಇದು ಕಸಿಯಿಂದ ಬೆಳೆಯುವ ಸಾಹಿತ್ಯವಾಗಿದೆ" ಎಂಬ ಸಮಾಧಾನದ ಮಾತಾಡಿ ಕ್ರೈಸ್ತ ಜನಪದ ಸಾಹಿತ್ಯವನ್ನು ಸಿ.ಪಿ.ಕೆ. ಅವರು ಮೆಚ್ಚಿಕೊಂಡಿದ್ದಾರೆ. "ಅದೇನೆ ಇರಲಿ ಕ್ರೈಸ್ತ ಜನಪದ ಗೀತೆಗಳಲ್ಲಿ ಕಾವೇರಿ-ಥೇಮ್ಸ್‌ಗಳ ಮಿಲನವಿದೆ ಎನ್ನುವುದು ಸೋಜಿಗದ ಸಂಗತಿ. ಜನಪದ ಸಾಹಿತ್ಯ ಹೇಗೆ ಬೆಳೆಯುತ್ತದೆ ಎಂಬುದರ ಮೇಲೂ ಇದು ಬೆಳಕು ಚೆಲ್ಲುತ್ತದೆ". (ಸಿ.ಪಿ.ಕೆ. 1989: )

ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಡೋರ್ನಹಳ್ಳಿಯಲ್ಲಿ ನಾಟಿ ಹಾಕುತ್ತಿದ್ದ ಮಹಿಳೆಯೊಬ್ಬರು ಕೆಳಗಿನ ಜನಪದ ಗೀತೆಯನ್ನು ಹಾಡಿದ್ದಾರೆ.

ಚೆಲ್ಲಿದರು ಮಲ್ಲಿಗೆಯಾ
ಬಾಣಾಸುರೇರಿ ಮೇಲೆ
ಅಂದದ ಚಂದದ ಮಾಯ್ಕಾರ ಮಾತೆಗೆ
ಚೆಲ್ಲಿದರು ಮಲ್ಲಿಗೆಯಾ

ಮಾತೆಯು ಬರುವಾಗ
ಗುಡಿಯೆಲ್ಲಾ ಘಮ್ಮೆಂದೋ
ಗುಡಿಯ ಗಂಟೆ ಢಾಣೆರೆಂದೋ (ಚೆಲ್ಲಿದರು)

ಮಾತೆಯು ಬರುವಾಗ
ಮಾಳೆಲ್ಲ ಘಮ್ಮೆಂದೋ
ಮಾಳದ ಗರುಕೆ ಚಿಗುರ್ಯಾವೋ (ಚೆಲ್ಲಿದರು)

ಹೀಗೆ ಹಾಡು ಮುಂದುವರೆದಿತ್ತು. ಇಲ್ಲಿ 'ಮಾಯ್ಕಾರ ಮಾದೇವ್ಗೆ" ಎಂಬುದು "ಮಾತೆಗೆ" ಆಗಿ ಬಿಟ್ಟಿದೆ. ಇಂತಹ ಬದಲಾವಣೆಗಳು ಹಳ್ಳಿಗರ ಹಾಡುಗಳಲ್ಲಿ ಕಂಡು ಬರುವುದು ಅನಿವಾರ್ಯ. ಇಂತಹ ಜಾನಪದ ಬಗೆಗೆ ಹಿರಿಯಣ್ಣನವರು "ಕೃತಕ ಹಾಗೂ ಹುಟ್ಟಿಸಿ ಹೇಳಿದಂತಹ 'ಖೋಟಾ' ಸಾಮಾಗ್ರಿಯನ್ನು ಅಕೃತ್ರಿಮ ಜಾನಪದ ಎಂದು ಬಗೆಯಲು ಜನಪದರೇನು ದಡ್ಡರಲ್ಲ" (ಹಿರಿಯಣ್ಣ:1986:30) ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದುಂಟು. ಆದರೆ ಕೆಲವು ಸಮರ್ಥನೆಗಳನ್ನು ನೀಡಿದ ತರುವಾಯ "ಖೋಟಾ ಜಾನಪದ ಹುಟ್ಟಿಸಿ ಹೇಳಿದ್ದು, ಅಶುದ್ಧ ಅನೈತಿಕ ಸೃಷ್ಟಿಯೆಂದು ನಿರಾಕರಿಸುವ ಬದಲು ಜಾನಪದ ಅಧ್ಯಯನದ ಸಮರ್ಪಕ ವಿಧಾನಗಳನ್ನು ಅಳವಡಿಸಿಕೊಂಡು ಅಭ್ಯಸಿಸುವುದು ಯುಕ್ತ" (ಅದೇ ಪುಟ 31) ಎಂಬ ಅವರ ಹೇಳಿಗೆ ಕ್ರೈಸ್ತ ಜನಪದ ಗೀತೆಗಳ ಅಧ್ಯಯನಕ್ಕೆ ಒತ್ತಾಸೆಯನ್ನು ನೀಡುತ್ತದೆ.

ಮೈಸೂರು ಜಿಲ್ಲೆಯಲ್ಲಿ ತಮಿಳು ಮತ್ತು ಕೊಂಕಣಿ ಕ್ರೈಸ್ತರು ಸಂಖ್ಯೆಯಲ್ಲಿ ಕಡಿಮೆ ಇದ್ದರೂ ಅವರಲ್ಲಿ ಜನಪದ ಗೀತೆಗಳು ಪ್ರಚಲಿತವಿವೆ. ಕೊಳ್ಳೆಗಾಲದ ಮಾರ್ಟಳ್ಳಿಯಲ್ಲಿ ನೆಲಸಿರುವ ತಮಿಳು ಕ್ರೈಸ್ತರಲ್ಲಿ ರೂಢಿಯಲ್ಲಿರುವ ಹಾಡಿನಲ್ಲಿ ಸಮಾಜದಲ್ಲಿ ಹೇಗಿದ್ದರೆ ಜನ ಒಪ್ಪುತ್ತಾರೆ, ಗೌರವಿಸುತ್ತಾರೆ ಎಂಬ ಭಾವ ವ್ಯಕ್ತವಾಗಿದೆ:

> ನೀಲಕಸ್ತೂರಿ ಎಂಗಳುಡೆ ಮಾಲೆಯಿಲೇ
> ನೇರಕಂಡು ಪೂತ್ತಿರುಂದಾ
> ನಿನ್ನಾ ಮದಿಪ್ಪಾಂಗ ನ್ಬೆರಂ ಕಂಡು ತೇಡುವಾಂಗ
> ನೀಲ ಕಸ್ತೂರಿ ಎಂಗಳುಡೆ ಮಾಲೆಯಿಲೆ
> ನೇರಂಕಂಡು ಪೂಕ್ಕಾಮೇ
> ನಿನ್ನಾ ಮದಿಕ್ಕಲಿಯೇ ನೇರಂಕಂಡು ತೇರಲಿಯೆ

ಇತರರಂತೆ ತಾವೂ ಒಡವೆ-ವಸ್ತ್ರಗಳನ್ನು ಧರಿಸಿ ಸೊಗಸುಗಾರಿಕೆಯನ್ನು ಮೆರೆದರೆ ಇತರರ ಮನೆಗೆ ಹೋದಾಗ ಗೌರವವಿರುತ್ತದೆ. ಎಲ್ಲಾ ಸಮಾಜಗಳಲ್ಲೂ ಇಚಿತಹ ಭೇದಭಾವಗಳು ಕಂಡು ಬರುವುದು ಸಾಮಾನ್ಯ. ಈ ವರ್ಗಭೇದವನ್ನು ಹೋಗಲಾಡಿಸುವುದು ಅಷ್ಟೇನೂ ಸುಲಭವಲ್ಲ. ಮೈಸೂರಿನ ಕ್ರೈಸ್ತ ಸಮಾಜದಲ್ಲೂ ವರ್ಗಭೇದ ಇರುವುದನ್ನು ಈ ಹಾಡಿನಲ್ಲಿ ಗುರ್ತಿಸಬಹುದಾಗಿದೆ.

ಮಕ್ಕಳಾಗಲೆಂದು ಹಂಬಲಿಸುವುದು, ಹರಕೆ ಹೊರುವುದು, ಹಡೆಯದ ಹೆಣ್ಣಿನ ಸಾಮಾನ್ಯ ಗುಣಗಳು. ಎಷ್ಟೇ ಹರಕೆ ಹೊತ್ತರೂ ಕೆಲವು ಸಲ ಫಲಕಾರಿಯಾಗುವುದಿಲ್ಲ. ಆಗ ಬೇಸತ್ತು ಹಾಡಿದ ಹಾಡು ಹೀಗಿದೆ:

> ಕೊಳಚಿದ್ಯೆ ಕೊಳಚಿದ್ಯೆ ಎನು
> ಕೊಳ್ಳಿಮಲ್ಯೆ ಪೋಯ್ ಸೇಂದರ್ೇನ್
> ಕೊಳ್ಳಿಮಲ್ಯೆ ವರಂ ತಾರಾಮೇ
> ಬೊಮ್ಮೈವರಂ ತಂದಾನಮ್ಮ
> ಬೊಮ್ಮೈ ಪೇಸುಮಾಮ್ಮ
> ಕೊಳಚಿದ್ಯೆ ವರಂ ತೀರುಮಾಮ್ಮ?

ಮಕ್ಕಳವರ ಬೇಡಿದರೆ ಸನ್ಯಾಸಿ ಗೊಂಬೆಯ ವರ ನೀಡಿದ. ಗೊಂಬೆಗಳು ಎಷ್ಟಿದ್ದರೂ ಮಕ್ಕಳ ಬಯಕೆ ತೀರುತ್ತದೆಯೆ? ಎಂಬುದು ಮೇಲಿನ ಹಾಡಿನ ಭಾವಾರ್ಥ.

ಮಾರ್ಟಳ್ಳಿಯ ತಮಿಳು ಕ್ರೈಸ್ತರಲ್ಲಿ ಶವಸಂಸ್ಕಾರ ಸಚಿದರ್ಭದಲ್ಲಿ ಶೋಕಗೀತೆಗಳನ್ನು ಹಾಡುವ ರೂಢಿಯಿದೆ. ತಂದೆ, ತಾಯಿ, ಮಕ್ಕಳು ಅಣ್ಣತಂಗಿಯರು ತೀರಿಕೊಂಡಾಗ ಅವರ ಗುಣಗಾನ ಮಾಡುತ್ತಾ, ತಮ್ಮ ಅನಿಸಿಕೆಗಳನ್ನು ತಮ್ಮದೇ ಆದ ಮಟ್ಟನಲ್ಲಿ ಹಾಡಿ ಅಳುತ್ತಾ ದುಃಖವನ್ನು ತೋಡಿಕೊಳ್ಳುತ್ತಾರೆ.

ಹೆಣ್ಣು ತವರನ್ನು ತೊರೆದು ಗಂಡನ ಮನೆಯನ್ನು ಸೇರಿದ ಮೇಲೆಯೂ ತನ್ನ ಬಡಹುಟ್ಟಿದವರ ಮೇಲಿನ ಪ್ರೇಮ ಕುಂದುವುದಿಲ್ಲ. ಅಣ್ಣನನ್ನು ಕಳೆದುಕೊಂಡಾಗ ತಂಗಿ ಅಣ್ಣನ ಸಾವಿಗೆ ಬಂದು "ಯಾರ ಬಳಿ ನನ್ನ ಸಂಕಟವನ್ನು ಹೇಳಿಕೊಳ್ಳಲಿ, ನನ್ನ ಸಂಕಟವನ್ನು ಹೇಳಿಕೊಳ್ಳುವಷ್ಟರಲ್ಲಿ ಬೆಳಕು ಹರಿದು ಬಿಡುತ್ತದೆ ಎಚಿದು ಗೋಳಾಡುತ್ತಾ" ಸೂರ್ಯರ್ ಎನ್ ಪೆರಪ್ಪು" ಎಚಿದು ತನ್ನ ಅಣ್ಣನನ್ನು ಪ್ರಖರ ಸೂರ್ಯನಿಗೇ ಹೋಲಿಸಿ ಪ್ರಶಂಸಿಸುತ್ತಾಳೆ.

ತಂಗಿಯನ್ನು ಕಳೆದುಕೊಂಡಾಗ ನನ್ನ ತಂಗಿಯನ್ನು ನೋಡಲು ಬಂದೆ, ರೇಷ್ಮೆಸೀರೆ ಉಟ್ಟವರೇ ನನ್ನ ತಂಗಿಯನ್ನು ಕಂಡಿರಾ? ನನ್ನ ಒಡಹುಟ್ಟನನು ಕಂಡಿರಾ ? ನದಿ ಹರಿಯುವ ಈ ಊರಿನಲ್ಲಿ ಚಿನ್ನದ ನದಿಯನ್ನು ನೋಡಲಿಲ್ಲ. ದುಃಖದ ಮಡುವನ್ನೇ ನೋಡಿದೆ.

ತಂಗಮ್ಮರಂ ಓರತ್ತಿಲೇ ತಂಗಕೊಡಿ ಓಡಿರುಕ್ಕ
ತಂಗ್ಯೆಯೇ ನಾನ್ ಪಾರ್ಕವಚಿದೇನ್
ತಂಗರದಂ ಪರ್ತುವಿಟ್ಟೇನ್

ಇಲ್ಲಿ "ತಂಗರದಂ" ಎಂಬುದು ಶವಪೆಟ್ಟಿಗೆಯನ್ನು ಹೊತ್ತ ಸ್ಮಶಾನಯಾತ್ರೆಯನ್ನು ಕುರಿತು ಹೇಳಿದುದಾಗಿದೆ.

ಗಂಡ ತೀರಿಕೊಂಡಾಗ ವಿಧವೆಗೆ ಮಾಡುವ ಕೆಲವು ಶಾಸ್ತ್ರ ಸಂಪ್ರದಾಯಗಳನ್ನು ಇವರ ಹಾಡುಗಳಲ್ಲಿ ಗುರುತಿಸಬಹುದು. ಮಾರ್ಟಳ್ಳಿಯ ತಮಿಳರಲ್ಲಿ ವಿಧವೆ ರವಿಕೆಯನ್ನು ತೊಡುವುದಿಲ್ಲ. "ಅನ ಅಡಿಕೊಲಿಸು", "ಮಲ್‌ರವಿಕ್ಕೆ ಬಿಚ್ಚುವಾಗ" ಅಂಗ ಪದರದು "ಅಡಿವಯಿರು ಕಾಂದದು" ಎಂದು ಅಂಗಲಾಚುತ್ತಾಳೆ. ಮುತ್ತೈದೆಯ ಸೌಭಾಗ್ಯವನ್ನು ಕಸಿದುಕೊಂಡಾಗ ಮೈ ಕಂಪಿಸುತ್ತದೆ. ಕಿಬ್ಬೊಟ್ಟೆ ಸೀದು ಹೋಗುತ್ತಿದೆ ಎಂದು ಹಾಡುವಲ್ಲಿ ಅವರ ದುಃಖದ ಆಳವು ತಿಳಿದುಬರುತ್ತದೆ.

ಮಕ್ಕಳ ದುಃಖವನ್ನು ಮುಖ ನೋಡಿದ ಮಾತ್ರಕ್ಕೆ ಅರ್ಥ ಮಾಡಿಕೊಳ್ಳುವವಳು ತಾಯಿಯೊಬ್ಬಳೇ. ಅಂಥ ತಾಯಿಯನ್ನು ಕಳೆದುಕೊಂಡಾಗ "ನೀ ಪೆತ್ತ ಪೊಣ್ಣುನಾನ್ ವಾಡಿ, ನಿಕ್ಕ ಪಾರ್ಕಲಾಮಾ? ಎಂದು ತಾಯಿಯನ್ನೇ ಕೇಳುತ್ತಾಳೆ.

ತಮಿಳರು ಈ ಶೋಕಗೀತೆಗಳನ್ನು "ಒಪ್ಪಾರಿ" ಎಂದು ಕರೆಯುತ್ತಾರೆ. ಇಂತಹ ಗೀತೆಗಳು ಸಾವಿನ ಮನೆಯನ್ನು ಮತ್ತೂ ದುಃಖದ ಕಡಲಿನಲ್ಲಿ ಮುಳುಗಿಸುತ್ತದೆ.

ಮೈಸೂರು ಜಿಲ್ಲೆಯಲ್ಲಿ ನೆಲಸಿರುವ ಕೊಂಕಣ ಕ್ರೈಸ್ತರಲ್ಲಿ ಅವರಿಗೇ ವಿಶಿಷ್ಟವಾದ ಸಂಪ್ರದಾಯಗಳ ಹಾಡುಗಳು ರೂಢಿಯಲ್ಲಿವೆ. ಮದುವೆಯಲ್ಲಿ ಹಾಡುವ ಈ ಸಂಪ್ರದಾಯದ ಹಾಡುಗಳಿಗೆ "ವೋವ್ಯೊ" ಎಂಬ ಕರೆಯುತ್ತಾರೆ. ಕಡ್ಡಾಯವಾಗಿ ಹಾಡಲೇಬೇಕಾದ ಈ ಹಾಡುಗಳಲ್ಲಿ ವಧುವಿಗೆ ಬುದ್ಧಿವಾದ ಹೇಳುವುದು, ಆಶೀರ್ವಾದ ಮಾಡುವುದು, ಇತ್ಯಾದಿ ವಿಷಯಗಳು ಕಂಡು ಬರುತ್ತವೆ. ಅಲ್ಲದೆ ಬೀಗದ ಹಾಡುಗಳು, ಹಾಸ್ಯದ ಹಾಡುಗಳಲ್ಲಿಯೂ ಇವರ ಸಂಪ್ರದಾಯಗಳು ಕಂಡುಬರುತ್ತವೆ. ಕೊಂಕಣಿ ಕ್ರೈಸ್ತರಲ್ಲಿ ಸೊಸೆಯ ಕೊರಳಿಗೆ ಕರಿಮಣಿಸರ ಹಾಕುವವಳು ಅತ್ತೆ. ಇದಕ್ಕೆ ಸಂಬಂಧಿಸಿದಂತೆ ಹಾಡುವ ಹಾಡೊಂದು ಹೀಗಿದೆ:

ಅಂವ್ ಪಿಡ್ಡುಕ್ ಬಾಂದ್ತಾಂ

ಕೊಣಿಮ್ಮಣ್ಣಿ ಚಿಂತ್ಸಿ ಘಾಲ್ಯಾಂ
ವೊಳ್ಯಾಸಿ ಮಾಯ್ ಮ್ಹಣಿ ತುಜಿ

ಮದುವೆಗೆ ಮುನ್ನ ಮಂಗಳಸ್ನಾನಕ್ಕೆ ಇವರು "ರೋಸ್" ಎನ್ನುತ್ತಾರೆ. "ರೋಸ್" ಎಂದರೆ ತೆಂಗು. ಕೊಂಕಣಿಕ್ರೈಸ್ತರು ಮಂಗಳೂರು ಮತ್ತು ಗೋವಾ ಪ್ರದೇಶಗಳಿಂದ ವಲಸೆ ಬಂದವರು. ಕರಾವಳಿಯಲ್ಲಿ ತೆಂಗು ಪ್ರಮುಖ ಬೆಳೆ. ಮೈಸೂರಿನ ಇತರ ಕ್ರೈಸ್ತರಲ್ಲಿ "ಅರಿಸಿನ" ಕ್ಕೆ ಇರುವ ಸ್ಥಾನ ಕೊಂಕಣಿ ಕ್ರೈಸ್ತರಲ್ಲಿ ತೆಂಗು ಆಕ್ರಮಿಸಿದೆ. ಇದು ಕರಾವಳಿ ಸಂಪ್ರದಾಯವೇ ಆಗಿದೆ ಎಂಬುದನ್ನು ಈ ಕೆಳಗಿನ ಗೀತೆಯು ನಿರೂಪಿಸುತ್ತದೆ.

ತಂಗೀಯ ಕೊಡಬೇಕು ತೆಂಗಿದ್ದ ರಾಜ್ಯಕ್ಕೆ
ತೆಂಗೀನ ಹಾಲು ಬಿಸಿಹಾಲು ಆದರೆ
ತಂಗೀಯ ಚಿಂತೆ ನಮಗಿಲ್ಲ (ಬಿಳಿಮಲೆ: 1990:15)

ಮಂಗಳಸ್ನಾನಕ್ಕೆ ಕೊಂಕಣಿ ಕ್ರೈಸ್ತರು "ಅರಿಸಿನದ ಬದಲು" ತೆಂಗಿನಹಾಲನ್ನು ಹಚ್ಚುತ್ತಾರೆ. ಆ ಸಂದರ್ಭದಲ್ಲಿ ಹಾಡುವ ಹಾಡು ಹೀಗಿದೆ:

ಕಾನಿ ಘಾಲೆಂ ತೇಲ್ ಕೊ
ಪೊಲಿಂ ಕಾಡೊಬುಲಿಸ್ ವೈಂಕು
ಟಜೋ ಜೆಜುಕ್ರಿಸ್ತ ವೊಕ್ಲೆಕ್
ಬೆಸಾಂವ್ ದೀತ್

ಮದುವೆಯದಿನ ಆರತಕ್ಷತೆ ಹೆಣ್ಣಿಗೆ ಅಲಂಕಾರ ಮಾಡುವಾಗಲೂ ಇಂತಹ ಹಾಡುಗಳನ್ನು ಹಾಡುವ ರೂಢಿ ಇದೆ.

ಪುಲ್ ಬಂಗಾರ್ ಮಾಳ್ನೆ ವೊಕಾಲ್
ಸೊಬಿಲಿ ತಾಳ್ವೆರ್ ಅಬೊಲಿಂ
ಪುಲಾ ಬಾಂಗಾರಾಚಿಂ

ಈ ಹಾಡುಗಳನ್ನು ಸಾಮಾನ್ಯವಾಗಿ ವಯಸ್ಸಾದ ಮಹಿಳೆಯರು ಹಾಡುವುದು ವಾಡಿಕೆ. ಮದುವೆ ಹೆಣ್ಣಿಗೆ ಕನಕಾಂಬರ ಹೂವನ್ನು ಮುಡಿಸುವ ಒಚಿದು ವಿಶಿಷ್ಟ ಪದ್ಧತಿ ಈ ಹಾಡುಗಳಲ್ಲಿ ಉಲ್ಲೇಖಿತವಾಗಿದೆ.

ಮೈಸೂರು ಜಿಲ್ಲೆಯಲ್ಲಿ ನೆಲಸಿರುವ ಕ್ರೈಸ್ತರ ಪೈಕಿ ಕೊಂಕಣಿ ಕ್ರೈಸ್ತರಲ್ಲಿ ಮಾತ್ರ ಲಾವಣಿ ರೂಪದ ಹಾಡುಗಳಿವೆ. ಓಪ್ಪು ಸುಲ್ತಾನನು ಕ್ರೈಸ್ತರನ್ನು ಮಂಗಳೂರಿನಿಂದ ಶ್ರೀರಂಗಪಟ್ಟಣಕ್ಕೆ ಅಟ್ಟಿಸಿಕೊಂಡು ಬಂದಾಗ ಕ್ರೈಸ್ತರು ಪಡಬಾರದ ಪಾಡುಗಳನ್ನು ಪಟ್ಟ ಬಗೆಗೆ, ತಮ್ಮ ಸಂಕಟವನ್ನು ಹಾಡಿನ ಮೂಲಕ ವ್ಯಕ್ತಪಡಿಸಿದ್ದಾರೆ. ಮಂಗಳೂರು

ಪಟ್ಟಣವನ್ನು ಆಳಲು ಪ್ರಾರಂಭಿಸಿದ ಟಿಪ್ಪುವಿನ ಕ್ರೂರ ನಡವಳಿಕೆಯಿಂದಾಗಿ ಕೊಂಕಣ ಕ್ರೈಸ್ತರ ಮೇಲೆ ಪ್ರವಾಹವೇ ಬಂದಂತಾಯಿತು ಎಂದು ಹಾಡುತ್ತಾರೆ:

ತಂತ್ರಿ ಕುಜ್ನೆರ್ ಟಿಪ್ಪು ರಾಯ್ಭೊ
ಬಾಲ್ತು ಜೆಟ್ನಿ ಮೊಳೋ ಕ್ರಿಸ್ತಾಂವ್ ಎಕ್ಲೊ
ಟಿಪ್ಪು ರಾಯಕ್ ಕಾದ್ಯೆರೆ ತಾಣಿ ಘಾಲೋ
ತಾಜೋ ಘುಟ್ ತಾಣಿ ಅಮ್ಮಾ ದಿಲೋ

ಇದು ಸ್ವಾರಸ್ಯಕರವಾದ ಹಾಡಾಗಿದೆ. ಮಂಗಳೂರಿಗೆ ನುಗ್ಗಿದ ಮುಸಲ್ಮಾನರು ಅಲ್ಲಿನ ಕ್ರೈಸ್ತರನ್ನೆಲ್ಲಾ ಶ್ರೀರಂಗಪಟ್ಟಣಕ್ಕೆ ಅಟ್ಟಿಸಿಕೊಂಡು ಬಂದಾಗ ಅವರಲ್ಲಿ "ಬಾಲ್ತು" ಎಂಬ ಒಬ್ಬ ಕ್ರೈಸ್ತನಿದ್ದ. ಆತ ವಿಧವಿಧವಾದ ರುಚಿಯ ಚಟ್ನಿಯನ್ನು ಮಾಡುವವನಾಗಿದ್ದ. ಅವನನ್ನು "ಬಾಲ್ತುಚೆಟ್ನಿ" ಎಚಿದೇ ಕರೆಯುತ್ತಿದ್ದ. ಬಾಲ್ತು ಚೆಟ್ನಿ ಇಂಗ್ಲಿಷರ ಬಗ್ಗೆ ಅಭಿಮಾನ ತಳೆದಿದ್ದ, ಇಂಗ್ಲಿಷ್ ಮುಖಂಡರ ಬಳಿ ಮೊರೆಹೋದ ಕೊಂಕಣಿ ಕ್ರೈಸ್ತರನ್ನು ಅವರು ಭೇದಭಾವವಿಲ್ಲದೆ ಒಂದೇ ರೀತಿಯಲ್ಲಿ ನಡೆಸಿಕೊಂಡದದೇ ಅದಕ್ಕೆ ಕಾರಣ.

ಇವರ ಈ ಹಾಡುಗಳಿ ಒಂದು ಕಾಲದಲ್ಲಿ ಅವರ ಮೇಲೆ ನಡೆಸಿದ ದೌರ್ಜನ್ಯದ ಐತಿಹಾಸಿಕ ಘಟನೆಗಳಿಗೆ ಸಾಕ್ಷಿಯಾಗಿವೆ.

### 7.2.3 ಜನಪದಗೀತೆಗಳಲ್ಲಿ ಸಂಪ್ರದಾಯ ಮತ್ತು ನಂಬಿಕೆ

ಪಾದ ತೊಳಕಂಡು ಮುಂಜೆರಗ ಹೊದಕಂಡು
ಬಾಡೀದ ಮೊಕದಲ್ಲಿ ಈಸೊಂದು ನೋವೆನು
ಕೈಯೆತ್ತಿ ಮುಗಿದೇವು ಹಣ್ಣುಕಾಯಿ ಹೊಡೆದೇವು
ಧಾರೆ ಸಮಯದಲ್ಲಿ ಸಂಸ್ಕೃತದಲ್ಲಿ ಪ್ರಾರ್ಥನೆ ಹೇಳುವುದು ಕಡ್ಡಾಯ
ಕಿತ್ಲೊ ಬೊರೋ ಸ್ಯಾಬಾ ಇಂಗ್ಲೆಜ್ ಸರ್ದಾರ್.
ಸರ್ವೈ ಶತ್ರಾಂಕ್ ಚಲೈತ್ ಎಕ್ವೊಡಾರ್
(ಇಂಗ್ಲೀಷ್ ಸಾಹೇಬರು ಎಷ್ಟು ಒಳ್ಳೆಯವರು, ಭೇದಭಾವವಿಲ್ಲದೆ ನಮ್ಮೆಲ್ಲರನ್ನೂ ನೋಡಿ ಕೊಂಡರು)
ನಿನ್ನಾ ಮದಿಕ್ಕಲಿಯೇ ನೇರಂಕಂಡು ತೇಡಲಿಯೇ.

"ಮಂಜೆರಗ ಹೊದಕೊಂಡು" ಎಂಬ ಮಾತು ಕ್ರೈಸ್ತಮಹಿಳೆಯರಿಗೆ ಮಾತ್ರ ಅನ್ವಯಿಸುವಂಥದ್ದು. "ಸೆರಗು" ಮೈಸೂರಿನ ಕ್ರೈಸ್ತಮಹಿಳೆಯರಲ್ಲಿ ವಿಶಿಷ್ಟಪಾತ್ರ ವಹಿಸುತ್ತದೆ. ಹೆಣ್ಣು ಮಾನಮರ್ಯಾದೆಗಾಗಿ ಸೆರಗು ಹೊದ್ದಿರಬೇಕು ಎಂಬುದು ಇತರರಲ್ಲೂ ಇರುವ ಭಾವನೆ. ಆದರೆ ಸ್ತ್ರೀ ಚರ್ಚಿಗೆ ಹೋಗುವಾಗ ತಲೆಯಮೇಲೆ ಸೆರಗು ಹೊದ್ದಿರಬೇಕು

ಎಂಬುದು ಕ್ರೈಸ್ತ ಮಹಿಳೆಯಲ್ಲಿರುವ ಪದ್ದತಿ. "ಬರಗಾಲಕ್ಕಿ ಒಡೆಯುತ್ತ' ಹೆಣ್ಣು ಮನೆಯೊಳಗೆ ಪ್ರವೇಶಿಸುವುದು ಹಿಂದೂ ಜನಪದ ಮಾತ್ರ ಕ್ರೈಸ್ತರ ಸಂಸ್ಕೃತಿಯೇ ಆಗಿದೆ. ತಲೆಯಮೇಲೆ ಸೆರಗು ಹೊದೆಯುವ ಹೆಣ್ಣುಮಗಳು ಗೌರವಕ್ಕೆ ಪಾತ್ರಳು. ಏಕೆಂದರೆ ಮಾತೆ ಮರಿಯಮ್ಮ ಯಾವಾಗಲೂ ತಲೆಯಮೇಲೆ ಸೆರಗು ಹೊದ್ದಿರುವುದು ಕಂಡು ಬರುತ್ತದೆ. ಅವಳ ಆದರ್ಶವನ್ನು ಪಾಲಿಸಿ ಇಂದಿಗೂ ಕ್ರೈಸ್ತಮಹಿಳೆಯರು ಚರ್ಚಿಗೆ ಹೋಗುವಾಗ ತಲೆಯಮೇಲೆ ಸೆರಗು ಹಾಕಿಕೊಳ್ಳುವುದು ಸಂಪ್ರದಾಯವಾಗಿದೆ.

ಮಕ್ಕಳು ಮನೆಗೆ ಮಾಣಿಕ್ಯ, ಬಾಳಿನಲ್ಲಿ ಸಂಕ್ರಾಂತಿ ಎಂಬ ಅನಿಸಿಕೆಗಳು ಜನಪದರಲ್ಲಿವೆ. ಆದರೆ ತಮ್ಮ ಮಗುವಿಗೆ ದುರಂತ ಕಾದಿದೆ ಎಂದು ತಿಳಿದಮೇಲೆ ಯಾವ ತಾಯಿ ತಾನೆ ನೆಮ್ಮದಿಯಿಂದ ಇರಲು ಸಾಧ್ಯ? ಮರಿಯಮ್ಮನಿಗೆ ತನ್ನ ಮಗ "ಯೇಸು"ವಿನ ಮರಣದ ದೃಶ್ಯಗಳು ಗೋಚರಿಸಿದ್ದವಚಿತೆ. ಆಕೆ ಅದನ್ನು ಸ್ಮರಿಸಿದಾಗಲೆಲ್ಲಾ ಒಂದೊಂದು ಈಟಿಯ ತೆರನಾಗಿ ಹೃದಯದಲ್ಲಿ ನಾಟಿಕೊಳ್ಳುತ್ತಿದ್ದವಂತೆ. ಅಂತಹ ವ್ಯಾಕುಲ ಮಾತೆಯನ್ನು ಸಂತೈಸುತ್ತಾ "ನಿಮ್ಮ ಮಗ ರಥವೇರಿ ಬರುತ್ತಾನೆ" ಎಂದು ಹೇಳುವ ಮಾತಿನಲ್ಲಿ ಯೇಸುಕ್ರಿಸ್ತನ ಪುನರುತ್ಥಾನದ ಸೂಚನೆಯಿದೆ. ಯೇಸುವಿನ ಪುನರುತ್ಥಾನದ ಆಧಾರದ ಮೇಲೆಯೇ ಕ್ರೈಸ್ತಧರ್ಮ ನಿಂತಿರುವ್ಯದರಿಂದ ಈ ಹಾಡು ಅರ್ಥಪೂರ್ಣವಾಗಿದೆ. ರಥವೇರಿ ಬರುವವನು ಒಬ್ಬ "ದೇವರು" ಮತ್ತೊಬ್ಬ ರಾಜ. ನಿಮ್ಮ ಮಗನೇ ದೇವರಾಗಿರುವಾಗ ನೀವು ದುಃಖಿಸುವುದೇಕೆ ಎಂದು ಸಂತೈಸುವ ಧ್ವನಿ ಇಲ್ಲಿದೆ.

ಒಂದು ಕಾಲಕ್ಕೆ ಧರ್ಮಸಭೆ ನಿಷೇಧ ವಿಧಿಸಿದ್ದ ಸಾಂಸ್ಕೃತಿಕ ಆಚರಣೆಗಳಿಗೆ ಒಗ್ಗಿಕೊಳ್ಳಲಾಗದೆ ಜನ ಹಿಂದಿನದವನ್ನು ಉಳಿಸಿಕೊಂಡೇ ಬಂದಿದ್ದರು. ಕ್ರಮೇಣ ಕಾಲದ ಬದಲಾವಣೆಗಳಿಗೆ ಅನುಗುಣವಾಗಿ ಧರ್ಮಸಭೆ (Church) ಕೆಲವು ನಿಷೇಧಗಳನ್ನು ಸಡಿಲಗೊಳಿಸಬೇಕಾದ್ದು ಅನಿವಾರ್ಯವಾಯಿತು. ಹಿಂದೂ ಸಂಸ್ಕೃತಿಯ ಹಿನ್ನೆಲೆಯಲ್ಲಿ ಬಿಡಲಾಗದ ಕೆಲವು ಪದ್ಧತಿಗಳನ್ನು ಕ್ರೈಸ್ತಧರ್ಮದ ಚೌಕಟ್ಟಿನೊಳಗೆ ಅಳವಡಿಸಿಕೊಳ್ಳ ಬೇಕಾಯಿತು. ನಿಷೇಧ ವಿಧಿಸುವ ಮುನ್ನ ಇದ್ದ ರೂಢಿಗಳು ಮುಂದುವರೆದವು. "ಹಣ್ಣುಕಾಯಿ ಹೊಡೆದೇವು" ಎಂಬ ಸಂಪ್ರದಾಯ ದೇವರ ಮುಂದೆ ಕಾಯಿ ಹೊಡೆಯದಿದ್ದರೂ (ಹಿಂದೂ ಸಂಪ್ರದಾಯದಂತೆ) ತೆಂಗಿನಕಾಯಿಯನ್ನು ಎರಡು ಹೋಳಾಗಿ ಹೊಡೆದು ಅದರಲ್ಲಿ ದೀಪ ಹಚ್ಚುವ ಪದ್ಧತಿ ಇದೆ.

ಹಿಂದೂಧರ್ಮದಲ್ಲಿ ವಿವಾಹ ಸಂಸ್ಕಾರವನ್ನು ಪುರೋಹಿತರು ನೆರವೇರಿಸಿಕೊಡುತ್ತಾರೆ. ಮುಹೂರ್ತದ ಸಮಯದಲ್ಲಿ ಹೇಳಬೇಕಾದ ಎಲ್ಲ ಮಂತ್ರಗಳನ್ನೂ ಅಲ್ಲಿ ಸಂಸ್ಕೃತದಲ್ಲಿಯೇ ಹೇಳುವುದು ವಾಡಿಕೆ. ಆನರಿಗೆ ಅದು ಅರ್ಥವಾಗಲಿ, ಆಗದಿರಲಿ ಸಂಸ್ಕೃತದಲ್ಲೇ

ಮಂತ್ರಗಳನ್ನು ಉಚ್ಚರಿಸುವುದು ಕ್ರಮ. ಆದರೆ ಕ್ರೈಸ್ತರಲ್ಲಿ ತಾಳೀ ಮುಹೂರ್ತ ಚರ್ಚಿನಲ್ಲಿ ನೆರವೇರುತ್ತದೆ. ಗುರುಗಳು (Priest) ಇಂಗ್ಲಿಷ್, ಕನ್ನಡ ಅಥವಾ ತಮಿಳಿನಲ್ಲಿ ಪ್ರಜಾ ಪ್ರಾರ್ಥನೆಗಳನ್ನು ಸಲ್ಲಿಸುತ್ತಾರೆ. ಸಂಸ್ಕೃತದಲ್ಲಿ ಮಂತ್ರಗಳನ್ನು ಪಠಿಸುವುದು ತಪ್ಪಿಹೋಗಬಾರದು ಎಂದು ಮೈಸೂರಿನ ಕನ್ನಡ ಕ್ರೈಸ್ತರು ಮನೆಯಲ್ಲಿ ಚಪ್ಪರಡಿಯಲ್ಲಿ ಆಗುವ "ಧಾರೆಮುಹೂರ್ತ"ದ ಸಮಯದಲ್ಲಿ ಸಂಸ್ಕೃತದಲ್ಲಿ ಕ್ರೈಸ್ತಪ್ರಾರ್ಥನೆಗಳನ್ನು ಸಲ್ಲಿಸುವುದನ್ನು ರೂಢಿಸಿಕೊಂಡಿದ್ದಾರೆ. ಕನ್ನಡ ಕ್ರೈಸ್ತರ ಮದುವೆಯ ಧಾರೆಮುಹೂರ್ತದಲ್ಲಿ ಉಪದೇಶಪ್ಪ ಸಂಸ್ಕೃತ ಮಂತ್ರವನ್ನು ಹೇಳುವ ಸಂಪ್ರದಾಯ ಇಂದಿಗೂ ಉಳಿದುಕೊಂಡಿದೆ.

ಮೈಸೂರು ಜಿಲ್ಲೆಯ ಕೊಂಕಣಿ ಕ್ರೈಸ್ತರಲ್ಲಿ ಪ್ರಚಲಿತವಿರುವ ಈ ಹಾಡು ಅಂದಿನ ರಾಜಕೀಯ, ಸಾಮಾಜಿ ಸ್ಥಿತಿಗತಿಗಳ ಚಿತ್ರವನ್ನು ಕಣ್ಣಿಗೆ ಕಟ್ಟಿಕೊಡುತ್ತದೆ. ತಮ್ಮನ್ನಾಳುವ ಅರಸನೇ ತಮಗೆ ಉಪದ್ರವ ಕೊಟ್ಟಾಗ ಹೊರಗಿನವರಾದರೂ ಬ್ರಿಟಿಷರು ತೋರಿದ ದಯೆ, ಪ್ರೇಮದಿಂದ ಸಹಜವಾಗಿ ಕ್ರೈಸ್ತರ ಒಲವು ಬ್ರಿಟಿಷರತ್ತವಾಲಿತು. ಇವರ ಒಲವು ಬ್ರಿಟಿಷರತ್ತ ಹರಿದಷ್ಟೂ, ಟಿಪ್ಪುಸುಲ್ತಾನನ ಕೋಪ ಹೆಚ್ಚುತ್ತಿತ್ತು. ಆದ್ದರಿಂದ ಅವನು ಕೊಂಕಣ ಕ್ರೈಸ್ತರನ್ನು ದ್ವೇಷಿಸುತ್ತಿದ್ದುದು ಸಹಜವೇ ಆಗಿತ್ತು.

ಶ್ರೀಮಂತರು ಬಡವರು ಎಂಬ ಎರಡು ವರ್ಗಗಳು ಎಲ್ಲ ಸಮಾಜಗಳಲ್ಲೂ ಕಂಡು ಬರುವಂತೆ ಕ್ರೈಸ್ತಸಮಾಜದಲ್ಲೂ ಕಂಡು ಬರುತ್ತದೆ. ಒಡವೆವಸ್ತ್ರಗಳನ್ನು ಧರಿಸಿ, ನಾಜೂಕಾಗಿ ಬಂದವರಿಗೆ ಕರೆದು ಸ್ಥಳಕೊಡುತ್ತಾರೆ. ಅವರು ಕಾಣಿಸದಿದ್ದಲ್ಲಿ ಹುಡುಕುತ್ತಾರೆ. ಆದರೆ ಬಡವರನ್ನು ಕಂಡಾಗ ಆ ಕಾತರತೆ ಇರುವುದಿಲ್ಲ. ಬಡತನದಲ್ಲಿ ಬಳಲುತ್ತಿದ್ದರೂ, ಮತ್ತೊಬ್ಬರು ತಮ್ಮನ್ನು ಕೀಳಾಗಿ ಭಾವಿಸಿದಾಗ ಮನನೊಂದು ಹಾಡಿದ ಹಾಡಿದು. ಮಾರ್ಟಳ್ಳಿಯ ತಮಿಳು ಕ್ರೈಸ್ತರಲ್ಲಿ ಪ್ರಚಲಿತದಲ್ಲಿರುವ ಈ ಹಾಡು ಅವರ ಕೀಳರಿಮೆಯನ್ನೂ ಹೊರಹಾಕುತ್ತದೆ.

**7.3 ಗಾಥೆ ಮತ್ತು ಒಗಟು** "ಪ್ರಪಂಚದ ಎಲ್ಲಾ ಭಾಷೆಗಳಲ್ಲೂ ಗಾದೆಗಳು ಹೇರಳವಾಗಿವೆ" (ದೇಜಗೌ:1991:258). ಆದರೆ ಜನಪದ ಆಡುಭಾಷೆಯಲ್ಲಿ ಮಾತ್ರ ಗಾದೆಯ ಅಸ್ತಿತ್ವ ಎಂಬುದನ್ನು ಮರೆಯುವಂತಿಲ್ಲ. ಅಂತೆಯೇ ಗಾದೆ "ಜನಭಾಷೆಯ ಕೆನೆ, ಜನವಾಣಿ ಬಿಟ್ಟ ಹಣ್ಣು" (ಸಿ.ಪಿ.ಕೆ:1981:18)

ಮೈಸೂರು ಜಿಲ್ಲೆಯ ಕ್ರೈಸ್ತರಲ್ಲೂ ಗಾದೆ, ಒಗಟುಗಳು ಕಂಡುಬರುತ್ತವೆ. ಇವು ಆ ಸಮುದಾಯದ ಸಂಪ್ರದಾಯ, ಸಂಸ್ಕೃತಿಗಳನ್ನು ಪರಿಚಯ ಮಾಡಿಕೊಡುತ್ತವೆ. ಕ್ರೈಸ್ತರು ನೆಲಸಿರುವ ಇಲ್ಲಿನ ಎಲ್ಲ ಪ್ರದೇಶಗಳಲ್ಲೂ ಇತರ ಧರ್ಮಿಯರ ಸಂಪರ್ಕ ಪ್ರಬಲವಾಗಿರುತ್ತದೆ.

ಆದಕಾರಣ 'ಕ್ರೈಸ್ತರ ಗಾದೆ ಮತ್ತು ಒಗಟುಗಳು' ಎಂಬ ವಿಂಗಡಣೆ ಸಾಧ್ಯವಾಗುವುದಿಲ್ಲ. ಏಕೆಂದರೆ ಗಾದೆಗಳು ತಮ್ಮ ಸುತ್ತಮುತ್ತಲಿನ ಜನರ ನಡುವೆಯೇ ಉಗಮವಾಗಿ, ಅಲ್ಲಿನ ಸಾಮಾಜಿಕ, ಸಾಂಸ್ಕೃತಿಕ, ವ್ಯಕ್ತಿಸಂಬಂಧೀ ವಿಷಯಗಳನ್ನೇ ಒಳಗೊಂಡಿರುತ್ತವೆ. ನಿದರ್ಶನಕ್ಕಾಗಿ ಇಲ್ಲಿ ಕೆಲವು ಗಾದೆ, ಒಗಟುಗಳನ್ನು ಗಮನಿಸಬಹುದು:

ಬಡ್ಯೆಗೊಂದು ಕಡ್ಯೆರಂದು, ಕಡ್ಯೆನವ್ನು ಬಮದು ?
ಲಗ್ನಾಸ್ವಾಗ ಅದ್ನೇ ಮಾರಿ ಅದ್ಕೇ ಕಟ್ದ ?

ಸಾಲಮಾಡಿ ಬಡಾಯಿಮಾಡುವ ಒಣಜಂಭವನ್ನು ಟೀಕಿಸಲು ಈ ಗಾದೆ ಹುಟ್ಟಿಕೊಂಡಿದೆ. ಹಳ್ಳಿಗಳಲ್ಲಿ ಜನಸಾಮಾನ್ಯರಿಗೆ ಕಡಾಯಿಬಂದು ಪ್ರತಿಷ್ಠೆಯ ವಸ್ತುವೇ ಆಗಿದೆ. ಹಿತ್ತಾಳೆ ತಾಮ್ರದ ವಸ್ತುಗಳಿದ್ದಷ್ಟೂ ಮನೆಯ ದೊಡ್ಡಸ್ತಿಕೆ ಹೆಚ್ಚುತ್ತದೆ ಎಂಬ ಭಾವನೆಯಿದೆ. "ಸಾಲಿಗನು ಬಂದು ಎಳೆವಾಗ ಕಿಬ್ಬದಿಯ ಕೀಲು ಮುರಿದಂತೆ" ಎಂಬ ಸರ್ವಜ್ಞನ ವಚನವನ್ನು ಇಲ್ಲಿ ಸ್ಮರಿಸಬಹುದು.

"ನಮ್ಮೋರು ಬಂದ್ರೆ ಮುಳ್ಗು ಸೊಟ್ಗ, ನಿಮ್ಮೋರು ಬಂದ್ರೆ ತೇಲು ಸೊಟ್ಗ"

ಮಾಂಸದಡುಗೆ ಮಾಡಿ ಬಡಿಸುವಾಗ ಹೋಳುಗಳೆಲ್ಲ ಭಾರಕ್ಕೆ ಪಾತ್ರೆಯ ತಳದಲ್ಲಿರುತ್ತವೆ. ಇಲ್ಲಿ "ನಮ್ಮೋರು" ಎಂದರೆ ತವರಿನವರು, "ನಿಮ್ಮೋರು" ಎಂದರೆ ಗಂಡನ ಕಡೆಯವರು ಎಂದು ಅರ್ಥೈಸಬಹುದು. ತವರುಮನೆಯವರು ಬಂದಾಗ ಸೌಟು ಪಾತ್ರೆಯ ತಳದವರೆಗೆ ಮುಳುಗಿ ಮಾಂಸದ ಹೋಳುಗಳನ್ನು ಬಡಿಸುವ್ಯದೆಂದೂ, ಗಂಡನ ಕಡೆಯವರು ಬಂದಾಗ ಬರೀ ಸಾರನ್ನೇ ಬಡಿಸುವುದೆಂದೂ ಇಲ್ಲಿ ಸೊಸೆಯ ನಡವಳಿಕೆಯನ್ನು ವಿಡಂಬನೆಗೆ ಗುರಿಮಾಡಲಾಗಿದೆ.

'ಕಲ್ತಿದ್ದ ಬುಡೇ ಕಲ್ಕೇತಿ ಅಂದ್ರೆ ನಡ್ಗಾಲ್ದಲ್ಲಿ ಬುಟ್ಟು
ಹುಡ್ಮಣ್ಣು ಹುಯ್ಕೊಳ್ಲ ಅಂದ್ಲಂತೆ'

ಇದು ಸ್ತ್ರೀಯರನ್ನೇ ಕುರಿತು ಹೇಳಿದ ಗಾದೆಯಾಗಿದೆ. ಕೆಟ್ಟ ಚಟಗಳನ್ನು ಒಮ್ಮೆ ಕಲಿತರೆ ಅವು ಮೈಗೂಡಿ ಹೋಗುತ್ತವೆ. "ರುಸಿ ಕಂಡ ಪೂನ್ಯೆ" (ರುಚಿಕಂಡ ಬೆಕ್ಕು) ಎಂಬ ತಮಿಳು ಗಾದೆಯೂ ಇದನ್ನೇ ಹೋಲುತ್ತದೆ. ಚಟಗಳನ್ನು ಚಿಗುರಿದನಲ್ಲೇ ಚಿವುಟಿ ಹಾಕದಿದ್ದರೆ ಬಲಿತಮೇಲೆ ಬಿಡುತ್ತೇನೆಂದರೂ ಬಿಡಲು ಸಾಧ್ಯವಾಗುವುದಿಲ್ಲ. ಬಿಟ್ಟರೂ ಅದರ ನಷ್ಟವನ್ನು ತುಂಬಿಸಲು ಮತ್ತೊಂದು ಅಡ್ಡದಾರಿಯನ್ನೇ ಹಿಡಿಯಬೇಕಾಗುತ್ತದೆ. ಅದರಲ್ಲಿ ಕುದುರುವವರೆಗೆ ಜೀವನವೇ ದುಸ್ತರವಾಗುತ್ತದೆ. ಉದಾಹರಣೆಗೆ ಹಳ್ಳಿಗಳಲ್ಲಿ ಬಡ್ಡಿಗೆ ಹಣಕೊಡುವುದು ಒಂದು ಸಾಮಾನ್ಯ ವ್ಯವಹಾರವಾಗಿದೆ. ಬಡವರಿಗೆ ಸಾಲಕೊಟ್ಟು

ಅನ್ಯಾಯದ ಬಡ್ಡಿಯನ್ನು ವಸೂಲಿ ಮಾಡುವಾಗ ಅದು "ಅನ್ಯಾಯ" ವೆಂದು ಜನ ಹೇಳುತ್ತಲೇ ಇದ್ದರೂ ಕೊಟ್ಟದ್ದನ್ನು ಬಿಡಲಾಗುವುದಿಲ್ಲ, ಬಿಟ್ಟರೆ ಹಣ ವಾಪಸು ಬರದೆ ಹುಡ್ಮಣ್ಣು ಹುಯ್ಕೊಂಡಂತಾಗುತ್ತದೆ.

"ಅತ್ತೆ ಸೊಸೆಗೆ ಬುದ್ದಿ ಹೇಳಿಹೇಳಿ ಹೋದ್ಲಂತೆ ಕತ್ತೆ ಹಿಂದೆ"

ಸೊಸೆಗೆ ಸದಾ ಬುದ್ದಿ ಹೇಳುವುದು, ಕೊಂಕು ನುಡಿಯುವುದು ಅತ್ತೆಯ ಸ್ವಭಾವ ಅತ್ತೆಯೂ ಒಮ್ಮೆ ಸೊಸೆಯಾಗಿದ್ದಳು ಎಂಬುದನ್ನು ಮರೆತು ಸೊಸೆಗೆ ಹಿಂಸೆಕೊಡುತ್ತಾಳೆ. "ಅತ್ತೆ ಒಡೆದ ಮಡಕೆ ಮಣ್ಣು ಸೊಸೆ ಒಡೆದ ಮಡಿಕೆ ಹೊನ್ನು" ಎಂಬ ಗಾದೆಯನ್ನು ಇಲ್ಲಿ ಸ್ಮರಿಸಬಹದು. ಅತ್ತೆ, ಸೊಸೆ ಮಾಡಿದ ತಪ್ಪನ್ನು ಹೇಳುತ್ತಾ, ಬೈಯುತ್ತಾ ತಾನು ಕೂಡ ಅದಕ್ಕಿಂತಲೂ ಕೆಳಮಟ್ಟದ ತಪ್ಪನ್ನೇ ಮಾಡುತ್ತಾಳೆ. ತಾನು ಮಾಡಿದ್ದು ತಪ್ಪಲ್ಲ ಎಂಬ ಭಾವನೆ ಅವಳಿಗಿದ್ದರೂ ಜನ ಅದನ್ನು ಗುರುತಿಸುತ್ತಾರೆ.

ಲೊಟಗುಟ್ಟೋ ಹೆಂಡ್ತಿ, ತೊಟಗುಟ್ಟೋ ಹನಿ"

ಹೆಚ್ಚು ಮಾತನಾಡುವ ಹೆಣ್ಣನ್ನು ಕಟ್ಟಿಕೊಂಡ ಗಂಡನ ಅನುಭವ ಇಲ್ಲಿ ವ್ಯಕ್ತವಾಗಿದೆ. ಒಚಿದೇ ಸಮನೆ ತೊಟಗುಟ್ಟುವ ನೀರಿನ ಶಬ್ದ ಹೇಗೆ ಅಸಹನೀಚಿಯವೋ ಹಾಗೆಯೇ ಸದಾ ಮಾತನಾಡುತ್ತಿರುವ ಹೆಂಡತಿ ಬೇಸರವನ್ನು ತರುತ್ತಾಳೆ.

ಆಸರ್ಕೆ ಬೇಸರ್ಕೆ ಎಲ್ಲೆಂದ್ರೆ ಇಲ್ಲಿ
ಸುಮಾನ್ ಸುಪ್ಪತ್ಗೆ ಅಲ್ಲಿಂದ್ರೆ
ಸುಮ್ಮನ್ ಮನಿಕಳದಿಲ್ಲಿ
ಬೆಚ್ಚಿಟ್ಟ ಬೆಳಗಾನ ಅಲ್ಲಿಂದ್ರೆ
ಬೆಳಗಿನ ಜಾವ್ದಲ್ಲಲ್ಲಿ

ದುಡಿಯಲಾಗದ ಸೋಮಾರಿಗಂಡ, ಸಾಲದ್ದಕ್ಕೆ ಮತ್ತೊಬ್ಬಳ ಸಹವಾಸ ಮಾಡಿಕೊಂಡಾಗ ಜಿಗುಪ್ಸೆಗೊಂಡ ಹೆಂಡತಿ ಈ ಗಾದೆಯನ್ನು ಹೇಳಿರಬಹುದು. ಮನೆಯಲ್ಲಿ ಹೆಂಡತಿ ಮಕ್ಕಳೊಡನೆ ಸಂತೋಷದಿಂದ ಇರಲಾಗದೆ ಯಾವಾಗಲೂ ಬೇಜಾರು, ಆಯಾಸ ಎನ್ನುತ್ತಿದ್ದರೆ, ಆತ ಕಟ್ಟಿಕೊಂಡ ಹೆಂಡತಿಗೆ ಹೇಗೆ ಪ್ರಿಯವಾಗುತ್ತಾನೆ? ಅಲ್ಲದೆ "ಸುಮ್ಮನ್ ಮನಿಕಳದಿಲ್ಲಿ" ಎಂಬ ಮಾತಿನಲ್ಲಿ ಲೈಂಗಿಕ ಅತೃಪ್ತಿಯೂ ವ್ಯಕ್ತವಾಗಿದೆ.

ತಮಿಳು ಕ್ರೈಸ್ತರಲ್ಲಿಯೂ ಗಾದೆಗಳು ಜನಪ್ರಿಯವಾಗಿವೆ.

"ಕೋಯಿಲ್ ವಿಳಂಗಿನಾಲ್ ಕುಡಿ ವಿಳಂಗಂ"

ದೇವರ ಬಗೆಗೆ ಭಯಭಕ್ತಿ ಇದ್ದು ಪೂಜೆಪುನಸ್ಕಾರಗಳನ್ನು ಮಾಡುತ್ತಿದ್ದರೆ, ಯಾವ ಕಷ್ಟವೂ ಬಾರದಂತೆ ದೇವರು ಕಾಪಾಡುತ್ತಾನೆ ಎಂಬ ಅರ್ಥವನ್ನು ಈ ಗಾದೆ ನೀಡುತ್ತದೆ.

ಮುಕ್ಕಿ ಮುಕ್ಕಿ ಕುತ್ತುನವರ್ಕು ಮೂಣು ಕೊಳಕ್ಕಟ್ಟೈ
ಎಟ್ಟಿ ಎಟ್ಟಿ ಪಾತ್ತವರ್ಕು ಎಟ್ಟು ಕೊಳಕ್ಕಟ್ಟೈ

ಕೆಲವೊಮ್ಮೆ ಕಷ್ಟಪಟ್ಟು ದುಡಿದವರಿಗೆ ಫಲಸಿಗುವುದಿಲ್ಲ. ಆರಾಮವಾಗಿದ್ದವರಿಗೆ, ಕಷ್ಟಪಟ್ಟವರಿಗಿಂತಲೂ ಹೆಚ್ಚು ಫಲ ಸಿಗುತ್ತದೆ. ತಮಿಳರು ಅಕ್ಕಿಕುಟ್ಟಿ ಹಬೆಯಲ್ಲಿ ಬೇಯಿಸಿ ತಯಾರಿಸುವ ತಿಂಡಿ "ಕೊಳಕ್ಕಟ್ಟೈ". ಅಕ್ಕಿಕುಟ್ಟಿ ಹದ ಮಾಡಿದವರಿಗೆ ಮೂರು "ಕೊಳಕ್ಕಟ್ಟೈ" ಇಣುಕಿ ಇಣುಕಿ ನೋಡಿದವರಿಗೆ ಎಂಟು "ಕೊಳಕ್ಕಟ್ಟೈ" ಸಿಗುತ್ತದೆ. ಇಲ್ಲಿ ಪ್ರಾಸಕ್ಕೆ ಪ್ರಾಶಸ್ತ್ಯವಿರುವುದು ಕಂಡು ಬರುತ್ತದೆ.

ಇಲ್ಲಿ ನೆಲಸಿರುವ ತಮಿಳು ಕ್ರೈಸ್ತರಲ್ಲಿ ರೂಢಿಯಲ್ಲಿರುವ ಗಾದೆಗಳು ಇತರ ಧರ್ಮಿಯರಲ್ಲೂ, ಇತರ ಭಾಷೆಗಳಲ್ಲೂ ಇತರ ಭಾಷೆಗಳಲ್ಲೂ ಕಂಡು ಬರುವಂಥವೇ ಆಗಿವೆ. ಈ ಅಂಶ ಗಾದೆಗಳ ಸಾರ್ವತ್ರಿಕತೆಯನ್ನು ಹೇಳುತ್ತದೆ. ಆದರೂ ಅಲ್ಲಲ್ಲಿ ಈ ಗಾದೆಗಳಲ್ಲಿ ಪ್ರಕಟಗೊಳ್ಳುವ ಕ್ರೈಸ್ತರ ವಿಶಿಷ್ಟಾಂಶಗಳನ್ನು ಗುರುತಿಸಲಾಗಿದೆ. ಮೈಸೂರು ಜಿಲ್ಲೆಯ ಕ್ರೈಸ್ತರ ಒಗಟುಗಳು ಎಂದು ಸ್ಪಷ್ಟವಾಗಿ ವಿಂಗಡಿಸಲಾಗದಿದ್ದರೂ ಇವರಲ್ಲಿ ಹೆಚ್ಚಾಗಿ ರೂಢಿಯಲ್ಲಿರುವ ಕೆಲವು ಒಗಟುಗಳು ಇಚಿತಿವೆ:

ಒಂದು ಅಡ್ಕೆ ಹೊಡ್ಡಿ
ಒಂಭೈನೂರು ತೊಂಭೈನೂರು
ನಾನೂರು ನರ್ಸೀಪು
ಆಡಗ್ನಳ್ಳಿ ಬಿಳಿಕೆರೆ
ಮಲಗಕ್ಕಂಚ ಮೊಗ್ಗಿಗೆ ಸೂಳೆ
ಒಗಟು ಒಡೆದವ್ರಿಗೆ
ಚಿನ್ನದ ಸರ (ದಾಳಿಂಬೆ)

ಒಂಭೈನೂರು, ತೊಂಭೈನೂರು, ನಾನೂರು ಇವುಗಳು ದಾಳಿಂಬೆ ಹಣ್ಣಿನ ಕಾಳುಗಳ ಸಂಖ್ಯೆಯನ್ನೂ "ಚಿನ್ನದಸರ" ಕಾಳಿನ ಕೆಂಪುಬಣ್ಣವು ಕೆಂಪು ಹರಳಿನ ಸರವನ್ನೂ ಸೂಚಿಸುತ್ತವೆ. ನರ್ಸೀಪುರ, ಅಡಗ್ನಹಳ್ಳಿ, ಬಿಳಿಕೆರೆ ಇವು ಮೈಸೂರು ಜಿಲ್ಲೆಯ ಇತರ ತಾಲ್ಲೂಕುಗಳ ಹೆಸರೇ ಆಗಿರುವುದರಿಂದ ಈ ಒಗಟು ಮೈಸೂರು ಜಿಲ್ಲೆಯಲ್ಲಿ ಹುಟ್ಟಿಕೊಂಡಿರುವುದನ್ನು ಸಾಬೀತುಪಡಿಸುತ್ತದೆ. "ಸೂಳೆ" ಎಂದಾಕ್ಷಣ ಅವಳು

ನೀತಿಗೆಟ್ಟವಳು ಎಂಬ ಭಾವನೆಯೇ ಜನಸಾಮಾನ್ಯರಿಗೆ ಬರುವುದು. ಆಕೆಯ ಜೀವನದ ಹಿನ್ನೆಲೆಗಳು ಸಮಸ್ಯೆಗಳ ಬಗ್ಗೆ ಯಾರೂ ಚಿಂತಿಸುವುದಿಲ್ಲ. ಮೇಲಿನ ಒಗಟಿನಲ್ಲಿ "ಮಲಗಕ್ಮಂಚ ಮೊಗ್ಗಿಗೆ ಸೂಳೆ" ಎಂಬ ಸಾಲಿನ "ಮಂಚ, ಸೂಳೆ" ಎಂಬ ಪದಗಳು ಜನಸಾಮಾನ್ಯರ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತವೆ.

ಕರಿಸೀರೆ ಗರ್ತೀರಾ
ಕಾಕನಕೋಟೇಲಿರ್ತೀರಾ
ಕಾಸುಕೊಟ್ರೆ ಬರ್ತೀರಾ (ಮೆಣಸು)

ಈ ಒಗಟು ಡೋರ್ನಹಳ್ಳಿಯಲ್ಲಿ ಪ್ರಚಲಿತವಿದೆ. ನಾಗನಹಳ್ಳಿಯ ಹೆಣ್ಣುಗಳನ್ನು ಡೋರ್ನಹಳ್ಳಿಯವರು ಮದುವೆಯಾಗುವುದು ಸಾಮಾನ್ಯ ಸಂಗತಿಯಾಗಿದೆ. ಆದ್ದರಿಂದ ಈ ಗಾದೆ ನಾಗನಹಳ್ಳಿಯ ಸಂಸ್ಕೃತಿಯನ್ನು ಡೋರ್ನಹಳ್ಳಿಯವರೆಗೆ ತಂದಿದೆ ಎಂಬುದರಲ್ಲಿ ಸಂದೇಹವಿಲ್ಲ.

" ಗರ್ತೀರಾ, ಕಾಸುಕೊಟ್ರೆ ಬರ್ತೀರಾ" ಎಂಬ ಮಾತುಗಳಲ್ಲಿ ವ್ಯಂಗ್ಯವೂ ಇದೆ. ಮೆಣಸನ್ನು ದುಡ್ಡು ಕೊಟ್ಟೇ ಕೊಂಡುಕೊಳ್ಳಬೇಕಾಗಿದ್ದರೂ "ಗರ್ತೀರಾ" ಎಂಬ ಪದ ಬಳಕೆಯಾಗಿರುವುದರಿಂದ ಎರಡು ಮತ್ತು ಮೂರನೆಯ ಚರಣಗಳು ಎರಡು ವೈರುಧ್ಯಗಳನ್ನು ಸಮರಸಗೊಳಿಸುವ ಯತ್ನ ಮಾಡುತ್ತದೆ.

ಒಳಗೆ ಸಿಪ್ಪೆ ಮೇಲೆ ಮಾಂಸ (ಕೋಳಿಯಗುಂಡಿಕಾಯಿ)

ಮೇಲೆ ಸಿಪ್ಪೆ ಒಳಗೆ ತಿರುಳಿರುವುದು ಸಾಮಾನ್ಯ. ಆದರೆ ಮೇಲಿನ ಒಗಟು ಇದಕ್ಕೆ ವಿರುದ್ಧವಾಗಿದೆ. ಇದು ಅನುಭವಸ್ಥರ ಹೇಳಿಕೆ. ಹಳ್ಳಿಗಳಲ್ಲಿ ಕೋಳಿಸಾಕಾಣಿಕೆ, ಸಾಮಾನ್ಯ. ಅತಿಥಿಗಳ ಉಪಚಾರಕ್ಕಾಗಿ ಕೋಳಿ ಕುಯ್ದಾಗ ಅದರ ಹೊಟ್ಟೆಯೊಳಗಿನ ಬೇಡದ ಪದಾರ್ಥಗಳನ್ನು ತೆಗೆದುಹಾಕುವಾಗ ಕೋಳಿಯ ಗುಂಡಿಕಾಯನ್ನು ಕೊಯ್ದು ಅದರೊಳಗಿನ ಸಿಪ್ಪೆಯನ್ನು ಎಡೆದು ಹಾಕುವುದು ಪದ್ದತಿ. ಮೇಲಿನ ಒಗಟು ಅದನ್ನು ಕಟ್ಟಿಗೆ ಕಟ್ಟುವಚಿತೆ ಚಿತ್ರಿಸುತ್ತದೆ.

ಹರಿ ಬಿದ್ಮೇಲೆ ಕುಯ್ಲು (ಹೊಕ್ಕಳು)
ಸಾವಿರ ರೂಪಾಯ್ನ ತೋಟ
ಸಾಸ್ವೆ ಗಾತ್ರ ಕಲ್ಲು ಬಿದ್ರೆ ಹಾಳು(ಕಣ್ಣು)

ಮೇಲಿನ ಎರಡು ಒಗಟುಗಳು ಕೃಷಿಯನ್ನವಲಂಬಿಸಿದವರಲ್ಲೇ ಹುಟ್ಟಿದವುಗಳಾಗಿವೆ. ಕುಯ್ಲು ತೋಟ ಪದಗಳು ಕೃಷಿಕ್ಕರಿಗೆ ಸಂಬಂಧಿಸಿದವುಗಳಾಗಿವೆ. ಆದರೆ "ಹರಿ ಬಿದ್ಮೇಲೆ ಕುಯ್ಲು" ಎಂಬ ಒಗಟು ಮನೆಗಳಲ್ಲೇ ಹೆರಿಗೆ ಮಾಡಿಸುವ ಕ್ರಮವನ್ನೂ ಹೇಳಿದಂತಿದೆ.

ಅತ್ತಿಮರ ಹತ್ತೋದ್ನೋಡು
ಹತ್ತಿಂಬಿಕಾಯಿ ಕುಯ್ಯೊದ್ನೋಡು
ಕುಯ್ದಿಂಬಿಕಾಯಿ ಉಗಿಯೋದ್ನೋಡು
ಉಗಿದಿಂಬಿಕಾಯಿ ಬಣ್ಣನೋಡು (ಎಲೆಅಡಿಕೆ)

ಹಳ್ಳಿಗಳಲ್ಲಿ ವಾಸಿಸುವ ಕ್ರೈಸ್ತರು ಎಲೆ ಅಡಿಕೆ ತಿನ್ನುವ ಚಟವುಳ್ಳವರು ಗಂಡಸರು, ಹೆಂಗಸರು ಹೊಲಗಳಲ್ಲಿ ದುಡಿಯುವಾಗ ಎಲೆ, ಅಡಿಕೆ, ಹೊಗೆಸೊಪ್ಪನ್ನು ಅಗಿದು ದವಡೆಗೆ ಒತ್ತರಿಸಿಕೊಳ್ಳುವ ರೂಢಿಯಿದೆ. ಎಲೆ ಅಡಿಕೆ ಅಗಿಯುತ್ತಿದ್ದರೆ ಹಸಿವು ದಾಹಗಳ ಪರಿವೆಯಿರುವುದಿಲ್ಲವೆಂದೂ ಕೆಲಸದಲ್ಲಿ ತೊಡಗಲು ಸ್ಫೂರ್ತಿ ಒದಗಿಸುತ್ತದೆಂದೂ ಹೇಳುತ್ತಾರೆ. ಹೀಗಾಗಿ ಇದಕ್ಕೆ ಸಂಬಂಧಿಸಿದಂತೆ ಒಗಟು ಹುಟ್ಟಿಕೊಂಡಿದೆ.

ತಾಯಿ ಚಿಂಪರಿ ಮಗಳು ಬೋಳಿ (ಬೇಲದಮರ, ಹಣ್ಣು)

ಬೇಲದಮರ ಎಲೆಗಳು ಪೊದೆಯಂತೆ ಒತ್ತಾಗಿರುತ್ತವೆ. ಬೇಲದ ಹಣ್ಣು ದುಂಡಗೆ ನುಣುಪಾಗಿರುತ್ತದೆ. ಹಳ್ಳಿಗಳಲ್ಲಿ ಹೊಲಗದ್ದೆಗಳಲ್ಲಿ ದುಡಿದುಬರುವ ಸ್ತ್ರೀಯರು ತಮ್ಮ ಅಲಂಕಾರದತ್ತ ಗಮನಹರಿಸಲು ಸಮಯವೆಲ್ಲಿರುತ್ತದೆ? ತಲೆಕೆದರಿಕೊಂಡಿರುವ ಸ್ತ್ರೀಯರು ಅಪರೂಪವೇನಲ್ಲ. ಈ ಜನರ ಉತ್ತಮ ಸಾದೃಶ್ಯ ಜ್ಞಾನಕ್ಕೆ ಇದೊಂದು ಒಳ್ಳೆಯ ನಿದರ್ಶನ.

ಏರಿಮೇಲೋಗೋ ಸೂಳೇರ್ನ ಎಣಿಸ್ಬಬಹುದು
ಅವರ ಸೀರೆ ನೆರಿಗೇನಾ ಎಣಿಸಕ್ಕಾಗಲ್ಲ (ಅಣಬೆ)

ಈ ಒಗಟಿನ ಎರಡನೇ ಸಾಲಿನ ಅರ್ಥ ಕುತೂಹಲಕಾರಿಯಾಗಿದೆ. ಕಪ್ಪುನೆಲದ ಮೇಲೆ ಹಸಿರು ಹುಲ್ಲುಗಳ ನಡುವೆ ದುಂಡನೆ ಸುಂದರವಾಗಿ ಅರಳುವ ಬೆಳ್ಳನೆಯ ಅಣಬೆಗಳನ್ನು 'ಸೂಳೇರು' ಎಂದು ವರ್ಣಿಸಲಾಗಿದೆ. ನಮ್ಮದೇ ಆದ ದೃಷ್ಟಿಯಿಂದ ಹೀಗೆ ಅರ್ಥೈಸಬಹುದು.

1. ಅಣಬೆ ಹುಟ್ಟುವುದು ಗೊಬ್ಬರದ ಮೇಲೆ, ಕೊಳೆತ ಜೈವಿಕ ಪದಾರ್ಥವೇ ಅದರ ತಿರುಳು.
2. ಅಣಬೆ ಹುಟ್ಟಿ ಉಳಿಯುವುದು ಒಂದೆರಡೇ ದಿನ. ತಾತ್ಕಾಲಿಕವಾದುದು. ಅದು ಶಾಶ್ವತವಲ್ಲ. ಹಾಗೆಯೇ ವ್ಯಭಿಚಾರದಿಂದ ಸಿಗುವ ಸುಖ ಶಾಶ್ವತವಲ್ಲ. ಅದು ಕ್ಷಣಿಕವಾದದ್ದು, ಎಂಬ ಸಂಗತಿಯನ್ನು ಮನವರಿಕೆ ಮಾಡಿಕೊಡಲು ಅಣಬೆಯನ್ನು "ಸೂಳೇರು" ಎಂದಿರಬಹುದು. ಅಣಬೆಯ ತಳಭಾಗವು ತೆಳ್ಳನೆಯ ಪದರುಗಳಿಂದ

ಕೂಡಿರುವ ಹಿನ್ನೆಲೆಯಲ್ಲಿ ಅದಕ್ಕೆ "ಸೀರೆಯ ನೆರಿಗೆ ಎಣಿಸಕ್ಕಾಗಲ್ಲ" ಎಂಬ ಮಾತುಗಲು ಸಮರ್ಥನೀಯವಾಗಿವೆ.

ಇಂತಹ ಒಗಟುಗಳಲ್ಲದೆ ಮನರಂಜನೆಗಾಗಿ ದ್ವಂದ್ವಾರ್ಥ ನೀಡುವ ಒಗಟುಗಳೂ ಇವರಲ್ಲಿ ಪ್ರಚಲಿತವಿರುವುದು ಕಂಡು ಬರುತ್ತವೆ.

ತಿಂದ, ಉಂಡ ತಗಲಾಕ್ದ (ಬಾಗಿಲ ಚಿಲಕ)
ರವಿಕೇಲಿ ಮೊಗ್ರು, ಚಡ್ಡೀಲಿ ಚಿಗ್ರು (ಬದನೆಕಾಯಿ)
ರಾತ್ರೀಹೊತ್ತು ನಿಗ್ರಕತ್ತು, ಬೆಳಿಗ್ಗೆ ಹೊತ್ತು ಮುದ್ರಕತ್ತು (ಚಾಪೆ)
ನೀ ಕೇಳಿದ್ದೆಲ್ಲಾ ಕೋಡ್ತೀನಿ, ನಿನ್ ಕೆಳಗಿರೋದು ಕೋಡ್ತೀಯಾ (ಭೂಮಿ)

ಇತ್ಯಾದಿ ಒಗಟುಗಳು ಮೇಲುನೋಟಕ್ಕೆ ಅಶ್ಲೀಲವಾಗಿ ಕಂಡರೂ ಅತಿ ಸರಳವಾದ, ಸಾಮಾನ್ಯವಾಗಿ ದಿನನಿತ್ಯದ ಅನುಭವದಲ್ಲೇ ಕಾಣಸಿಗುವಚಿಥವುಗಳಾಗಿರುವುದು ಗಮನಾರ್ಹ.

ಮಾರ್ಟಳ್ಳಿಯ ತಮಿಳು ಕ್ರೈಸ್ತರಲ್ಲೂ ಒಗಟುಗಳು ಕಂಡು ಬರುತ್ತವೆ.

1. "ವೇಲಿಕೇತಾಟುಂ ವೆಳ್ಳೆಕುದ್ರೆ" (ಬೂದಿ)
2. ಏಳು ಮಲೈಕ್ಕತ್ತಾಡೆ ಎರುಮೆಕ್ಕೆಡಾ ಸುರುಕ್ಕಡಿಕಿರದು (ಸಿಡಿಲು, ಮಿಂಚು)
3. ಸನ್ನಲ್ ಪಿನ್ನಲ್ ಮ್ಮರಂ
   ಸಾದಿವೇಂಗ ಮ್ಮರಂ
   ಎಣ್ಣೈಕುಡಿಕ್ಕಂ ಮ್ಮರಂ
   ಎರನೂರ ಪೇರೈ ಇಳುಕ್ಕುಂ ಮರಮ (ಬಸ್ಸು)
4. ಮೊಟ್ಟೆ ಮರತ್ತಿಲೆ ಮುನ್ನೂರು ಕಾಕ (ಹಡಗು)
5. ಎಲುಂಬಿಲ್ಲಾದ ಮನುಷ್ಯನ್ ಕನವಿಲ್ಲಾದ ಮರತ್ತಿಲೇರಿಸಾನ್ (ಹೇನು)
6. ಕಂಡು ಪೂಪೂತ್ತು ಕ್ಷಣಾದ ಕಾಯ್ ಕಾಯ್ಕಿದು (ಕಡಲೇಕಾಯಿ)
7. ಸೇತಲೆ ಸೆವಕಾಡೆ (ಈರುಳ್ಳಿ)
8. ಮಣ್ಣಿಲೆ ಮಸರಾಂಡಿ (ಇಲಿ)
9. ಕುಚ್ ಊಟ್ಲೆ ಕೊಮ್ರಿ ಕುದಿಕಿರಾಳ್ (ನಾಲಿಗೆ)
10. ವೇಲಿ ಸುತ್ತಿ ನೀಲಿಪಾಂಬು (ಉಡಿದಾರ)
11. ಪಟ್ಟಣಂ ಕಿಟ್ಟೆ ಇರುಕ್ಕು
    ಎಟ್ಟಿ ಪಾರ್ಕ ನೇರಮಿಲ್ಲೈ (ಬೆನ್ನು)

ಇತ್ಯಾದಿ ಒಗಟುಗಳು ಇವರಲ್ಲಿ ರೂಢಿಯಲ್ಲಿವೆ. ಈ ಒಗಟುಗಳಲ್ಲಿ ಸಾಮಾನ್ಯವಾಗಿ ಇವರ ಜೀವನಾನುಭವವೇ ವ್ಯಕ್ತವಾಗಿದೆ. ಮೊದಲೆರಡು ಒಗಟುಗಳು ದಿನಬೆಳಗಾದರೆ

ಅನುಭವಕ್ಕೆ ನಿಲುಕುವಂಥವುಗಳು. ಹಳ್ಳಿಗಳಲ್ಲಿ ಸೌದೆ ಒಲೆಗಳೇ ಹೆಚ್ಚು. ಬೆಳಗಾದರೆ ಒಲೆಯಲ್ಲಿ ತುಂಬಿರುವ ಬೂದಿಯನ್ನು ತೆಗೆದು ಬೇಲಿಯಿಂದಾಚೆಗೆ ಸುರಿಯುತ್ತಾರೆ. ಅದು ಬೆಳ್ಳನೆ ಧೂಳನ್ನೆಬ್ಬಿಸುವ ಪ್ರತಿಯನ್ನು ಬಿಳಿ ಕುದುರೆಗೆ ಹೋಲಿಸಿರುವುದು ಕಂಡು ಬರುತ್ತದೆ. ಸಿಡಿಲು–ಮಿಂಚನ್ನು ಎಮ್ಮೆ ಅರಚುವಿಕೆಯ ಶಬ್ದಕ್ಕೆ ಹೋಲಿಸಿದಂತಿದೆ. ಮೂರು ಮತ್ತು ನಾಲ್ಕನೆಯ ಒಗಟುಗಳು ವಾಹನಗಳನ್ನು ಕುರಿತವುಗಳಾಗಿವೆ. ಐದನೆಯ ಒಗಟಿನಲ್ಲಿ ಹೇನನ್ನು ಎಲುಬಿಲ್ಲದ ಮುನುಷ್ಯ ಎಂದಿರುವುದು ಸಮರ್ಪಕವಾಗಿದ್ದರೂ ತಲೆಚಿಪ್ಪನ್ನು ಕನಸಿಲ್ಲದ ಮರ ಎಚಿದು ಹೇಳಿರುವುದು ಅಷ್ಟಾಗಿ ಸಮಂಜಸವಾಗಿಲ್ಲವೆನಿಸುತ್ತದೆ. ಆರನೆಯ ಮತ್ತು ಏಳನೆಯ ಒಗಟುಗಳು ಮಣ್ಣಿನೊಳಗೆ ಬೆಳೆಯುವ ವಸ್ತುಗಳಾಗಿವೆ. ಕಡಲೇಕಾಯಿಯ ಸಸ್ಯ ಎಲ್ಲರ ಕಣ್ಣಿಗೆ ಕಾಣಿಸುವಂತೆ ಬೆಳೆದು ಹೂಬಿಡುತ್ತದೆ. ಆದರೆ ಯಾರ ಕಣ್ಣಿಗೂ ಕಾಣಿಸದಂತೆ ನೆಲದೊಳಗೆ ಕಾಯಿಬಿಡುತ್ತದೆ. ಮೈತುಂಬಾ ಕೂದಲುಗಳಿರುವ ಇಲಿ ಮಣ್ಣಿನ ಬಿಲದಲ್ಲಿ ವಾಸಿಸುವುದನ್ನು ಕಂಡು ಎಚಿಟನೆಚಿು ಒಗಟು ಹುಟ್ಟಿಕೊಂಡಿರಬಹುದು. ಏಳನೆಚಿು ಮತ್ತು ಎಂಟನೇಯ ಒಗಟುಗಳಲ್ಲಿ ಪ್ರಾಸಕ್ಕೆ ಪ್ರಾಶಸ್ತ್ಯವಿರುವುದು ಕಂಡು ಬರುತ್ತದೆ.

ಒಂಬತ್ತನೆಯ ಒಗಟು ಅರ್ಥಪೂರ್ಣವಾಗಿದೆ. "ಕೊಮ್ರಿ" ಎಂದರೆ ಹದಿಹರೆಯದ ಹೆಣ್ಣು, ತರುಣಿ ಎಂದು ಅರ್ಥ. ಈ ಪ್ರಾಯದಲ್ಲಿ ಹೆಣ್ಣು ಮಕ್ಕಳಿಗೆ ಎದೆಗಾರಿಕೆ ಹೆಚ್ಚು, ಭವಿಷ್ಯದ ಬಗೆಗೊನ ಯಾವ ಯೋಚನೆಗಳೂ ಇರುವುದಿಲ್ಲ, ತಮ್ಮ ನಿರ್ಧಾರವೇ ಸರಿ ಎಂದು ಎಲ್ಲೆ ಮೀರುವ ವಯಸ್ಸು. ಇಂತಹ ಅವಸ್ಥೆಯಲ್ಲಿನ ಹೆಣ್ಣಿಗೆ ನಾಲಿಗೆಯನ್ನು ಹೋಲಿಸಲಾಗಿದೆ. "ಎಲುಬಿಲ್ಲದ ನಾಲಿಗೆ ಏನು ಬೇಕಾದರೂ ಹೇಳುತ್ತದೆ" ಎಂಬ ಮಾತನ್ನು ಇಲ್ಲಿ ಸ್ಮರಿಸಬಹುದು. "ಕುಚ್ಚಿ ಊಟ್ಲೆ" (ಎಂದರೆ ಕಡ್ಡಿಗಳ ಮನೆ ) ಎಂಬುದು ಹಲ್ಲುಗಳನ್ನೂ ಬಾಯನ್ನೂ ಸೂಚಿಸುತ್ತದೆ.

ಹತ್ತನೆಯ ಒಗಟು ಉಡಿದಾರ ಧರಿಸುವ ಪದ್ದರಿಯನ್ನು ಹೇಳುತ್ತದೆ. "ನೀಲಿಪಾಂಬು" ಎನ್ನುವುದು ಕಪ್ಪುದಾರವನ್ನು ಸ್ರಚಿಸುತ್ತದೆ. ಬೇಲಿಗಳಲ್ಲಿ ಹಾವು ಬಡವರಾದರೂ ಕಪ್ಪುದಾರಲ್ಲಾದರೂ ಉಡಿದಾರ ಕಟ್ಟುವ ಪದ್ಧತಿ ಇವರಲ್ಲಿ ರೂಢಿಯಲ್ಲಿದೆ.

ಹನ್ನೊಂದನೆಯ ಒಗಟು "ನಮ್ ಬೆನ್ನು ನಮ್ಗೆ ಕಾಣ್ಸಲ್ಲ" ಎಂಬ ಗಾದೆಯನ್ನು ಹೋಲುತ್ತದೆ. ಇಲ್ಲಿ "ಸಮಯವಿಲ್ಲ" (ನೇರಮಿಲ್ಲೈ) ಎಂಬ ಪದ ಸೂಕ್ತವಲ್ಲ. ನಮ್ಮ ಬೆನ್ನನ್ನು ನಾವು ನೋಡುವುದು ಸಾಧ್ಯವಿಲ್ಲದಿರುವಾಗ "ಸಮಯವಿಲ್ಲ" ಎಂದು ಹೇಳಿ ತಪ್ಪಿಸಿಕೊಂಡಂತೆ ಆಗುತ್ತದೆ. ಇಲ್ಲೂ ಪ್ರಾಸಕ್ಕೆ ಪ್ರಾಧಾನ್ಯತೆ ಇರುವುದು ಕಂಡು ಬರುತ್ತದೆ.

ಒಟ್ಟಿನಲ್ಲಿ ಕರ್ನಾಟಕ ಕ್ರೈಸ್ತರಲ್ಲಿ ಪ್ರಚಲಿತವಿರುವ ಕಥೆ, ಗೀತೆಗಳನ್ನೇ ಪ್ರಮುಖವಾಗಿ ಲಕ್ಷ್ಯದಲ್ಲಿಟ್ಟುಕೊಂಡು ಕ್ರೈಸ್ತರ ಜನಪದ ಸಂಪ್ರದಾಯಗಳ ವೈಶಿಷ್ಟ್ಯವನ್ನು ಗುರುತಿಸಲಾಗಿದೆ. ವಾಕ್ಪರಂಪರೆಯಲ್ಲಿ ರೂಢಿಯಲ್ಲಿರುವ ಇವರ ಈ ಸಾಹಿತ್ಯ ಪ್ರಕಾರಗಳಲ್ಲಿ ಇವರ ಜೀವನ ಮತ್ತು ಸಂಸ್ಕೃತಿ ಹೇಗೆ ವ್ಯಕ್ತಗೊಂಡಿದೆ ಎಂಬುದನ್ನು ನೋಡಲಾಗಿದೆ.

## ಅಡಿ ಟಿಪ್ಪಣಿಗಳು

1. ಪರಧರ್ಮವನ್ನು Page 264 See and Type.
2. ವಕ್ತೃ : ಸುನೀಲ್ ಸಿದ್ದಿ, ಶಿಕ್ಷಕ ವಯಸ್ಸು 30, ಮುಂಡಗೋಡ.
3. ಪಾ// ದಯಾನಂದ ಪ್ರಭು-ಪ್ರವಚನ.
4. ವಕ್ತೃ : ಲೂಸಿಯಾನ್ ಸಿದ್ದಿ, ವಯಸ್ಸು 50, ಕಿರುವತ್ತಿ.
5. ವಕ್ತೃ : ರೀತಮ್ಮ ವಯಸ್ಸು , 70 ಗಾಂಧೀನಗರ ಮೈಸೂರು.
6. ವಕ್ತೃ : ಉತ್ತ್ರೀಯ ಮರಿಯಮ್ಮ ವಯಸ್ಸು 75, ಕ್ಯಾತಮಾರನಹಳ್ಳಿ ಮೈಸೂರು.
7. ವಕ್ತೃ : ಹೆಲೆನ್ ವಯಸ್ಸು 60, ಮೈಸೂರು.
8. ವಕ್ತೃ : ಆರೋಗ್ಯ ಮರಿಯಮ್ಮ ವಯಸ್ಸು 75, ಮೈಸೂರು.
9. ಪದ್ಮಾವತಿ ಸೂಳೆಯ ಕಥೆಯ ಪೂರ್ಣ ಪಾಠವನ್ನು ಅನುಬಂಧದಲ್ಲಿ ನೋಡಿ.
10. ವಕ್ತೃ : ರಾಜೇಂದ್ರ ವಯಸ್ಸು 43, ಶಾಂತಿಪುರ.
11. ವಕ್ತೃ : ಅಂತೋಣಪ್ಪ, ವಯಸ್ಸು 52, ಕೂಡಲೂರು.
12. ವಕ್ತೃ : ಪಾಲಳ್ಳಿ ಪಾಪಣ್ಣ, ವಯಸ್ಸು ೬೮, ಕೂಡಲೂರು.
13. ವಕ್ತೃ : ಸೈಮನ್ ವಯಸ್ಸು ೬೫, ನವಚೇರಿ ಮೈಸೂರು.
14. ವಕ್ತೃ : ಮರಿಯಪ್ಪ ಎಲ್.ಐ.ಸಿ. ವಯಸ್ಸು ೪೦, ಡೋರ್ನಹಳ್ಳಿ.
15. ವಕ್ತೆ : ಗ್ರೇಸಿ ಸಿದ್ದಿ ವಯಸ್ಸು ೬೮, ಗಂಜಿಗೇರಿ ಮುಂಡಗೋಡ.
16. ವಕ್ತೃ : ರಿರ್ಚಡ್ ಗೋನ್ಸಾಲ್ವೀಸ್ ವಯಸ್ಸು ೬೦, ಬೆಳ್ತಂಗಂಡಿ.
17. ವಕ್ತೃ : ಲೂಯಿಸ್ ಕೊಲೊಸೊ, ವಯಸ್ಸು ೬೨, ಮೈಸೂರು.

# ಅಧ್ಯಾಯ – ಎಂಟು

**ಕರ್ನಾಟಕದ ಕ್ರೈಸ್ತ ಬುಡಕಟ್ಟುಗಳ ಇಂದಿನ ಸಮಸ್ಯೆ ಮತ್ತು ಮುಂದಿರುವ ಸವಾಲುಗಳು**

ಈ ಅಧ್ಯಾಯದಲ್ಲಿ ಬುಡಕಟ್ಟು ಕ್ರೈಸ್ತರ ಸಮಸ್ಯೆ ಮತ್ತು ಅವರ ಮುಂದಿರುವ ಸವಾಲುಗಳ ಬಗ್ಗೆ ಚರ್ಚಿಸಲಾಗಿದೆ. ಪ್ರಸಕ್ತ ಕರ್ನಾಟಕದ ಸಂದರ್ಭದಲ್ಲಿ ಕೆಲವು ಸಂಗತಿಯನ್ನು ಚರ್ಚೆಗೆ ತೆಗೆದುಕೊಳ್ಳುವುದೇ ಆದರೆ ಇಲ್ಲಿನ ಕ್ರೈಸ್ತ ಬುಡಕಟ್ಟು ಸಮುದಾಯಗಳನ್ನು ಪ್ರಧಾನವಾಗಿ ನೆಲೆವಾಸಿ (ಖಾಯಂವಾಸಿಗಳು) ಗಳಲ್ಲಿ ಅರಣ್ಯವಾಸಿಗಳು ಮತ್ತು ನಾಡವಾಸಿಗಳು ಬೇರೆಯಾಗುತ್ತಾರೆ .ಅರಣ್ಯವಾಸಿಗಳಲ್ಲಿ ಕೃಷಿಯನ್ನು ಅವಲಂಬಿಸಿದರು ಕೆಲವರಿದ್ದಾರೆ, ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಿ ಕೆಲವನ್ನು ಆಹಾರಕ್ಕೆ ಬಳಸಿ ಇನ್ನೂ ಕೆಲವನ್ನೂ ಮಾರಾಟ ಮಾಡಿ ಬದುಕುವವರು ಇದ್ದಾರೆ.ನಾಡವಾಸಿಗ ಳಲ್ಲಿ ಇಂದಿಗೂ ಪಾರಂಪರಿಕ ಕಸುಬನ್ನು ಅವಲಂಬಿಸಿದರು. ಹಾಗೂ ಪರ್ಯಾಯ ಕಸುಬಿನಲ್ಲಿ ತೊಡಗಿ ಸಿಕೊಂಡವರು ಇದ್ದಾರೆ. ಭೂರಹಿತರು ಭೂಮಿ ಉಳ್ಳವರು ಅಲ್ಲದೆ ಪರ್ಯಾಯ ಕಸುಬುಗಳಾದ ವ್ಯಾಪಾರ ಅಥವಾ ಕೂಲಿ ಮಾಡಿ ಬದುಕುತ್ತಿದ್ದಾರೆ. ಇಷ್ಟೊಂದು ವೈವಿಧ್ಯಮಯವಾದ ಕ್ರೈಸ್ತಬುಡಕಟ್ಟುಗಳು ಅವರು ಬದುಕಿಗಾಗಿ ಅವಲಂಬಿಸಿರುವ ನಾನಾ ವಿಧವಾದ ಕುಲಕಸುಬು ಹಾಗ ೂ, ಪರ್ಯಾಯ ಕಸುಬು ಇವುಗಳಾವುವು ಅವರ ಬದುಕಿನಲ್ಲಿ ಸುಖ ನೀಡುತ್ತಿಲ್ಲ. ನೆಮ್ಮದಿಯಂತು ಮೊದಲೇ ಇಲ್ಲ. ಇಂತಹ ಸ್ಥಿತಿಯಲ್ಲಿ ಈ ಬುಡಕಟ್ಟುಗಳಿಗೆ ಯಾವ ಯಾವ ಮಾದರಿಯ ಯೋಜನೆಗಳು ಅಗತ್ಯವೆಂಬುದನ್ನು ಕೇವಲ ಊಹಿಸುವುದರ ಮೂಲಕ ರೂಪಿಸುವುದು ಸರಿಯಾದ ಕ್ರಮವಲ್ಲ. ಆಗ ಪ್ರತಿ ಬುಡಕಟ್ಟಿನ ಪ್ರತ್ಯೇಕ ಸಮೀಕ್ಷೆ ಅಥವಾ ಅಧ್ಯಯನವು ಈ ಕೊರತೆಯನ್ನು ನೀಗಿ ಸುವುದಕ್ಕೆ ಇರುವ ಏಕೈಕ ಸಾಧನವಾಗಿದೆ . ಈ ಹಿನ್ನಲೆಯಲ್ಲಿ ಪ್ರಾದೇಶಿಕ ಪರಿಶಿಷ್ಟ ಪಂಗಡಗಳ ಕಲ್ಯಾಣ ನಿರ್ದೇಶನಾಲಯಗಳ ಆರಂಭ ಬಹಳ ಮಹತ್ವವಾದ ಪಾತ್ರವಹಿಸಬೇಕಾಗಿದೆ.ಈಗಾಗಲೇ ರಾಜ್ಯಾದಾದ್ಯಂತ ಬುಡಕಟ್ಟು ಸಮುದಾಯಗಳಲ್ಲಿ ಜಾಗೃತಿ ಮೂಡಿಸುವುದಕ್ಕೆ ಸಂಬಂಧಿಸಿದ ಹತ್ತು ಹಲವಾರು ಉಪಯುಕ್ತ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗಿದ್ದು, ಆನಿಟ್ಟಿನಲ್ಲಿ ಒಂದು ಹೆಜ್ಜೆ ಮುಂದಿದೆ ಎಂದು ಹೇಳಿದರು ತಪ್ಪಾಗಲಾರದು.

ಈ ಅಧ್ಯಯನದ ಸಲುವಾಗಿ ಹಲವಾರು ಕ್ರೈಸ್ತ ಬುಡಕಟ್ಟು ಸಮುದಾಯಗಳನ್ನು ಖುದ್ದು ಭೇಟಿಯಾದ ಸಂದರ್ಭದಲ್ಲಿ ಆ ಸಮುದಾಯಗಳ ಹತ್ತಿರದಿಂದ ಗಮನಿಸಿದಾಗ ಎಷ್ಟೊಂದು ವೈವಿಧ್ಯತೆಯಿಂದ ಕೂಡಿದ ಬದುಕು ಇವರದು ಎಂಬುದನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಯಿತು. ಮೇಲ್ನೋಟಕ್ಕೆ ಎಲ್ಲರೂ ಬುಡಕಟ್ಟು ಸಮುದಾಯಗಳೇ, ಆದರೆ ಕಸುಬುಗಳ ಹಿನ್ನೆಲೆ, ಭಾಷೆಯ ಹಿನ್ನೆಲೆ, ಭೌಗೋಳಿಕ ಹಿನ್ನೆಲೆ ಮತ್ತು ಸಾಮಾಜಿಕ ಹಿನ್ನೆಲೆಯಲ್ಲಿ ಒಂದೊಂದುಭಿನ್ನ ಮತ್ತು ವಿಶಿಷ್ಟ ,ಆದ್ದರಿಂದ ಅವರಿಗೆ ಅಭಿವೃದ್ದಿಯ ಹೆಸರಿನಲ್ಲಿ ಯೋಜನೆಗಳನ್ನು ಹೇರುವ ಬದಲು , ಅವರಿಗೆ ಹೊಂದುವ ರೀತಿಯಲ್ಲಿ ಅಧ್ಯಯನ ನೆಡೆಸುವುದು ಸೂಕ್ತವಾದುದು ಎನಿಸಿತು.ನಮ್ಮೆಲ್ಲರಿಗೂ ಪರಿಚಯವಿರುವ ಈ ಸಮಾಜವು ಸಾಮಾಜಿಕ ಅಸಮತೋಲನದಿಂದ ಕೂಡಿದ್ದು ಮನುಷ್ಯ ಮನುಷ್ಯರ ನಡುವೆ ಅಗಾಧವಾದ ಅಂತರವಿರುವುದನ್ನು ಕಾಣುತ್ತೇವೆ. ಪರಿಸ್ಥಿತಿ ಇಂತಿರುವಾಗ ಸಾವಿರಾರು ವರುಷಗಳಿಂದ ನಾಡಿನ ಸಹವಾಸಕ್ಕೆ ಬಾರದೆ ಬುಡಕಟ್ಟುಗಳು ಏಕಾಏಕಿ ಆಧುನಿಕರ ಜೊತೆ ಬೆರೆಯುವುದಕ್ಕೆ ಮುಜುಗರ ಪಡುತ್ತಾರೆ . ಆದ್ದರಿಂದ ಈ ಸಮುದಾಯಗಳ ಅಭಿವೃದ್ದಿ ನಿಜವಾದ ಅರ್ಥದಲ್ಲಿ ಆಗಬೇಕಾದರೆ ಅವರು ಇರುವಲ್ಲೇ ಹೋಗಿಸೌಲಭ್ಯಗಳನ್ನು ಹಂಚಬೇಕು.

ಕ್ರೈಸ್ತ ಬುಡಕಟ್ಟಗಳ ಸ್ವಭಾವ ಬಹಳ ಸೂಕ್ಷ್ಮ ಹಾಗೂ ಸ್ವಾಭಿಮಾನದಿಂದ ಕೂಡಿದೆ. ಆದ್ದರಿಂದ ಅವರಿಚ್ಚೆಗೆ ಬಿಟ್ಟರೆ ಹೇಗಾದರು ಬದುಕನ್ನು ನಿರ್ವಹಿಸಬಲ್ಲರು. ಆದರೆ ನಾನಾ ಕಾಯಿದೆಗಳ ಅನ್ವಯ ಅವರಿಗೆ ನಿರ್ಬಂಧಗಳನ್ನು ಹೇರಿದರೆ ಅವರಿಗೆ ಅದೊಂದು ಪರಿಗಣಿಸುತ್ತದೆಯೇ ಹೊರತು ಸೌಲಭ್ಯವೆಂದು ಭಾವಿಸುವುದು ಸಾಧ್ಯವೇ ಇಲ್ಲ. ಜೊತೆಗೆ ಎಂಥದ್ದೇ ಪರಿಸ್ಥಿತಿಯಲ್ಲು ಅವರು ತಮಗೆ ಒದಗಿ ಬರುವ ತೊಂದರೆಯನ್ನು ಸಹಿಸಿಕೊಳ್ಳಬಲ್ಲರು ಅಥವಾ ಅದರಿಂದ ಪಾರಾಗಬಲ್ಲರು ಆದರೆ ಯಾವುದೇ ಕಾರಣಕ್ಕೂ ಸಂಘರ್ಷಕ್ಕೆ ಇಳಿಯುವುದಿಲ್ಲ. ಏಕೆಂದರೆ ಅವರು ಕಾಡಿನಲ್ಲಿ ಕಲಿತಿರುವ ಪಾಠ ಅದಾಗಿದೆ. ಬಲಿಷ್ಟವಾ ಪ್ರಾಣಿಯನ್ನು ಕಂಡ ಮತ್ತೊಂದು ದುರ್ಬಲ ಪ್ರಾಣಿ ಅಲ್ಲಿಂದ ಕಣ್ಮರೆಯಾಗುವುದೇ ಹೊರತು ಅದರ ವಿರುದ್ದ ಹೋರಾಟಕ್ಕೆ ಇಳಿಯುವುದಿಲ್ಲ ಅದೇ ಅದರ ಜಾಣತನ. ಅದರಿಂದ ಎಲ್ಲವೂ ಕ್ಷೇಮ ಎಂಬುದು ಪ್ರಾಣಿಗಳಿಗೂ ತಿಳಿದ ಸಂಗತಿ, ಅವುಗಳ ಒಡನಾಟದಲ್ಲಿದ್ದ ಅರಣ್ಯವಾಸಿ ಕ್ರೈಸ್ತ ಬುಡಕಟ್ಟುಗಳ ತಾಳ್ಮೆಯ ಬದುಕು ಯಾರಿಗಾದರೂ ಮಾದರಿಯಾಗಬಲ್ಲದು.

"ಕೋಶ ಓದು ಇಲ್ಲವೇ ದೇಶ ಸುತ್ತು"ಎಂಬುದು ನಾವು ಆಗಾಗ್ಗೆ ಬಳಸುವ ಗಾದೆ.ಈ ಕ್ರೈಸ್ತ ಬುಡಕಟ್ಟುಗಳು ಹಲವಾರು ಭಾಷೆ ಕಲಿಯುವುದು,ಹಲವಾರು ಧರ್ಮ,ಜಾತಿ ಜನರ ಜೊತೆ ಬೆರೆಯುವುದು ಮತ್ತು ನೋಡುವುದರ ಮೂಲಕ ಮನುಷ್ಯರಾಗಿ ಬದುಕುವುದನ್ನು ಕಲಿಯುತ್ತಾರೆ.ಸದಾ ಕಲಿಯುತ್ತಲೇ ಇದ್ದಾ.ಮೂಕ ಪ್ರಾಣಿ ಪಕ್ಷಿಗಳೇ ಗುರುಗಳು,ಪ್ರಕೃತಿಯೇ ಪಾಠಶಾಲೆ ಇಡೀ ಸಮಾಜವೇ ಪ್ರಯೋಗಶಾಲೆ , ಭೂಮಿಯೇ ಹಾಸಿಗೆ, ಆಕಾಶವೇ ಹೊದಿಕೆ ಎಂಬ ಅಘೋಷಿತ ನಿಯಮದ ಅಡಿಯಲ್ಲಿ ಮನುಷ್ಯರಾಗಿ ಬದುಕುತ್ತಿದ್ದಾರೆ. ಹಾಗೂ ' ಮನುಷ್ಯರಾಗಿ ಬದುಕಿ' ಎಂಬ ಸಂದೇಶವನ್ನು ಜಗತ್ತಿಗೆ ಸಾರುತ್ತಿದ್ದಾರೆ.

ಆದ್ದರಿಂದ ಕಾಡಿನ ಮಕ್ಕಳು, ಮುಗ್ಧ ಮನಸ್ಸುಳ್ಳವರು, ಮುಕ್ತ ಬದುಕನ್ನು ಬದುಕಿದವರು ಮನುಷ್ಯತ್ವವನ್ನು ಮೆರೆದವರು ಇಂದು ಸಂಕ್ರಮಣ ಸ್ಥಿತಿಯಲ್ಲಿ ಇದ್ದಾರೆ. ಅವರಿಗೆ ವ್ಯವಸ್ಥಿತವಾದ

ಬದುಕನ್ನು ರೂಪಿಸಿಕೊಳ್ಳಲು ಆಧುನಿಕ ಸಮಾಜ ಎಲ್ಲಾ ರೀತಿಯ ಸಹಾಯ, ಸಹಕಾರ ನೀಡಬೇಕು ಜೊತೆಗೆ ಅವರಿಗೆ ಅಭಿವೃದ್ಧಿ ಯೋಜನೆಗಳನ್ನು ತಲುಪಿಸುವ ಅಧಿಕಾರಿಗಳು, ಯಾವುದೇ ರೀತಿಯ ಚೌಕಾಸಿಗೂ, ಮುಲಾಜಿಗೂ ದಾರಿ ಮಾಡಿಕೊಡದೆ ಪೂರ್ಣ ಪ್ರಮಾಣದ ಆಸಕ್ತಿಯನ್ನುವಹಿಸಿ ಉದ್ಧರಿಸಬೇಕಾಗಿದೆ. ಬಹಳಷ್ಟು ಸಂದರ್ಭದಲ್ಲಿ ಉದ್ದೇಶಿತ ಸಮೀಕ್ಷೆ ಹಾಗೂ ಅಧ್ಯಯನ ವರದಿಗಳು ಕೇವಲ ವರದಿಗಳಾಗಿಯೇ ಉಳಿಯದೇ ಪುಸ್ತಕ ರೂಪದಲ್ಲಿ ಬರುವುದರ ಮೂಲಕ ಅವುಗಳ ಬಗೆಗೆ ಕ್ರೈಸ್ತ ಬುಡಕಟ್ಟು ಪ್ರತಿನಿದಿಗಳನ್ನು ಒಳಗೊಂಡಂತೆ ಸಾರ್ವಜನಿಕ ಚರ್ಚೆಗೆ ಅವಕಾಶ ಮಾಡಿಕೊಡುವುದು ಹೆಚ್ಚು ಉಪಯುಕ್ತ, ಸಾಧ್ಯವಾದರೆ ಮುಂದೆ ಇಂತಹ ಯೋಜನೆಗಳನ್ನು ಹಮ್ಮಿಕೊಳ್ಳುವಾಗ ವಿದ್ವಾಂಸರ ಜೊತೆಯಲ್ಲಿ ಅವರು ಅಧ್ಯಯನಕ್ಕೆ ಸಲ್ಲಿಸಿರುವ ಯೋಜನೆಯನ್ನು ಗಮನಿಸಿ ಆಯಾ ಸಮುದಾಯದ ಓರ್ವ ವಿದ್ಯಾವಂತ ಪ್ರತಿನಿಧಿಯನ್ನು ಕಡ್ಡಾಯವಾಗಿ ಒಳಗ ುಮಾಡಿಕೊಳ್ಳುವುದು ಒಳ್ಳೆಯದು. ಇದರಿಂದ ಅಧ್ಯಯನ ದಾರಿ ತಪ್ಪುವುದಿಲ್ಲ. ಅಪೂರ್ಣ ಅಥವಾ ಅಸಂಗತ ವಿಚಾರಗಳು ಸುಳಿಯುವುದಿಲ್ಲ. ಹಾಗೂ ಸಮುದಾಯದ ಪ್ರತಿನಿಧಿಯನ್ನು ಜೊತೆಗೂಡಿಸಿದಾಗ ವಿದ್ವಾಂಸರಿಗೆ ಹೆಚ್ಚು ಲಾಭವಾಗುವುದಲ್ಲದೇ ಅವರಲ್ಲಿ ಒಬ್ಬನನ್ನಾಗಿ ಗೌರವಿಸುತ್ತಾರೆ. ಮುಂದಿನ ಕೆಲಸ ಸರಳವಾಗಿ ಮುಗಿಯುತ್ತದೆ.

ಮುಂದುವರಿದು ಸಮುದಾಯದ ಒಳಗೆ ವಿದ್ಯಾವಂತರನ್ನು ಆಯ್ಕೆ ಮಾಡಿ ಅವರಿಗೆ ತರಬೇತಿಯನ್ನು ನೀಡುವ ಮೂಲಕ ಬರಹವನ್ನು ಮಾಡುವಂತೆ ಪ್ರೋತ್ಸಾಹ ನೀಡಬೇಕಾಗಿದೆ. ಇದರಿಂದ ತಮ್ಮ ಅನುಭವದ ನೋವು-ನಲಿವು, ಜೀವನದ ಎಲ್ಲಾ ಸಂಗತಿಗಳನ್ನು ಸತ್ಯಕ್ಕೆ ಹತ್ತಿರವಾಗಿ ಮಾಹಿತಿ ಮಾಡಿಕೊಡಬಲ್ಲರು.

ಅದೇ ಮೇರೆಗೆ ಕರ್ನಾಟಕದ ಕ್ರೈಸ್ತ ಬುಡಕಟ್ಟು ಸಮುದಾಯವನ್ನು ಹಾಗೂ ಅವರ ಅಸ್ತಿತ್ವವನ್ನು ಗ್ರಹಿಸಲು ಅವರೊಂದಿಗೆ ಬೆರೆತಾಗ ಅವರ ಮನಸ್ಸು ಅರಿಯಲು ಸಾಧ್ಯ. ಜೀವನವನ್ನು ಅದರಲ್ಲಿನ ಮನುಷ್ಯರನ್ನು ಕಾಣುವ ಕಣ್ಣು ಬಹು ಸೂಕ್ಷ್ಮವಾದಷ್ಟೇ, ಇಂತಹ ಪರಿಸ್ಥಿತಿಯಲ್ಲಿ ಮನುಷ್ಯ ಮನುಷ್ಯನನ್ನು ಅಮೂರ್ತವಾಗಿ ನೋಡುವ ಬದಲು ನೆಲೆಕ್ಕಂಟಿದ ಬದುಕಿನ ಹಿನ್ನಲೆಯಲ್ಲಿ ನೋಡುವ ವಿಭಿನ್ನ ಬಗೆ ಈ ಅಧ್ಯಯನಕ್ಕೆ ಶಕ್ತಿ ತಂದುಕೊಟ್ಟಿದೆ.

ಕ್ರೈಸ್ತ ಸಿದ್ದಿಯರನ್ನು ಅವರ ಶರೀರ, ಬುದ್ಧಿ ಮತ್ತು ಮನಸ್ಸಿನಿಂದ ಗುರುತಿಸಬಹುದು. ಇವರ ಮೂರು, ಐದು, ಏಳು, ಹಿಂದಣ ವಂಶಸ್ಥರು ಜೀವಿಸಿದ್ದ ಪ್ರದೇಶದ ಪ್ರಭಾವದಿಂದ ಗಳಿಸಿದ್ದ ಶರೀರ ಆಕಾರ, ಬುದ್ಧಿಮತ್ತೆ, ಸಹಚರರೊಂದಿಗೆ ನಡೆದುಕೊಳ್ಳುತ್ತಿದ್ದ ರೀತಿಯ ಮನಕಿ ಸ್ಥಿತಿ, ಇವು ಒಟ್ಟಾಗಿ ಬುಡಕಟ್ಟು ಸಮುದಾಯ ಮತ್ತು ಇತರ ಮಾನವರಲ್ಲಿ ನಾವು ಕಾಣುತ್ತೇವೆ.

### ೨೦೦೧ ರ ಜನಗಣತಯಂತೆ ಸಿದ್ದಿಯರ ಒಟ್ಟು ಜನಸಂಖ್ಯೆ

| ಕ್ರ. ಸಂ. | ತಾಲ್ಲೂಕು | ಒಟ್ಟು ಜನಸಂಖ್ಯೆ | ಪುರುಷ | ಮಹಿಳೆ |
|---|---|---|---|---|
| ೧. | ಅಂಕೋಲ | ೫೮೭ | ೨೯೫ | ೨೯೨ |

| | | | | |
|---|---|---|---|---|
| ೨. | ಹಳಿಯಾಳ | ೨೨೮೦ | ೧೧೪೨ | ೧೧೩೭ |
| ೩. | ಮುಂಡಗೋಡ | ೪೯೯ | ೨೬೩ | ೨೩೬ |
| ೪. | ಶಿರಸಿ | ೬೮ | ೩೩ | ೩೫ |
| ೫. | ಸೂಪ | ೩೩ | ೧೬ | ೧೭ |
| ೬. | ಯಲ್ಲಾಪುರ | ೧೮೯೪ | ೯೮೭ | ೯೦೭ |
| | ಒಟ್ಟು ಜನಸಂಖ್ಯೆ | ೫೩೬೧ | ೨೭೩೭ | ೨೬೨೪ |

**ಆಚರಣೆಗಳು** ಸಿದ್ದಿಯರಲ್ಲಿ ಮೂರು ಪ್ರಮುಖ ಧರ್ಮಗಳಿವೆ. ಆದರೆ ಈ ಮೂರು ಧರ್ಮಗಳೂ ಆಫ್ರಿಕಾದ ಬುಡಕಟ್ಟು ಜನಾಂಗಗಳ ಮೂಲ ಧರ್ಮವಂತೂ ಅಲ್ಲ. ಮೊದಲಿಗೆ ಆಫ್ರಿಕಾದ ಬುಡಕಟ್ಟು ಸಂಸ್ಕೃತಿಯ ಮೇಲೆ ಬರ್ಬರ ದಾಳಿ ಮಾಡಿದ ಅರಬ್ಬರನ್ನು ಒಪ್ಪಿಕೊಂಡ ಅನಿವಾರ್ಯ ಕಾರಣಕ್ಕಾಗಿ ಅವರನ್ನೇ ಅನುಸರಿಸಿದ ಇಸ್ಲಾಂ ಧರ್ಮ, ಇವರನ್ನು ವ್ಯಾಪಾರದ ಸರಕನ್ನಾಗಿ ಪರಿವರ್ತಿಸಿದ್ದಲ್ಲದೆ, ಮತಾಂತರದ ಮಹದೋದ್ದೇಶದಿಂದ ಧರ್ಮದ ಹೇಳಿಕೆಯನ್ನು ಸಾಧಿಸಿದ ಪೋರ್ಚುಗೀಸರ ಅಭಿಲಾಷೆಗೆ ಅನುಸಾರವಾಗಿ ಬಂದ ಕ್ರಿಶ್ಚಯನ್ ಧರ್ಮ ಗೋವಾದಿಂದ ವಲಸೆ ಬಂದ ಅನಂತರ ನೆಲೆ ನಿಲ್ಲಬೇಕಾದ ಸ್ಥಳದಲ್ಲಿ ಇದ್ದ ಧರ್ಮವನ್ನು ಅಪ್ಪಿಕೊಳ್ಳಬೇಕಾದ ಪೇಚಿಗೆ ಸಿಕ್ಕಿ ಸ್ವೀಕರಿಸಬಹುದಾದ ಹಿಂದೂ ಧರ್ಮ ಮೇಲಿನ ಹೇಳಿಕೆಯು ಸಿದ್ದಿಯರು ಹೇಗೆ ಮೂರು ಧರ್ಮಗಳನ್ನು ಅವಲಂಬಿಸಬೇಕಾಯಿತು ಎಂಬ ಸಂಗತಿಯನ್ನು ಸಮರ್ಪಕವಾಗಿ ಸ್ಪಷ್ಟಪಡಿಸಿದ್ದಾರೆ.

ಒಟ್ಟಾರೆ ಸಿದ್ದಿಯರು ಮೂರು ಧರ್ಮಗಳಲ್ಲಿ ಹಂಚಿಹೋಗಿ ಪ್ರಸ್ತುತ ಅವುಗಳನ್ನು ಆಚರಿಸುತ್ತಿದ್ದಾರೆ ಎಂಬುದು ವಾಸ್ತವವಾದರೂ ಮುಸ್ಲಿಂ ಮತ್ತು ಕ್ರೈಸ್ತಧರ್ಮಗಳು ವಿಶ್ವದಾದ್ಯಂತ ಒಂದೇ ತೆರನಾದ ಆಚರಣೆಯಿದೆ. ಆದರೆ ಹಿಂದೂ ಸಿದ್ದಿಗಳು ರೂಢಿಸಿಕೊಂಡಿರುವ ಆಚರಣೆಗಳು ಯಾವ ಹಿಂದೂ ಧರ್ಮದ್ದು ಎಂಬ ಪ್ರಶ್ನೆ ಹುಟ್ಟಿಕೊಳ್ಳುತ್ತದೆ. ಆದರೆ ಇದಕ್ಕೆ ಉತ್ತರವೂ ಸರಳವಾಗಿಯೇ ಇದೆ. ಅವಿನಾರ್ಯವಾಗಿ ಗೋವಾದಿಂದ ಕರ್ನಾಟಕಕ್ಕೆ (ಉತ್ತರ ಕನ್ನಡ) ವಲಸೆ ಬಂದ ಸಿದ್ದಿಯರು ತಮ್ಮ ವಾಸ್ತವ್ಯಕ್ಕಾಗಿ ಆಶ್ರಯಿಸಿದ ಪ್ರದೇಶ ಮತ್ತು ಜನವರ್ಗವನ್ನು ಅವಲಂಬಿಸಿದೆ. ಆಗ ಭೂಮಾಲೀಕರಾಗಿದ್ದ ಹವ್ಯಕ ಬ್ರಾಹ್ಮಣರ ಬಳಿ ಕೃಷಿ ಕೂಲಿಗಳಾಗಿದ್ದರಿಂದ ಸಹಜವಾಗಿ ಕೆಲವು ಆಚರಣೆಗಳನ್ನು ಅವರಿಗೆ ಬೇಕಿತ್ತೋ ಬೇಡವೋ

ಅದು ಮುಖ್ಯವಾಗಿದ್ದಿಲ್ಲ. ಒಟ್ಟಾರೆ ಸಮಾಜದಲ್ಲಿ ಬಹುಸಂಖ್ಯಾತ ಜನರು ಅಥವಾ ಪ್ರಭಾವಿ ಜನರು ಯಾವ ಆಚರಣೆಯನ್ನು ಮಾಡುತ್ತಿದ್ದರೋ, ಯಾವುದನ್ನು ತಾವು ಬಹಳ ಸಮೀಪದಿಂದ ಗಮನಿಸುತ್ತಿದ್ದರೋ ಅಂತಹ ಆಚರಣೆಗಳನ್ನು ರೂಢಿಸಿಕೊಂಡ ಕಾರಣ ಅವುಗಳನ್ನು ಇಂದಿಗೂ ಮುಂದುವರಿಸುತ್ತಿರುವುದು ಕಾಣಬರುತ್ತದೆ. ಅವುಗಳಲ್ಲಿ ಕೆಲವು ಉದಾಹರಣೆಗಳೆಂದರೆ ಗೌರಿಗಣೇಶ ಹಬ್ಬ, ಅಳಿಯನ ಅಮಾವಾಸ್ಯೆ ನವರಾತ್ರಿ ಮತ್ತು ತುಳಸಿಪೂಜೆ ಮುಖ್ಯವಾದವು.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ ವೈದಿಕರ ಪ್ರಭಾವ ಸಿದ್ದಿಯರ ಮೇಲೆ ಆಗಿದೆ ಎಂಬುದು ಸ್ಪಷ್ಟವಾಗುತ್ತದೆ. ಅವರು ಬಳಸುವ ಜನಪದ ವಾದ್ಯಗಳನ್ನು ಗಮನಿಸಿದಾಗ ಸ್ಥಳೀಯ ಸಾಮಾನ್ಯರು ಇವರ ಮೇಲೆ ಪ್ರಭಾವ ಬೀರಿದ್ದಾರೆ. ಸಿದ್ದಿಯರು ಪೂಜಿಸುವ 'ಜಟ್ಟಿಗ' ಎಂಬುದು ಈ ಭಾಗದ ಗೊಂಡರು, ಹಾಲಕ್ಕಿಒಕ್ಕಲಿಗ ಕೃಷಿಗೆ ಸಂಬಂಧಿಸಿದ ಬುಡಕಟ್ಟು ದೇವತೆ. ಬೆಳೆಯನ್ನು ರಕ್ಷಿಸುವ ಈ ಜಟ್ಟಿಗ ದೇವತೆಗಳು ಸಿದ್ದಿಯರಿಗೆ ಅಗತ್ಯವಿಲ್ಲ. ಏಕೆಂದರೆ ಇವರಿಗೆ ಸ್ವಂತ ಭೂಮಿಯು ಇದ್ದಿಲ್ಲ ಹಾಗೂ ಬೆಳೆಯನ್ನು ರಕ್ಷಿಸಿಕೊಳ್ಳಬೇಕಾದ ಪ್ರಮೇಯವೇ ಇದ್ದಿಲ್ಲ. ಆದರೆ ಇವರು ಕಾಡಲ್ಲಿ ಇದ್ದುದರಿಂದ ಕ್ರೂರ ಪ್ರಾಣಿಗಳ ರಕ್ಷಣೆಯ ದೃಷ್ಟಿಯಿಂದ "ಜಟ್ಟಿಗ" ನನ್ನು ಪೂಜಿಸಲು ಆರಂಭಿಸಿರುವ ಸಾಧ್ಯತೆ ಇದೆ. ಏಕೆಂದರೆ ಮಾನವನಿಗೆ ತನ್ನ ಶಕ್ತಿಗಿಂತ ಆಗೋಚರವಾದ ಶಕ್ತಿಯನ್ನೇ ಹೆಚ್ಚು ನಂಬುವುದು ಆ ಮೂಲಕ ಮಾನಸಿಕ ನೆಮ್ಮದಿಯನ್ನು ಪಡೆಯುವುದು ಸಾಮಾನ್ಯ ಸಂಗತಿಯಾಗಿದೆ. ಹಾಗೆಯೇ ಜೈನರ ಪ್ರಭಾವವು ಇವರ ಮೇಲೆ ಆಗಿದೆ ಎಂಬುದಕ್ಕೆ ಹಿ.ಚಿ.ಬೋರಲಿಂಗಯ್ಯ ಅವರು ತಮ್ಮ ಕೃತಿಯಲ್ಲಿ ಒಂದು ಉದಾಹರಣೆಯನ್ನು ನೀಡಿದ್ದಾರೆ. "ಜೈನರು ಸಿದ್ದಿ ಬಾಲಕನೋರ್ವನಿಗೆ ಆಪ್ತನನ್ನಾಗಿ ಮಾಡಿಕೊಂಡು ಬೆಳೆಸಿದರಂತೆ, ಆದರೆ ಅವನು ಕದ್ದು ಮಾಂಸ ತಿನ್ನಲು ಆರಂಭಿಸಿದನಂತೆ. ಇದನ್ನು ಸಹಿಸಲಾರದ ಜೈನರು ಅವನನ್ನು ಜೀವಂತವಾಗಿ ಸಮಾಧಿ ಮಾಡಿದರಂತೆ (ಜೈನಸಂಪ್ರದಾಯದಂತೆ ಬಹುಶಃ ಸಲ್ಲೇಖನ ವ್ರತಕ್ಕೆ ಈಡು ಮಾಡಿ, ಅನ್ನ ನೀರು ಕೊಡೆ ಸಾವನ್ನಪ್ಪಿರಬಹುದು). ಇದರಿಂದ ಪ್ರಭಾವಿತರಾದ ಸಿದ್ದಿಯರು ಆ ಸಮಾಧಿ ಸ್ಥಳದಲ್ಲಿ ಕಲ್ಲು ನೆಟ್ಟು "ಸಿದ್ದಿನಾಸ" ನೆಂದು ಪೂಜಿಸಿದರಂತೆ.

ಹಿರಿಯರ ಪೂಜೆಯನ್ನು ಹಿಂದೂ, ಮುಸ್ಲಿಂ ಮತ್ತು ಕ್ರೈಸ್ತ ಸಿದ್ದಿಯರು ನಡೆಸುತ್ತಾರೆ. ಇಂತಹ ಆಚರಣೆ ಜಗತ್ತಿನಲ್ಲಿ ಹಲವಾರು ಸಂಸ್ಕೃತಿಗಳಲ್ಲಿ ರೂಢಿಯಲ್ಲಿರುವುದು ಸಾಮಾನ್ಯವಾಗಿ

ಕಂಡು ಬರುತ್ತದೆ.  ಆದರೆ ಅವುಗಳ ಆರಾಧನೆಯಲ್ಲಿ ಬಳಸುವ ಸಂಕೇತಗಳು ಮಾತ್ರ ಭಿನ್ನ. ಹಿಂದೂ ಸಿದ್ದಿಯರಿಗೆ ತೆಂಗಿನಕಾಯಿ. ಆದರೆ ಕ್ರಿಶ್ಚಿಯನ್ ಮತ್ತು ಹಿಂದೂ ಸಿದ್ದಿಯರು ಹಿರಿಯರ ಪೂಜೆಗೆ ಅವರ ಹೆಸರಿನಲ್ಲಿ ಗದ್ದುಗೆಯನ್ನು ನಿರ್ಮಿಸಿ ಕ್ರೈಸ್ತರು ಶಿಲುಬೆಯನ್ನಿಟ್ಟರೆ, ಮುಸ್ಲಿಂರು ಗದ್ದುಗೆಯ ಮೇಲೆ ಊದಿನಕಡ್ಡಿ ಹಚ್ಚಿ ಪೂಜಿಸುತ್ತಾರೆ. ಹಿರಿಯರು ನಮ್ಮನ್ನು ಸದಾ ಕಾಯ್ದು ಕಾಪಾಡುತ್ತಾರೆಂಬ ಅಪಾರ ನಂಬಿಕೆ ಅವರಿಗಿದೆ. ಜೊತೆ ಜೊತೆಯಲ್ಲಿ ಗ್ರಾಮದೇವತೆಗಳಾದ ಚೌತಿ, ಮಾಸ್ತಿ, ಮಾರಿ, ಹುಲಿಗೆಮ್ಮ ಮತ್ತು ಯಲಮ್ಮನನ್ನು ಪೂಜಿಸುತ್ತಾರೆ. ಹರಕೆಗಳನ್ನು ಹೊರುವುದುಂಟು, ನಾಗರಪಂಚಮಿಯಲ್ಲಿ ಹುತ್ತಪೂಜೆ ಮಾಡುವುದನ್ನು ರೂಢಿಸಿಕೊಂಡಿದ್ದಾರೆ (ಹಿಂದೂ ಸಿದ್ದಿಗಳು).

ಮುಸ್ಲಿಂ ಸಿದ್ಧಿಗಳು ಮೊಹರಂ ಮತ್ತು ಕ್ರಿಶ್ಚಿನ್ ಸಿದ್ಧಿಗಳ ಕ್ರಿಸ್‌ಮಸ್ ಹಬ್ಬವನ್ನು ಆಚರಿಸುವರು. ಇವರ ಹಬ್ಬದ ಸಂದರ್ಭಗಳಲ್ಲಿ ಮೂರು ಧರ್ಮದ ಸಿದ್ದಿಗಳು ಒಟ್ಟಾಗಿ ಸೇರುತ್ತಾರೆ. ಏಕೆಂದರೆ ಈ ಮೂರು ಧರ್ಮದವರ ನಡುವೆ ವೈವಾಹಿಕ ಸಂಬಂಧ ನಡೆಯುವುದರಿಂದ ಅವರು ಪರಸ್ಪರ ಸಂಬಂಧಿಗಳಾಗಿಯೇ ಇದ್ದಾರೆ. ಈ ಮೊದಲೇ ಪ್ರಸ್ತಾಪಿಸಿರುವಂತೆ ಸಿದ್ದಿಗಳು ಬೇಟೆಯಲ್ಲಿ ಬಹಳ ಚುರುಕಗಿದ್ದರು. ಆದ್ದರಿಂದ ಬೇಟೆಗೆ ಹೊರಡುವ ಮೊದಲು "ಬೇಟೆನಾಸ" ಎಂಬ ದೈವವನ್ನು ಪೂಜಿಸುವುದುಂಟು. ಹಾಗೆಯೇ ಬೇಟೆ ಮಾಡಿ ಬಂದ ಬಳಿಕವೂ ಬೇಟೆ ಪ್ರಾಣಿಯನ್ನು ಆ ಸ್ಥಳದಲ್ಲಿಟ್ಟು ಪೂಜಿಸಿ ಮನೆಗೆ ಕೊಂಡ್ಯೊಯುವುದು ಒಟ್ಟಾರೆ ಈ ಮೂಲಕ ಪ್ರಕೃತಿಯನ್ನು ಪೂಜಿಸುವುದನ್ನು ಕಾಣುತ್ತೇವೆ.

**ಹುಟ್ಟಿನಿಂದ ಸಾಯುವವರೆಗಿನ ಆಚರಣೆ** ಸಾಮಾನ್ಯವಾಗಿ ಇಂತಹ ಆಚರಣೆಗಳು ತಮ್ಮ ಪ್ರಾಚೀನರು ಅಥವಾ ಪೂರ್ವಜರು ರೂಢಿಸಿಕೊಂಡಿರುವುಗಳನ್ನು ಮುಂದುವರಿಸುವುದು ಎಲ್ಲಾ ಸಮುದಾಯಗಳಲ್ಲಿಯೂ ಕಂಡು ಬರುವುದು ಸಾಮಾನ್ಯ. ಆದರೆ ಶಾಶ್ವತವಾಗಿ ತಮ್ಮ ಮೂಲ ನೆಲದಿಂದಲೇ ಬೇರೆಯಾದ ಇವರ ಪೂರ್ವಜರು ಯಾರು ಹಾಗೂ ಅವರ ಸಂಸ್ಕೃತಿಯನ್ನೇ ಅರಿಯದ ಇವರು ಪ್ರಾಣಿಗಳಂತೆ ಬದುಕಿದವರು ಕಳೆದ ೧೦೦-೧೫೦ ವರ್ಷಗಳಿಂದ ತಾವು ಖಾಯಂ ನೆಲೆಯೊಂದನ್ನು ಕಂಡುಕೊಂಡ ಬಳಿಕ ಅವರ ಹಿರಿಯರು ಅನ್ಯರ ಪ್ರಭಾವದಿಂದ ರೂಢಿಸಿ ಕೊಂಡುವುಗಳೇ ಇವರ ಇಂದಿನ ಆಚರಣೆಗಳಾಗಿವೆ. ಉದಾಹರಣೆಗೆ ಸಿದ್ಧಿಯರ ಮನೆಯಲ್ಲಿ ಮಗುವು ಹುಟ್ಟಿದಾಗ ಬ್ರಾಹ್ಮಣರ ಮನೆಯಿಂದ ಪಂಚಗವ್ಯವನ್ನು ತಂದು ಮನೆಯನ್ನು ಶುಚಿಗೊಳಿಸಬೇಕು. ಹೆಣ್ಣು ಮೈನೆರೆದಾಗ ಆಕೆಯನ್ನು ಮೂರು ದಿವಸ ಮನೆಯಿಂದ ಹೊರಗೆ ಕೂರಿಸುವುದು. ಮದುವೆಯಲ್ಲಿ ಬ್ರಾಹ್ಮಣರ ಪೌರೋಹಿತ್ಯದಲ್ಲಿ  ಇದಲ್ಲದೆ

ಮದುವೆಯಲ್ಲಿ ಜರುಗುವ ಇತರೆ ಪ್ರಕ್ರಿಯೆಗಳಲ್ಲಿ ವೀಳ್ಯಶಾಸ್ತ್ರ, ದಿಬ್ಬಣ, ಹರಿಶನಶಾಸ್ತ್ರ, ಕಳಸಪೂಜೆ, ಬಾಸಿಂಗ ಕಟ್ಟುವುದು, ಕಾಶೀಯಾತ್ರೆ, ಧಾರೆ ತಾಳಿಕಟ್ಟುವುದು ವಧು ಗಂಡನ ಮನೆಗೆ ಹೋಗುವ ಮೊದಲು ಅಕ್ಕಿ ತುಂಬಿದ ಪಾವನ್ನು (ಅಳತೆ ಮಾಪನ) ಒದ್ದು ಒಳಗೆ ಕಾಲಿಡಬೇಕು. ಈ ಆಚರಣೆಗಳನ್ನು ಗಮನಿಸಿದಾಗ ಇದ್ಯಾವುವು ಸಿದ್ದಿಯರಿಗೆ ಪಾರಂಪರಿಕವಾದವುಗಳಲ್ಲ. ಆದರೂ ತಾವು ಬದುಕಿರುವ ಪ್ರದೇಶದಲ್ಲಿ ಎಲ್ಲರಂತೆ ಬದುಕುವ ಆಶಯದೊಂದಿಗೆ ಒಂದಿಷ್ಟು ಸ್ಥಳೀಯ ಆಚರಣೆಗಳನ್ನು ತಮ್ಮದನ್ನಾಗಿಸಿಕೊಂಡಿದ್ದಾರೆ. ಹಾಗೆಯೇ ಮರಣದ ಅನಂತರ ಹಿರಿಯರ ಪೂಜೆ ರೂಢಿಯಲ್ಲಿದ್ದು, ಸತ್ತವರ ರೂಪದಲ್ಲಿ ತೆಂಗಿನಕಾಯಿಯನ್ನು ಪೂಜಿಸುವರು.

ಮುಸ್ಲಿಂ ಮತ್ತು ಕ್ರಿಶ್ಚಯನ್ ಸಿದ್ದಿಗಳ ಮದುವೆ ಹಿಂದೂ ಸಿದ್ದಿಯರಷ್ಟು ಸಂಕೀರ್ಣವಲ್ಲ. ಕಾಜಿ ಅಥವಾ ಮುಲ್ಲಾನ ಸಮ್ಮುಖದಲ್ಲಿ ಮುಸ್ಲಿಂ ಸಿದ್ದಿಯರ ಮದುವೆ ಕಾರ್ಯ ನಡೆದರೆ ಕ್ರಿಶ್ಚಿಯನ್ ಸಿದ್ದಿಯರು ಚರ್ಚ್‌ನಲ್ಲಿ ಪಾದ್ರಿಯ ಸಮ್ಮುಖದಲ್ಲಿ ವಿಶೇಷ ವಿಧಿ-ಆಚರಣೆಗಳೊಂದಿಗೆ ನಡೆಯುತ್ತದೆ. ಇದರಲ್ಲಿ ಆ ಬಗೆಗೆ ಒಂದು ನಿರ್ದಿಷ್ಟವಾದ ವ್ಯವಸ್ಥೆಯನ್ನು ಹೊಂದಿರುವುದರಿಂದ ಅದರ ಪೂರಕ ಕಾರ್ಯಗಳನ್ನು ಮುಲ್ಲಾ ಅಥವಾ ಪಾದ್ರಿ ಜವಾಬ್ದಾರಿಯನ್ನು ನಿರ್ವಹಿಸುತ್ತಾರೆ.

**ಆಡಳಿತ ವ್ಯವಸ್ಥೆ** ಸಿದ್ಧಿಯರಲ್ಲಿ ಅವರದೇ ಆದ ಸಾಂಪ್ರದಾಯಿಕ ಸಭೆ ಅಥವಾ ಮಂಡಳಿ ಇದೆ. ಆ ಸಭೆ ಸಮುದಾಯದಲ್ಲಿ ಎದುರಾಗುವ ಯಾವುದೇ ರೀತಿಯ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುವರು. ಅವುಗಳಲ್ಲಿ ವಿಶೇಷವಾಗಿ ಅನ್ಯ ಸಮುದಾಯದವರನ್ನು ಮದುವೆಯಾಗುವುದು. ಕಳ್ಳತನ ಮತ್ತು ವಯಸ್ಕರ ಅಪರಾಧಗಳು ಬಹಳ ಗಂಭೀರವಾದುವುಗಳು. ಅಂತಹ ಸಂದರ್ಭದಲ್ಲಿ ಅಂತಹ ವ್ಯಕ್ತಿಯನ್ನು ಸಮುದಾಯದಿಂದ ಹೊರಗೆ ಹಾಕುವರು. (Excommunicated) ಈ ಕುಲ ಪಂಚಾಯ್ತಿಯ ಮುಖ್ಯಸ್ಥನನ್ನು ವಂಶಪಾರಂಪ್ಯರವಾಗಿ ಆಯ್ಕೆ ಮಾಡುವರು.

**ಪ್ರಚಲಿತ ವಿದ್ಯಮಾನಗಳು** ಈಗಾಗಲೇ ಚರ್ಚಿಸಿರುವಂತೆ ಸಿದ್ದಿ ಬುಡಕಟ್ಟು ಇಂದಿಗೂ ಪರಕೀಯ ಭಾವನೆಯಿಂದ ಬದುಕಬೇಕಾಗಿದೆ. ಒಂದು ಅರ್ಥದಲ್ಲಿ ಸ್ಥಳೀಯರಿಗೆ ಸಿದ್ದಿಯರನ್ನು ಕಂಡಾಗ ಅವರ ನಮ್ಮವರೆ, ಕನ್ನಡದವರು, ತುಳುವರು ಅಥವಾ ಕೊಂಕಣಿಯವರು ಎಂದು ಒಪ್ಪಿಕೊಳ್ಳುವುದಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಅವರ ಶೈಕ್ಷಣಿಕ ಪ್ರಗತಿ, ಆರ್ಥಿಕ ಸ್ಥಿತಿ, ರಾಜಕೀಯ

ಸ್ಥಾನಮಾನ, ಔದ್ಯೋಗಿಕ ಕ್ಷೇತ್ರದಲ್ಲಿ ಅವಕಾಶದ ಲಭ್ಯತೆ ಹಾಗೂ ಸಮಾಜದಲ್ಲಿ ಅವರಿಗೆ ದೊರೆಯುತ್ತಿರುವ ಸ್ಥಾನಮಾನದ ಬಗೆಗೆ ಒಂದಿಷ್ಟು ವಾಸ್ತವ ಸಂಗತಿಯನ್ನು ಒದಗಿಸುವುದು ಅವಶ್ಯ ಎನಿಸುತ್ತದೆ.

**ಶೈಕ್ಷಣಿಕ ಪ್ರಗತಿ** ಮೂಲತಃ ಕಾಡನ್ನು ಅವಲಂಬಿಸಿ ಬದುಕುತ್ತಿದ್ದ ಇವರಿಗೆ ಅನಂತರದಲ್ಲಿ ಭೂಮಾಲೀಕರ ಮನೆಗಳಲ್ಲಿ ತೊತ್ತಿನ ಮಕ್ಕಳಾಗಿ ದುಡಿದು ನೂರಾರು ವರ್ಷಗಳ ಬಳಿಕ ಕೂಲಿಯನ್ನೇ ಮಾಡಿದರು. ಇಂದು ವೈಯಕ್ತಿಕ ಬದುಕನ್ನು ಹೊಂದಿರುವ ಸಿದ್ಧಿಯರು ಈಗೀಗ ಶಿಕ್ಷಣದ ಕಡೆ ಮುಖಮಾಡಿದ್ದಾರೆ. ಈ ನಿಟ್ಟಿನಲ್ಲಿ ಸರ್ಕಾರಗಳು ಸ್ವಯಂ ಸೇವಾ ಸಂಸ್ಥೆಗಳು, ಕ್ರೈಸ್ತ ಮಿಷನರಿಗಳು ಕಾಳಜಿವಹಿಸಿ ಸಿದ್ದಿಯರ ಸರ್ವತೋಮುಖ ಏಳಿಗೆಗೆ ಪ್ರಯತ್ನ ಮಾಡುತ್ತಿರುವುದು ವಾಸ್ತವ. ಆದರೆ ಇದು ಏಕಮುಖವಾದಾಗ ಹೆಚ್ಚು ಪ್ರಯೋಜನವಾಗಲಾರದು. ನಾವು ಇತರರಂತೆ ಅಭಿವೃದ್ಧಿ ಹೊಂದಬೇಕು. ಅದಕ್ಕಾಗಿ ಶಿಕ್ಷಣ ಪಡೆಯಬೇಕು ಎಂಬ ಆಸಕ್ತಿ ಅವರಲ್ಲಿ ಮೂಡಿದಾಗ ಮಾತ್ರ ಒಂದು ಸಮುದಾಯದ ಏಳಿಗೆ ಸಾಧ್ಯ. ಆದರೆ ಪ್ರಸ್ತುತ ಸಿದ್ದಿಯರನ್ನು ಕುರಿತು ಹೇಳುವುದಾದರೆ, ಈಗಿನ ಪೀಳಿಗೆಯ ಮಕ್ಕಳಿಗೆ ಶಿಕ್ಷಣ ಕೊಡಿಸಲು ಹಿರಿಯರಲ್ಲಿ ಆಸಕ್ತಿ ಇರುವುದು ಕಾಣಬರುತ್ತಿದೆ. ಏಕೆಂದರೆ ಮಾಧ್ಯಮಗಳು ಅದರಲ್ಲಿಯೂ ದೃಶ್ಯ ಮಾಧ್ಯಮಗಳು ನಾಡಿನ ಮೂಲೆ ಮೂಲೆಗೂ ತಲುಪಿ ಪ್ರತಿಯೊಬ್ಬರನ್ನು ಅಭಿವೃದ್ಧಿಯತ್ತ ಮುಂದಾಗಲು ಪ್ರೇರೇಪಣೆ ನೀಡುತ್ತಿವೆ. ಆದ್ದರಿಂದ ಶಿಕ್ಷಣ ಇಂದು ಅನಿವಾರ್ಯ. ಅವರಿಂದ ವಂಚಿತರಾದರೆ ನಾವು ಎಲ್ಲರಂತೆ ಬಾಳಿ ಬದುಕಲು ಆಗದು ಎಂಬ ಅರಿವನ್ನು ಉಳ್ಳವರಾಗಿದ್ದಾರೆ. ಓರ್ವ ಆಫ್ರಿಕಾ ಮೂಲದ ಸಾಮಾನ್ಯ ವ್ಯಕ್ತಿ ತನ್ನ ಸ್ವಂತ ಪ್ರತಿಭೆಯಿಂದ ಮೇಲೆ ಬಂದು ಜಗತ್ತಿಗೆ ದೊಡ್ಡಣ್ಣನಾದ ಅಮೇರಿಕಾದಂತಹ ರಾಷ್ಟ್ರಕ್ಕೆ ಅಧ್ಯಕ್ಷನಾಗಿ ಆಯ್ಕೆಯಾದ ಮೇಲಂತೂ ಇಡೀ ಜಗತ್ತೇ ವಿಸ್ಮಯಗೊಂಡಿದೆ. ಜಗತ್ತಿನಲ್ಲೇ ಕನಿಷ್ಠ ಸ್ಥಾನವನ್ನು ಹೊಂದಿದ್ದ ಕಪ್ಪು ಜನಾಂಗಕ್ಕೆ ಜಗತ್ತನೇ ನಿಯಂತ್ರಿಸುವವನೊಬ್ಬ ಅವರ ಸಮುದಾಯದಲ್ಲೇ ಬಂದವನಾಗಿರುವುದು ಅಪಾರ ಭರವಸೆಯನ್ನು ಮೂಡಿಸಿದೆ. ಆದ್ದರಿಂದ ಹಿಂದಿಗಿಂತ ಈಗ ಕೇವಲ ಕರ್ನಾಟಕದ ಸಿದ್ದಿಯರು ಮಾತ್ರಲ್ಲ ಜಗತ್ತಿನ ನೀಗ್ರೊ ಜನಾಂಗಕ್ಕೆ ಸೇರಿದ ಪ್ರತಿಯೊಂದು ಸಮುದಾಯವು ನಾವು ಯಾರಿಗೂ ಕಡಿಮೆಯಲ್ಲ ಎಂದು ತಲೆ ಎತ್ತಿ ಹೇಳಿಕೊಳ್ಳುವ ಕಾಲ ಇದಾಗಿದೆ.

ಈಗಲೂ ಇವರು ಶೈಕ್ಷಣಿಕ ಪ್ರಗತಿಯಲ್ಲಿ ಅತ್ಯಂತ ಹಿಂದುಳಿದಿದ್ದಾರೆ. ಆದರೆ ಇತರೆ ಬುಡಕಟ್ಟುಗಳಿಗಿಂತ ಉತ್ತಮವಾಗಿದೆ. ಏಕೆಂದರೆ ಇವರು ಅಲೆಮಾರಿಗಳು ಹಾಗೂ

ಅಲೆಮಾರಿಗಳು ಅಲ್ಲ. ಆದರೆ ಸಿದ್ದಿಯರ ಶಿಕ್ಷಣದ ಪ್ರಮಾಣವನ್ನು ಗಮನಿಸಿದಾಗ ಸಮಾಧಾನಕರವಾಗಿಲ್ಲ. ಆರ್ಥಿಕ ಸ್ಥಿತಿಯು ಇದಕ್ಕೆ ತಳುಕು ಹಾಕಿಕೊಂಡಿದೆ. ಭೂರಹಿತರೇ ಹೆಚ್ಚಾಗಿದ್ದು ಕೂಲಿ ಇವರ ಪ್ರಮುಖ ಕಸುಬಾಗಿರುವುದರಿಂದ ಸಹಜವಾಗಿ ಮಕ್ಕಳಿಗೆ ಶಿಕ್ಷಣ ಕೊಡಿಸುವುದು ಕಷ್ಟ ಸಾಧ್ಯವಾಗಿತ್ತು. ಸಿದ್ದಿಗಳು ಪರಿಶಿಷ್ಟ ಪಂಗಡಕ್ಕೆ ಸೇರ್ಪಡೆಯಾದ ಅನಂತರ ೨೦೦೬ ರ ಬಳಿಕ ವಿಶೇಷ ಸೌಲಭ್ಯ ಲಭ್ಯವಾಯಿತು. ಅಲ್ಲದೇ ೧೪ ವರ್ಷದ ಒಳಗಿನ ಎಲ್ಲಾ ಮಕ್ಕಳಿಗೂ ಶಿಕ್ಷಣ ಕಡ್ಡಾಯ ಎಂಬ ಯೋಜನೆಯು ಜಾರಿಯಾಯಿತು. ಈ ಹಿನ್ನೆಲೆಯಲ್ಲಿ ಈಗಿನ ಪೀಳಿಗೆಯ ಮಕ್ಕಳು ಅದರ ಲಾಭವನ್ನು ಪಡೆಯುತ್ತಿದ್ದಾರೆ. ಆದರೆ ಇವರ ಹಿಂದಿನ ಪೀಳಿಗೆಯು ಮಾತ್ರ ಶಿಕ್ಷಣ ಪಡೆದಿರುವುದಾದರೂ ಯಾವ ಉದ್ಯೋಗವನ್ನು ಪಡೆಯಲು ಸಾಧ್ಯವಿಲ್ಲ. ಆದರೆ ಕ್ರೈಸ್ತ ಸಿದ್ದಿಗಳು ಹಿಂದೂ ಮತ್ತು ಮುಸ್ಲಿಂ ಸಿದ್ದಿಗಳಿಗಿಂತ ಶಿಕ್ಷಣದಲ್ಲಿ ಮುಂದಿದ್ದಾರೆ.

**ಆರ್ಥಿಕ ಸ್ಥಿತಿ** ಆಧುನಿಕ ಸಂದರ್ಭದಲ್ಲಿ ಸಿದ್ದಿ ಬುಡಕಟ್ಟಿನ ಆರ್ಥಿಕ ಪರಿಸ್ಥಿತಿಯನ್ನು ಹೋಲಿಸಿದಾಗ ಅವರು ಅತ್ಯಂತ ಹಿಂದುಳಿದ ಅಂದರೆ ಬಡತನದ ರೇಖೆಗಿಂತ ಕೆಳಗಿದ್ದಾರೆ. ಅರ್ಥಾತ್ ಕಡುಬಡವರು ಎಂದೇ ಅರ್ಥೈಸಬಹುದಾಗಿದೆ. ಆದರೆ ಬುಡಕಟ್ಟು ಸಮುದಾಯಗಳ ಸಂದರ್ಭದಲ್ಲಿ ಹೇಳುವುದಾದರೆ ವಾಸಕ್ಕೊಂದು ನೆಲೆ, ದುಡಿಯಲು ಒಂದು ಕೆಲಸ, ಬದುಕಲು ಒಂದಿಷ್ಟು ಆದಾಯವಿದ್ದರೆ ಅವರು ಸುಖಿಗಳು ಎಂದು ಭಾವಿಸುತ್ತಿದ್ದರು. ಆದರೆ ಇಂದು ಜೀವನ ಶೈಲಿಯೇ ಬದಲಾಗಿದ್ದು ಏನಿಲ್ಲದಿದ್ದರೂ ಹಣವೊಂದು ಜೇಬಲ್ಲಿದ್ದಾರೆ ಅವರಿಗೆ ಎಲ್ಲವೂ ದೊರೆಯುತ್ತದೆ ಎಂಬ ಪರಿಸ್ಥಿತಿ ಉದ್ಭವವಾಗಿದೆ ಆದ್ದರಿಂದ ಹಣವೇ ಪ್ರಧಾನ ಪಾತ್ರವನ್ನು ವಹಿಸಿದೆಯೆಂದರೆ ತಪ್ಪಾಗಲಾರದು. ಒಟ್ಟಾರೆ ಸಿದ್ದಿ ಬುಡಕಟ್ಟಿನ ಆರ್ಥಿಕ ಸ್ಥಿತಿ ಒಂದೇ ತೆರನಾಗಿಲ್ಲ. ಮೂರು ಧರ್ಮಗಳಲ್ಲಿ ಹಂಚಿಹೋಗಿರುವ ಇರು ಪ್ರತ್ಯೇಕವಾಗಿಯೇನು ಬದುಕುತ್ತಿಲ್ಲವಾದರೂ ಅಲ್ಪ ಪ್ರಮಾಣದಲ್ಲಿ ವ್ಯತ್ಯಾಸಗಳನ್ನು ಕಾಣಬಹುದಾಗಿದೆ. ಈಗಾಗಲೇ ಪ್ರಸ್ತಾಪಿಸಿರುವಂತೆ ಕ್ರೈಸ್ತ ಮಿಷನರಿಗಳ ಪ್ರೋತ್ಸಾಹದೊಂದಿಗೆ ಮತಾಂತರ ಹೊಂದಿದ ಕ್ರೈಸ್ತ ಸಿದ್ದಿಗಳು ಶಿಕ್ಷಣ ಪಡೆದುಕೊಳ್ಳುವ ಮೂಲಕ ಆರ್ಥಿಕ ಸ್ಥಿತಿಯನ್ನು ಉತ್ತಮ ಪಡಿಸಿಕೊಳ್ಳುವಲ್ಲಿ ಅಲ್ಪ ಪ್ರಮಾಣದಲ್ಲಿ ಯಶಸ್ಸನ್ನು ಕಂಡುಕೊಂಡಿದ್ದಾರೆ. ಶಿಕ್ಷಕರಾಗಿ, ವಾಹನ ಚಾಲಕರಾಗಿ, ಮೆಕಾನಿಕ್‌ಗಳಾಗಿ ಉದ್ಯೋಗದಲ್ಲಿದ್ದಾರೆ. ಕೆಲವರು ಸೌದಿ ರಾಷ್ಟ್ರಗಳಿಗೆ ಹೋಗಿ ದುಡಿಮೆ ಮಾಡುವುದು ಉಂಟು. ಅಂತಹವರು ಕುಟುಂಬಗಳಲ್ಲಿ ಹಣದ ವಹಿವಾಟು, ಉತ್ತಮವಾದ ಮನೆ ಮತ್ತು ದ್ವಿಚಕ್ರವಾಹನ ಸೌಲಭ್ಯವನ್ನು ಹೊಂದಿದ್ದಾರೆ. ಆದರೆ ಇವರ ಪ್ರಮಾಣ ಅತಿ

ವಿರಳವಷ್ಟೇ. ಮನೆಗಳಲ್ಲಿ ಆದಾಯ ಮೂಲದ ಉಪ ಕಸುಬುಗಳಲ್ಲಿ ಕೆಲವರು ತೊಡಗಿಸಿಕೊಂಡಿದ್ದಾರೆ (ಕೋಳಿಸಾಕಾಣೆ, ಹೈನುಗಾರಿಕೆ, ಕೌದಿಎಣೆಯುವುದು, ಟೈಲರಿಂಗ್ ಇತ್ಯಾದಿ) ಅವರು ವಾರಕ್ಕೆ, ತಿಂಗಳಿಗೆ ಒಂದಿಷ್ಟು ಮೊತ್ತದ ಹಣವನ್ನು ಗಳಿಸುವರು, ಆದಾಗ್ಯೂ ಸಿದ್ದಿಯರ ಆರ್ಥಿಕ ಸ್ಥಿತಿಯೇನು ತೃಪ್ತಿಕರವಾಗಿಲ್ಲ. ಮಿಸಲಾತಿಯ ಸೌಲಭ್ಯವು ಇವರಿಗೆ ನ್ಯಾಯಯುತವಾಗಿ ದೊರೆತಾಗ ಇವರ ಆರ್ಥಿಕ ಸ್ಥಿತಿ ಸುಧಾರಿಸಬಹುದು ಎಂಬುದು ನಿರೀಕ್ಷೆಯಷ್ಟೇ.

**ರಾಜಕೀಯ ಸ್ಥಾನಮಾನ** ರಾಜಕೀಯ ಕ್ಷೇತ್ರದಲ್ಲಿ ಜಾತಿವಾರು / ವರ್ಗವಾರು ಮೀಸಲಾತಿಯಿದ್ದರೂ ಅದೇ ವರ್ಗದಲ್ಲಿರುವ ಇತರೆ ಜನರ ಪಾಲಾಗುತ್ತದೆ. ಇಂದು ರಾಜಕೀಯ ಎಂದ ಬಳಿಕ ಅಧಿಕಾರ ಪಡೆಯುವುದು, ಹಣಗಳಿಸುವುದು ಅದಕ್ಕಾಗಿ ಪೂರ್ವಭಾವಿಯಾಗಿ ಲಕ್ಷಾಂತರ ರೂಪಾಯಿಗಳನ್ನು ಖರ್ಚು ಮಾಡಬೇಕೆಂಬುದು ಜನ ಜನಿತವಾದ ಸಂಗತಿಯಾಗಿದೆ. ಪರಿಸ್ಥಿತಿ ಇಂತಿರುವಾಗ ಈಗ ತಾನೇ ಪರಿಶಿಷ್ಟವರ್ಗವೆಂದು ಪರಿಗಣಿಸಿ ಮೀಸಲಾತಿ ಸೌಲಭ್ಯವನ್ನು ಹೊಂದಿರುವ ಸಿದ್ದಿಯರಲ್ಲಿ ಗ್ರಾಮಪಂಚಾಯ್ತಿ ಮಟ್ಟದ ರಾಜಕೀಯದಿಂದ ಆಚೆಗೆ ಬಂದಿಲ್ಲ. ಇನ್ನು ತಾಲ್ಲೂಕು, ಜಿಲ್ಲೆ, ರಾಜ್ಯ ಮತ್ತು ರಾಷ್ಟ್ರ ರಾಜಕರಣ ಕೇವಲ ಕನಸೆಂದೇ ಹೇಳಬೇಕಾಗುತ್ತದೆ. ಆದರೆ ಮುಂದೊಂದು ದಿನ ಸಿದ್ದಿ ಬುಡಕಟ್ಟು ಸಹ ಈ ಕ್ಷೇತ್ರದಲ್ಲಿ ಹೆಚ್ಚೆಚ್ಚು ಅವಕಾಶಗಳನ್ನು ಪಡೆದುಕೊಂಡು ರಾಜ್ಯ ರಾಜಕಾರಣದಲ್ಲಿ ಇಲ್ಲವಾದರೂ ತಾಲ್ಲೂಕು ಮತ್ತು ಜಿಲ್ಲಾ ರಾಜಕಾರಣದಲ್ಲಿ ಅವಕಾಶವನ್ನು ಪಡೆದುಕೊಳ್ಳಬಲ್ಲರು ಎಂಬ ಭರವಸೆ ಹೊಂದಬಹುದಾಗಿದೆ. ಏಕೆಂದರೆ ಈಗಾಗಲೇ ಸಿದ್ದಿ ಯುವಕರು ಸಾಮಾಜಿಕ ನ್ಯಾಯಕ್ಕಾಗಿ ಹೋರಾಡುವ ಹಿನ್ನೆಲೆಯಲ್ಲಿ ಸಂಘ ಸಂಸ್ಥೆಗಳನ್ನು ಸ್ಥಾಪಿಸಿದ್ದಾರೆ. ಹಾಗೂ ಯಾವುದೇ ಪ್ರದೇಶದಲ್ಲಿ ಸಿದ್ದಿಯರಿಗೆ ಅನ್ಯಾಯವಾದಾಗ ಅದನ್ನು ಪ್ರತಿಭಟಿಸುವ ಮೂಲಕ ಬಹಳ ವ್ಯವಸ್ಥಿತವಾದ ಸಂಘಟನೆಯನ್ನು ಹೊಂದಿರುವುದು ತಿಳಿದುಬಂದಿದೆ. ಅನೇಕ ಸಾರಿ ಪೊಲೀಸ್ ಇಲಾಖೆಯವರಿಂದಲೇ ಅನ್ಯಾಯ ಎದುರಾಗಿರುವ ಸಂಗತಿಯನ್ನು ನನ್ನ ಜೊತೆ ಚರ್ಚಿಸಿದ್ದಾರೆ. ಅಂದರೆ ಪ್ರಭಲ ಕೋಮುಗಳಿಂದ ಆಗುವ ಅನ್ಯಾಯದ ವಿರುದ್ಧ ದೂರು ನೀಡಲು ಹೋದಾಗ ದೂರನ್ನು ದಾಖಲಿಸದೆ ಪ್ರತಿಯಾಗಿ ಅನ್ಯಾಯಕ್ಕೆ ಒಳಗಾದವರನ್ನೇ ಹೆದರಿಸಿ ವಾಪಸ್ಸು ಕಳುಹಿಸಿರುವ ಬಗ್ಗೆ ಮಾಹಿತಿ ನೀಡಿದ್ದಾರೆ.

**ಔದ್ಯೋಗಿಕ ಮಟ್ಟ** ಅನಕ್ಷರಸ್ಥರೇ ಹೆಚ್ಚಿರುವ ಸಿದ್ದಿ ಸಮುದಾಯದಲ್ಲಿ ಬೇರೆ ಬೇರೆ ಕ್ಷೇತ್ರಗಳಲ್ಲಿ (ಸರ್ಕಾರ, ಖಾಸಗಿ, ಅರೆ ಖಾಸಗಿ) ಉದ್ಯೋಗ ಪಡೆಯುವುದು ಸಾಧ್ಯವಿಲ್ಲದ ವಿಚಾರ. ಆದರೆ

ಹೊಸ ಪೀಳಿಗೆಯ ಯುವಕರು ತಾವು ಪಡೆದಿರುವ ಶಿಕ್ಷಣವನ್ನೇ ಆಧರಿಸಿ ಅರೆ ಸರ್ಕಾರಿ ಮತ್ತು ಸರ್ಕಾರಿ ಕ್ಷೇತ್ರದಲ್ಲಿ ವಿಶೇಷವಾಗಿ ಶಿಕ್ಷಣ ಇಲಾಖೆಗಳಲ್ಲಿ ಕ್ರೈಸ್ತ ಮಿಷನರಿ ಶಾಲೆಗಳಲ್ಲಿ ಶಿಕ್ಷಕರಾಗಿ, ಇತರೆ ಸಿಬ್ಬಂದಿಗಳಾಗಿ ದುಡಿಯುತ್ತಿದ್ದಾರೆ. ಖಾಸಗಿಯಾಗಿ ಗ್ಯಾರೇಜ್‌ಗಳ ಕೆಲಸದಲ್ಲಿ ಸೇರ್ಪಡೆಯಾಗಿರುವುದುಂಟು. ಆದ್ದರಿಂದ ಸಿದ್ದಿಯರು ಬಹಳ ಕಡಿಮೆ ಪ್ರಮಾಣದಲ್ಲಿ ಉದ್ಯೋಗಿಗಳಾಗಿದ್ದಾರೆ. ಅಧ್ಯಾಪಕ, ಬ್ಯಾಂಕ್ ಮ್ಯಾನೇಜರ್, ಕೆ.ಎ.ಎಸ್., ಅಧಿಕಾರಿಗಳಾಗಿ ಅಥವಾ ಇತರೆ ಉನ್ನತ ಹುದ್ದೆಗಳನ್ನು ಪಡೆಯಲು ಶಿಕ್ಷಣ ಕ್ಷೇತ್ರದಲ್ಲಿ ಹೆಚ್ಚಿನ ಸಾಧನೆ ಗೈದು ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಬರಬೇಕಾಗಿದೆ. ಆದರೆ ಎಲ್ಲೆಲ್ಲೂ ಭ್ರಷ್ಟಾಚಾರ ತಾಂಡವಾಡುತ್ತಿರುವ ಈ ಸಂದರ್ಭದಲ್ಲಿ ಆ ಎತ್ತರಕ್ಕೆ ಅವರು ಬರುವುದು ಕೇವಲ ಕನಸು ಎಂದು ಹೇಳಬೇಕಾಗುತ್ತದೆ.

**ಸಾಮಾಜಿಕ ಸ್ಥಾನಮಾನ** ಪಾರಂಪರಿಕವಾಗಿ ಸಾಮಾಜಿಕ ಉತ್ತಮಿಕೆಯನ್ನು ಹೊಂದಿರುವ ಹಿನ್ನೆಲೆಯನ್ನು ದೊರೆಯುವ ಸ್ಥಾನಮಾನದಲ್ಲಿ ಸಿದ್ದಿಯರು ಸ್ಥಾಪಿತ ಸಮಾಜದಲ್ಲಿ ಭೂಮಾಲೀಕರು ಹಾಗೂ ಮೇಲುಜಾತಿಯವರು ಎಂದು ಕರೆಸಿಕೊಳ್ಳುವವರ ಗುಂಪಿನಲ್ಲಿ ಸಿದ್ದಿಯರು ಒಳಪಡುವುದಿಲ್ಲ. ಈಗ ಬದಲಾದ ಸಾಮಾಜಿಕ ವ್ಯವಸ್ಥೆಯಲ್ಲಿ ಆರ್ಥಿಕವಾಗಿ ಮುಂದುವರಿದಿದ್ದರೆ ಅವರು ಸಹ ಸಾಮಾಜಿಕ ಸ್ಥಾನಮಾನವನ್ನು ಪಡೆದುಕೊಳ್ಳುತ್ತಾರೆ ಎಂಬುದು ಸಾಮಾನ್ಯ ತಿಳುವಳಿಕೆ. ಇದು ಸ್ಥಳೀಯ ಸಮುದಾಯಗಳಾದರೆ ಅನ್ವಯವಾಗುತ್ತದೆ. ಹೇಳಿ ಕೇಳಿ ಗುಲಾಮ ರಾಷ್ಟ್ರದಿಂದ ಸಾವಿರಾರು ವರ್ಷಗಳ ಹಿಂದೆ ಆಕಸ್ಮಿಕವಾಗಿ ಭಾರತಕ್ಕೆ ಬಂದವರಾಗಿದ್ದಾರೆ. ಅಷ್ಟೇ ಅಲ್ಲ ಆರಂಭದ ಘಟ್ಟದಲ್ಲಿ ಕಾಡುವಾಸಿಗಳಾಗಿದ್ದುಕೊಂಡು ತದ ನಂತರದಲ್ಲಿ ಸ್ಥಳೀಯ ಭೂಮಾಲೀಕರ ತೋಟಗಳಲ್ಲಿ ತೊತ್ತಿನ ಮಕ್ಕಳಾಗಿ ದುಡಿದು ಇತ್ತೀಚೆಗೆ ಕೃಷಿಕರಾಗಿ ಕೃಷಿ ಕೂಲಿಗಳಾಗಿ ಮತ್ತು ಮೇಲೆ ಪ್ರಸ್ತಾಪಿಸಿರುವಂತೆ ಬೇರೆ ಬೇರೆ ಹುದ್ದೆಗಳಲ್ಲೂ ತೊಡಗಿಸಿಕೊಂಡಿದ್ದಾರೆ. ಸಾಮಾಜಿಕವಾಗಿ ಅಥವಾ ಆರ್ಥಿಕವಾಗಿ ಎರಡರಲ್ಲಿಯೂ ಹಿಂದಿರುವ ಸಿದ್ದಿ ಸ್ತ್ರೀ ಪುರುಷ ಈರ್ವರಿಗೂ ಸಾಮಾಜಿಕವಾಗಿ ಉತ್ತಮ ಸ್ಥಾನ ಮಾನವಿಲ್ಲ. ಆದರೂ ಕೊರಗ ಅಥವಾ ಇತರೆ ಅಸ್ಪೃಶ್ಯ ಸಮುದಾಯಗಳಂತೆ ಕನಿಷ್ಟಸ್ಥಾನ ಇಲ್ಲವೇ ತುಚ್ಛವಾಗಿ ಕಾಣುವ ಸಂದರ್ಭಗಳಿಲ್ಲ. ಇವರಿಗೆ ಇರುವ ದೈಹಿಕ ರಚನೆ, ಬಣ್ಣ, ವಿಶೇಷವಾದ ಸುರುಳಿ ಕೂದಲು ಇವರನ್ನು ಸದಾ ಪರಕೀಯರ ಸ್ಥಾನದಲ್ಲಿಟ್ಟು, ನೋಡುವಂತಾಗಿರಬಹುದೇನೋ ಎಂಬ ಅನುಮಾನವಿದೆ.

ಕೊರಗರು ಪಶ್ಚಿಮ ಕರಾವಳಿಯ ಮೂಲದವರು ಕ್ರಮೇಣ ಕರ್ನಾಟಕದ ಇತರೆ ಭಾಗಗಳಿಗೂ ಹರಡಿದ್ದಾರೆ. ಆಹಾರ ಸಂಗ್ರಹಣೆಯ ದೃಷ್ಟಿಯಿಂದ ಬೇರೆಡೆಗೆ ಹೋಗಿ ಅಲ್ಲೇ ಉಳಿದಿರುವ ಸಾಧ್ಯತೆಗಳಿವೆ. ಆದರೆ ಕೊರಗರು ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಇರುವುದು ೨೦೦೧ ರ ಜನಗಣತಿ ತಿಳಿದು ಬರುತ್ತದೆ.

**ಕೊರಗ ಕ್ರೈಸ್ತ ಮತ್ತು ಇತರೆ ಕೊರಗರ ಜನಸಂಖ್ಯೆ**

| ಕ್ರ. ಸಂ. | ಜಿಲ್ಲೆ | ಒಟ್ಟು ಜನಸಂಖ್ಯೆ | ಪುರುಷ | ಮಹಿಳೆ |
|---|---|---|---|---|
| ೦೧. | ಬಾಗಲಕೋಟೆ | ೮೫ | ೪೫ | ೪೦ |
| ೦೨. | ಬೆಂಗಳೂರು (ಗ್ರಾಮ) | ೩೨ | ೧೪ | ೧೮ |
| ೦೩. | ಬೆಂಗಳೂರು (ನಗರ) | ೩೦೭ | ೧೫೯ | ೧೪೮ |
| ೦೪. | ಬಳ್ಳಾರಿ | ೧೫ | ೭ | ೮ |
| ೦೫. | ಬೆಳಗಾಂ | ೭೭ | ೩೯ | ೩೮ |
| ೦೬. | ಬೀದರ್ | ೧೩ | ೪ | ೯ |
| ೦೭. | ಬಿಜಾಪುರ | ೨೮ | ೧೭ | ೧೧ |
| ೦೮. | ಚಿಕ್ಕಮಗಳೂರು | ೧೭೫ | ೯೨ | ೮೩ |
| ೦೯. | ದಕ್ಷಿಣಕನ್ನಡ | ೪೫೪೨ | ೪೨೫೨ | ೨೨೯೦ |
| ೧೦. | ದಾವಣಗೆರೆ | ೩ | ೨ | ೧ |
| ೧೧. | ಗದಗ | ೭ | ೩ | ೪ |
| ೧೨. | ಧಾರವಾಡ | ೧೦೧ | ೫೪ | ೪೭ |
| ೧೩. | ಗುಲ್ಬರ್ಗ | ೭೫ | ೩೯ | ೩೬ |
| ೧೪. | ಹಾಸನ | ೧೨ | ೬ | ೬ |
| ೧೫. | ಹಾವೇರಿ | ೭೯೯ | ೪೧೫ | ೩೮೪ |
| ೧೬. | ಕೊಡಗು | ೪೮ | ೨೦ | ೨೮ |
| ೧೭. | ಕೋಲಾರ | ೫ | ೪ | ೧ |
| ೧೮. | ಮಂಡ್ಯ | ೮ | ೫ | ೩ |
| ೧೯. | ಮೈಸೂರು | ೭ | ೩ | ೪ |
| ೨೦. | ರಾಯಚೂರು | ೪೯ | ೨೦ | ೨೯ |
| ೨೧. | ಶಿವಮೊಗ್ಗ | ೩೫೪ | ೧೭೦ | ೧೮೪ |

| | | | | |
|---|---|---|---|---|
| ೨೨. | ತುಮಕೂರು | ೨ | | ೨ |
| ೨೩. | ಉಡುಪಿ | ೮೯೬೬ | ೪೪೦೦ | ೪೫೬೬ |
| ೨೪. | ಉತ್ತರಕನ್ನಡ | ೩೬೧ | ೧೮೧ | ೧೮೦ |
| | ಕರ್ನಾಟಕ | ೧೬೦೭೧ | ೭೯೫೧ | ೮೧೨೦ |

ಮೇಲಿನ ಜನಸಂಖ್ಯಾ ಕೋಷ್ಟಕವನ್ನು ಗಮನಿಸಿದಾಗ ಕೊರಗರು ಸುಮಾರು ೨೩ ಜಿಲ್ಲೆಗಳಲ್ಲಿಯೂ ಕಂಡುಬರುವುದಾಗಿ ತಿಳಿಯುತ್ತದೆ. ಆದರೆ ಉಡುಪಿ ೮,೯೬೬ ಹಾಗೂ ದಕ್ಷಿಣಕನ್ನಡ ೪೫೪೨ ರಷ್ಟು

೧. ಅತ್ಯಂತ ಕೆಳಸ್ತರದಲ್ಲಿರುವ ಕೊರಗ ಸಮುದಾಯಕ್ಕೆ ಸಾಮಾಜಿ ಸ್ಥಾನಮಾವಿಲ್ಲದೇ ಅಪಮಾನದ ಬದುಕನ್ನು ಸಾಗಿಸುತ್ತಿದ್ದಾರೆ. ಆದರೆ, ಕ್ರೈಸ್ತ ಕೊಂಗರಲ್ಲಿ ಈ ಸಮಸ್ಯೆ ಅಷ್ಟೇನು ಗಾಢವಾಗಿಲ್ಲ.

೨. ಹಳೆ ತಲೆಮಾರಿನ ಜನರಲ್ಲಿ ಪರಿಸ್ಥಿತಿಯೊಂದಿಗೆ ಹೊಂದಾಣಿಕೆ ಮಾಡಿಕೊಂಡು ಬದುಕುವುದು ಒಗ್ಗಿ ಹೋಗಿರುವ ಕಾರಣ ಬದಲಾವಣೆಯನ್ನು ಬಯಸುವುದಿಲ್ಲ.

೩. ಅಲ್ಪಸ್ವಲ್ಪ ಶಿಕ್ಷಣವನ್ನು ಪಡೆದು ಪ್ರಜಾಪ್ರಭುತ್ವ ಸಮಾನತೆ- ಹಕ್ಕು ಮತ್ತು ಕರ್ತವ್ಯವನ್ನು ತಿಳಿದು ಸಾಮಾಜಿಕ ನ್ಯಾಯವನ್ನು ಬಯಸುತ್ತಿದ್ದಾರೆ. ಈ ಸಂಬಂಧ ಯುವಕರ ಸಂಘಟನೆಗಳನ್ನು ರಚಿಸಿಕೊಂಡಿದ್ದಾರೆ.

೪. ಬದುಕುವ ಸಲುವಾಗಿ ಯಾವುದೇ ಕೆಲಸವನ್ನು ನಿರ್ವಹಿಸಲು ಹಿಂಜರಿಯುವುದಿಲ್ಲವಾದರೂ ಪಾರಂಪರಿಕವಾಗಿ ಬಂದಿರುವ ಅಜಲು ಎಂಬ ಅನಿಷ್ಟ ಪದ್ಧತಿಯನ್ನು ಯುವ ಪೀಳಿಗೆಯು ಬಲವಾಗಿ ವಿರೋಧಿಸುತ್ತಿದೆ. (ಕನ್ನಡ ವಿಶ್ವವಿದ್ಯನಿಲಯದಲ್ಲಿ ಹಮ್ಮಿಕೊಂಡಿದ್ದ ಬುಡಕಟ್ಟು ಯುವಕರ ಜಾಗೃತಿ ತರಬೇತಿ ಶಿಬಿರದಲ್ಲಿ ಕೊರಗ ಯುವಕರನ್ನು ವ್ಯಕ್ತಪಡಿಸಿದ ಅಭಿಪ್ರಾಯ)

೫. ಆರ್ಥಿಕವಾಗಿ ಸುಸ್ಥಿತಿಯಲ್ಲಿಲ್ಲದ ಕಾರಣ ಕೂಲಿಗಾಗಿ ಅನ್ಯ ಸಮುದಾವಯವನ್ನೇ ಅವಲಂಬಿಸಿ ಬದುಕಬೇಕಾದ ಅನಿವಾರ್ಯತೆ ಇವರ ಸಾಮಾಜಿಕ ನ್ಯಾಯದ ಹೋರಾಟಕ್ಕೆ ಹಿನ್ನೆಡೆಯಾಗಿದೆ.

೬. ಶಿಕ್ಷಣ ಜ್ಞಾನವು, ಸಾಮಾಜಿಕ ಹೊಣೆಗಾರಿಕೆಯನ್ನು ಹೆಚ್ಚಿಸುವುದು ಸ್ವಲ್ಪಮಟ್ಟಿಗೆ ಆರ್ಥಿಕವಾಗಿ ಮುಂದುವರಿಯಲು ಅವಕಾಶ ಸಿಗಬಹುದು ಆದರೆ ಸ್ಥಾನಮಾನದ ಪ್ರಶ್ನೆ ಬಂದಾಗ ಸಾಮಾಜಿಕ ಹಿನ್ನೆಲಯೇ ನಿರ್ಣಾಯಕ.

೭. ಮಧ್ಯಮಗಳು ಉಳ್ಳವರ ಪರ ಇರುವುದರಿಂದ ಕೊರಗರಿಗೆ ಆಗುವ ಅನ್ಯಾಯ ಮತ್ತು ಅಪಮಾನಗಳನ್ನು ಪರಿಗಣಿಸಿ ಮಾಧ್ಯಮದಲ್ಲಿ ಪ್ರಕಟಿಸುವುದು ತೀರ ವಿರಳ.

೮. ಆದಿವಾಸಿ ಬುಡಕಟ್ಟು ಎಂಬ ವಿಶೇಷಣವನ್ನು ಹೊಂದಿದ್ದರೂ, ಯಾವುದೇ ಹೆಚ್ಚಿನ ಅನಕೂಲಗಳನ್ನು ಪಡೆದುಕೊಳ್ಳುವಲ್ಲಿ ಕೊರಗ ಸಮುದಾಯ ಯಶಸ್ವಿಯಾಗಿಲ್ಲ. ಅಥವಾ ಈ ಸಮುದಾಯದ ಆರ್ಥಿಕ ಹಾಗೂ ಸಾಮಾಜಿಕ ಸ್ಥಿತಿಯಿನ್ನು ಸುಧಾರಿಸಲು ಸಂಬಂಧಪಟ್ಟ ಇಲಾಖೆಗಳು ಆಸಕ್ತಿ ವಹಿಸುತ್ತಿರುವುದು ಕಂಡುಬರುವುದಿಲ್ಲ.

೯. ಬೆಳ್ತಂಗಡಿ, ಬಂಟವಾಳ, ಮಂಗಳೂರು ಮತ್ತು ಪುತ್ತೂರು ತಾಲ್ಲೂಕುಗಳಲ್ಲಿ ವಾಸ್ತವ್ಯವಿರುವ ಕೆಲವು ಕೊರಗ ಸಮುದಾಯಗಳು ಕ್ರೈಸ್ತ ಧರ್ಮಕ್ಕೆ ಬಹಳ ಹಿಂದೆಯೇ ಮತಾಂತರ ಹೊಂದಿರುವುದಾಗಿ ತಿಳಿದು ಬರುತ್ತದೆ. ಇವರು ಕ್ರೈಸ್ತರು ಎಂದೇ ಗುರುತಿಸಿಕೊಳ್ಳುತ್ತಿದ್ದಾರೆಯೇ ಹೊರತು ಕೊರಗರು ಎಂದು ಕೇಳಿಕೊಳ್ಳುವುದಿಲ್ಲ.

೧೦. ಕ್ರೈಸ್ತರು ಅಥವಾ ಕ್ರೈಸ್ತರಲ್ಲದ ಕೊರಗರು ಭೂಮಿ ಉಳ್ಳವರಾಗಿದ್ದಾರೆ. (೧ ರಿಂದ ೨.೫ ಎಕರೆ ಕೃಷಿಯ ಮೂಲಕ ಒಂದಿಷ್ಟು ಆದಾಯ ಬರುವುದರಿಂದ ಸ್ವಾವಲಂಬಿಗಳಾಗಿ ಬದುಕಲು ಸಾಧ್ಯವಾಗಿದೆ.

## ಉಪಸಂಹಾರ

**ಪೀಠಿಕೆ** ಪ್ರತಿ ಜೀವಿ ಬದುಕಿ ಉಳಿಯಲು ಬಯಸುತ್ತದೆ. ಇದರಲ್ಲಿ ಮಾನವರು ಬದುಕಿನೊಂದಿಗೆ ಮೊದಲು ಹಣ ಮತ್ತು ನಂತರ ಅಧಿಕಾರ, ಅಂತಸ್ತು ಅಂತಿಮವಾಗಿ ಕೀರ್ತಿಗೆ ಪ್ರಯತ್ನಿಸುತ್ತಾರೆ. ಆದರೆ ಕ್ರೈಸ್ತ ಬುಡಕಟ್ಟು ಸಮುದಾಯದವರಿಗೆ ಇವೆಲ್ಲ ಕೊರತೆಯಿದ್ದು ಇವುಗಳ ಪ್ರಾಪ್ತಿಗೆ ಪ್ರಯತ್ನಿಸದೇ ಇರುವುದೇ ವಿಷಾದನೀಯ. ಬುದ್ಧಿಯನ್ನು ವಂಶವಾಹಿಯಾಗಿ ಪಡೆದು ಜನಿಸಿದ ಶಿಷ್ಟ ಸಮಾಜದವರು ತಮ್ಮ ಪ್ರದೇಶದ ಇತರ ಅಜ್ಞಾನಿ ಮತ್ತು ಅಮಾಯಕರಾದ ಬುಡಕಟ್ಟು ಸಮುದಾಯದವರನ್ನು ಶೋಷಣೆಗೆ ಒಳಪಡಿಸಿ, ಅವರ ಮೇಲೆಯೇ ಅಧಿಕಾರ ಚಲಾಯಿಸಿ ಬುಡಕಟ್ಟು ಸಮುದಾಯದವರು ಹತಾಶರಾಗಿ ಜನಮನದಿಂದ ಶಿಷ್ಟ ಸಮಾಜದಿಂದ ದೂರ ಉಳಿಯಲು ಬಯಸುತ್ತಾರೆ. ಏಕೆಂದರೆ ಈ ನೆಲದ ಗುಣಗಳು ಹಾಗೂ ಸಂಸ್ಕೃತಿ ಅವರ ಮೇಲೆ ಪರಿಣಾಮ ಮೂಡಿರುವುದರಿಂದಲೇ ಕರ್ನಾಟಕದ ಕ್ರೈಸ್ತ ಬುಡಕಟ್ಟುಗಳನ್ನು ಅಲ್ಪ ತೃಪ್ತರು, ನಂಬಿಕೆಗೆ ಅರ್ಹರು ಎಂದು ಗುರುತಿಸುತ್ತಾರೆ.

ಕ್ರೈಸ್ತ ಬುಡಕಟ್ಟು ಸಮುದಾಯದವರ ಚಿಂತನೆಯಿಂದ ಹೊರ ಬರುವ ನಿಗೂಢ ಸತ್ಯಗಳನ್ನು ವಿಶ್ಲೇಷಿಸಿ ಸರಿಯಾದುದನ್ನು ಉಳಿಸುವುದೇ ಅಧ್ಯಯನದ ಮುಖ್ಯ ಉದ್ದೇಶ. ಇಂದು ಕ್ರೈಸ್ತ ಬುಡಕಟ್ಟು ಸಮುದಾಯಗಳನ್ನು ಕುರಿತ ವೈಜ್ಞಾನಿಕ ಸಂಶೋಧನೆಗಳು ನಡೆಯುತ್ತಿದೆ. ಅದರಲ್ಲಿ ಸಫಲತೆ ಕಂಡ ಮೇಲೆ ಈ ಸಮುದಾಯದ ಬಗೆಗೆ ಅರಿಯಲು ತಯಾರಾಗಬೇಕಾಗಿದೆ. ಆದರೆ ಅಲ್ಲಿಯವರೆಗೆ ಕಾಯುವ ಅಗತ್ಯ ಇರಬಾರದು ಎಂಬ ಉದ್ದೇಶದಿಂದ ಈ ಸಮುದಾಯಗಳ ಕುರಿತು ಅಭ್ಯಾಸ ಹಾಗೂ ಅಧ್ಯಯನ ಮಾಡಿದ್ದರ ವಿಷಯಗಳು ಈ ಅಧ್ಯಯನದಲ್ಲಿ ಪ್ರತಿಬಿಂಬಿತವಾಗಿದೆ.

ಈ ಎಲ್ಲಾ ಹಿನ್ನೆಲೆಗಳನ್ನು ಸಮಗ್ರವಾಗಿ ಕ್ರೋಡೀಕರಿಸಿ ಒಂದೇ ಒಂದು ಮಾತಿನಲ್ಲಿ ಹೇಳುವುದಾದರೆ, ಕನ್ನಡ ನಾಡಿನಲ್ಲಿ ಕ್ರೈಸ್ತ ಬುಡಕಟ್ಟುಗಳು ಬದುಕಿ ಬಾಳಬೇಕು.ಮತ್ತು ಅವರ ಅಭಿವೃದ್ಧಿ ಮತ್ತು ಪರಂಪರೆಯ ರಕ್ಷಣೆ ಇವೆರಡೂ ಇಂದು ಅಗತ್ಯ. ಈ ಸಮುದಾಯದ ಹಿತಾಶಕ್ತಿಗಳನ್ನು ಕಾಪಾಡುವ ಪ್ರಯತ್ನ ನಡೆಯಬೇಕು. ಇಲ್ಲದೆ ಹೋದರೆ ನಾಗರಿ ಕತೆಯ ಪ್ರವಾಹದಲ್ಲಿ ಅವರೂ ಸಹ ಮುಳುಗಿ ಹೋಗುತ್ತಾರೆ.

ಆದುದರಿಂದ ಅವರ ಹಳೆಯ ಬದುಕಿನ ಆಧಾರದಲ್ಲಿಯೇ ನಿಲ್ಲದೆ ಹೊಸ ಬಾಳನ್ನು ಕಟ್ಟಲು ಇಂದು ಬುಡಕಟ್ಟು ಕ್ರೈಸ್ತರು ಮುಂದಾಗಬೇಕು. ಇಲ್ಲದಿದ್ದಲ್ಲಿ ಸಾಂಸ್ಕೃತಿಕ ಸಂಪರ್ಕವೂ ಕೂಡ ಹಲವಾರು ಸಮಸ್ಯೆಗಳನ್ನು ಉಂಟು ಮಾಡುತ್ತದೆ. ಆದಿವಾಸಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೊಳಿಸುವುದಕ್ಕೂ ಮುಂಚೆ ಅವರ ಸಮಸ್ಯೆಗಳನ್ನು ಅರಿತುಕೊಳ್ಳುವುದು ಮುಖ್ಯ.

ಸಾಮಾಜಿಕ ಸಂಘಟನೆ, ಆರ್ಥಿಕ ವ್ಯವಸ್ಥೆ, ಧಾರ್ಮಿಕ ಲಕ್ಷಣಗಳು, ಸಾಂಸ್ಕೃತಿಕ ಸಂಪರ್ಕದ ಮಟ್ಟ ಮುಂತಾದವುಗಳನ್ನು ಲಕ್ಷದಲ್ಲಿರಿಸಿಕೊಂಡಾಗ ಸಮಸ್ಯೆಗಳನ್ನು ಗುರುತಿಸುವ ಕಾರ್ಯಗಳು ಪರಿಹಾರವಾಗಿ ಅಭಿವೃದ್ಧಿಯ ಹಿಡಿತವು ಬದಲಾಗುತ್ತದೆ. ಬುಡಕಟ್ಟು ಕ್ರೈಸ್ತರ ಜನ ಸಮೂಹದ ಪ್ರಮುಖ ವಾಹಿನಿಯಲ್ಲಿ ಸಮರ್ಪಕವಾಗಿ ಸೇರಲು ದಾರಿಯಾಗುತ್ತದೆ. ಇಂತಹ ಪ್ರಸ್ತಾವನೆಯ ಮೂಲಕವೇ ಆದಿವಾಸಿಗಳಿಗೆ ಸಂರಕ್ಷಣೆ ನೀಡಿರುವ ಸಂವಿಧಾನದ ಬದ್ಧತೆಯನ್ನು ಜಾರಿಗೊಳಿಸಬಹುದಾಗಿದೆ.

## ಅಧ್ಯಯನದ ಫಲಿತಗಳು

೧. ೨೦೦೬ರಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರ್ಪಡೆಯಾಗಿರುವ ಸಿದ್ದ ಸಮುದಾಯ ಸಂವಿಧಾನಬದ್ಧವಾಗಿ ದೊರೆಯುವ ಸೌಲಭ್ಯವನ್ನು ಸಂಪೂರ್ಣವಾಗಿ ಬಳಸಿಕೊಳ್ಳಲು ಸಾಧ್ಯವಾಗಿಲ್ಲ.

೨. ಸ್ವತಃ ಸಿದ್ದಿ ಸಮುದಾಯದ ಹಿಂಜರಿತವೋ ಅಥವಾ ಸ್ಥಳೀಯ ಸಮುದಾಯಗಳ ಧೋರಣೇಯೋ ಇಂದಿಗೂ ಅಪ್ರಿಕಾ ಮೂಲಕ "ಸಿದ್ದಿ"ಗಳನ್ನು ಪ್ರತ್ಯೇಕವಾಗಿಯೇ ಪರಿಗಣಿಸಲಾಗುತ್ತಿದೆ. ಅಥವಾ ಅವರೇ ಪ್ರತ್ಯೇಕತೆಯನ್ನು ಬಯಸುತ್ತಿರುವಂತಿದೆ.

೩. ಕ್ರೈಸ್ತ ಮಿಷನರಿಗಳಲ್ಲಿ ಓದುತ್ತಿರುವ ಸಿದ್ದಿ ಮಕ್ಕಳು ಹೆಚ್ಚು ಮುಕ್ತವಾಗಿ ಎಲ್ಲರೊಡನೆ ಬೆರೆತು, ತಮ್ಮ ಪ್ರತಿಭೆಯನ್ನು ಅಭಿವ್ಯಕ್ತಿಗೊಳಿಸುವ ಅವಕಾಶಗಳಿವೆ.

೪. ಸಿದ್ದಿಯರಲ್ಲಿ ಕ್ರೈಸ್ತರಾಗಿರುವವರೇ ಹೆಚ್ಚು ವಿದ್ಯಾವಂತರಾಗಿದ್ದು, ಸರ್ಕಾರಿ ಮತ್ತು ಖಾಸಗಿ ಸಂಸ್ಥೆಗಳ ಹುದ್ದೆಯಲ್ಲಿದ್ದಾರೆ. ಹಾಗೂ ಹೆಚ್ಚು ಭರವಸೆಯಿಂದ ಬದುಕು ಸಾಗಿಸುತ್ತಿದ್ದಾರೆ.

೫. ಮನೆಯಲ್ಲಿ ಅಚ್ಚುಕಟ್ಟು ಮನೆಯ ಮುಂದೆ ಕೈತೋಟ ಬೆಳೆಸಿ ಬಹಳ ಶಿಸ್ತಿನ ಬದುಕನ್ನು ರೂಢಿಸಿಕೊಂಡಿದ್ದಾರೆ.

೬. ಹೆಚ್ಚಿನ ಶಿಕ್ಷಣವನ್ನು ಪಡೆದು ಹೊರ ರಾಷ್ಟ್ರದಲ್ಲಿ ಹೋಗಿ ನೌಕರರಿಗೆ ಸೇರಿಕೊಂಡಿದ್ದಾರೆ. ವರ್ಷದಲ್ಲಿ ಒಮ್ಮೆ ಅಥವಾ ಎರಡು ಬಾರಿ ತಮ್ಮ ಊರಿಗೆ ಬರುತ್ತಾರೆ. ಅವರ ಕುಟುಂಬವು ಆರ್ಥಿಕವಾಗಿ ಸಾಕಷ್ಟು ಅಭಿವೃದ್ಧಿ ಹೊಂದಿರುವುದು

ಕಂಡು ಬರುತ್ತದೆ.

೭. ಜೊತೆ ಜೊತೆಯಲ್ಲಿ ಬದುಕುತ್ತಿರುವ ಮುಸ್ಲಿಂ ಸಿದ್ದಿಗಳು ಆರ್ಥಿಕ ಮೂಲಕ ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಆದರೆ ಅವರಲ್ಲಿ ಅಚ್ಚುಕಟ್ಟುತನ ಕಡಿಮೆ ಎಂದೇ ಹೇಳಬೇಕು.

೮. ಹಿಂದೂ ಸಿದ್ದಿಗಳು ಸಹ ಸ್ಥಳೀಯವಾಗಿ ಕೃಷಿ ಮತ್ತು ಕೃಷಿ ಕೂಲಿಗಾಗಿ ಕೆಲಸ ನಿರ್ವಹಿಸುವರು. ಕಡಿಮೆ ಆದಾಯ ಜೀವನ ಮಟ್ಟವು ಉತ್ತಮವಾಗಿಲ್ಲ. ಆದರೂ ಆದಾಯ ಮೂಲಗಳಾದ ಕೋಳಿ ಸಾಕಾಣೆ, ಕೌದಿ ಎಣೆಯುವುದು ಕಂಡು ಬರುತ್ತದೆ.

೯. ಒಟ್ಟಾರೆ ಸಿದ್ದಿ ಬುಡಕಟ್ಟು ಸಮುದಾಯವನ್ನು ಗಮನಿಸಿದಾಗ ವ್ಯಾಪಾರದಲ್ಲಿ ತೊಡಗಿಸಿಕೊಂಡವರ ಸಂಖ್ಯೆ ಬಹಳ ಕಡಿಮೆ, ಕಾರಣ ಆರ್ಥಿಕ ಸಮಸ್ಯೆಯು ಇದಕ್ಕೆ ಕಾರಣವಾಗಿರುವ ಸಾಧ್ಯತೆಯಿಂದ.

೧೦. ಸಲ ಪಡೆಯುವುದು ಬಹಳ ಶ್ರಮದ ಕೆಲಸ ಮ್ತು ಸಾಲದ ಅರ್ಧ ಮೊತ್ತದಷ್ಟು ಹಣವು ಸಾಲ ಮಂಜೂರಾತಿಗಾಗಿ ಅಡ್ಡಾಡುವುದರಲ್ಲೆ ಖರ್ಚಾಗುತ್ತದೆಯಲ್ಲದೆ ಸಾಲದ ಉದ್ದೇಶವೇ ಈಡೇರುವುದಿಲ್ಲ.

೧೧. ಸುಮಾರು – ವರುಷಗಳ ಹಿಂದೆಯೇ ಕ್ರೈಸ್ತರಾಗಿ ಮತಾಂತರ ಹೊಂದಿದ ಕೊರಗರು ಇಂದು ಕ್ರೈಸ್ತರು ಎಂದೇ ಗುರುತಿಸಿಕೊಳ್ಳುತ್ತಿದ್ದಾರೆಯೇ ಹೊರತು ಕೊರಗರು ಅಥವಾ ಕೊರಗ ಕ್ರೈಸ್ತರು ಎಂದಲ್ಲ.

೧೨. ಸಾಮಾಜಿಕ ಸ್ಥಾನವು ಹಿಂದೂ ಕೊರಗರಿಗಿಂತ ಉತ್ತಮವಾಗಿದೆಯಲ್ಲದೆ ಇವರಲ್ಲಿ ರೂಢಿಯಲ್ಲಿರುವಂತೆ ಯಾವುದೇ ಅನಿಷ್ಟ ಪದ್ಧತಿಗಳು ಕ್ರೈಸ್ತ ಕೊರಗರಲ್ಲಿಲ್ಲ.

೧೩. ಪ್ರಧಾನವಾಗಿ ಕೃಷಿ ಮತ್ತು ಕೃಷಿ ಕೂಲಿಯನ್ನು ಅವಲಂಬಿಸಿ ಬದುಕುತ್ತಿರುವ ಇವರಿಗೆ ಆರ್ಥಿಕ ಸ್ಥಿತಿಯು ಸುಧಾರಿಸಿದೆ.

೧೪. ಕ್ರೈಸ್ತ ಮಿಷನರಿಗಳ ಸಹಕಾರ ಮತ್ತು ಸಹಾಯದಿಂದ ಶಿಕ್ಷನ ಪಡೆಯುವುದು ಸಾಧ್ಯವಾದ ಕಾರಣ ಸರ್ಕಾರಿ, ಅರೆ ಸರ್ಕಾರಿ ಖಾಸಗಿ ಸಂಸ್ಥೆಗಳಲ್ಲಿ (ಕ್ರೈಸ್ತ ಮಿಷನರಿಗಳನ್ನು ಒಳಗೊಂಡಂತೆ ) ಕೆಲಸ ನಿರ್ವಹಿಸುತ್ತಿದ್ದಾನೆ.

೧೫. ಕ್ರೈಸ್ತ ಸಂಸ್ಥೇಯ ಪ್ರಭಾವದ ಕಾರಣ ಶಿಸ್ತುಬದ್ಧವಾದ ಬದುಕನ್ನು ಸಾಗಿಸುವುದು ಸಾಧ್ಯವಾಗಿದೆ.

೧೬. ಆಹಾರ ಪದ್ಧತಿ, ಉಡುಗೆ – ತೊಡುಗೆಯಲ್ಲೂ ಸುದಾರಣೆಯಾಗಿದ್ದು ಸಮಾಜದಲ್ಲಿ ಕೀಳರಿಮೆ ಮನೋಭಾವನ್ನು ಹೊಂದುವ ಸ್ಥಿತಿ ಇವರಲ್ಲಿಲ್ಲ.

೧೭. ಅತ್ಯಂತ ಬಡತನದಲ್ಲಿದ್ದು ಅನಿವಾರ್ಯ ಕಾರಣಗಳಿಂದ ಅಂದು ಕ್ರೈಸ್ತರಾಗಿ ಮತಾಂತರ ಹೊಂದಿದ್ದರು. ಇಂದು ಸ್ವಯಂ ಪ್ರೇರಣೆಯಿಂದ ಧರ್ಮವನ್ನು ಧರ್ಮದ ಕಟ್ಟಳೆಗಳನ್ನು ಪಾಲಿಸುತ್ತಿದ್ದಾರೆ.

ಇವರ ಭಾಷೆ ತುಳು, ಕೊರಗ ಭಾಷೆ ಮತ್ತು ಸಂಸ್ಕೃತಿ ಇವರಿಂದ ಕಣ್ಮರೆಯಾಗಿ ಹೋಗಿದೆ. ಆದ್ದರಿಂದ ಇವರನ್ನು ಕೊರಗರೆಂದು ಗುರ್ತಿಸುವುದು ಸಾಧ್ಯವಿಲ್ಲ.

**ಸಲಹೆಗಳು**

೧. ಅಧ್ಯಯನಕ್ಕೆ ಒಳಪಡಿಸಿರುವ ಕೊರಗ ಮತ್ತು ಸಿದ್ದಿ ಬುಡಕಟ್ಟು ಸಮುದಾಯಗಳು ಆದಷ್ಟು ಶೀಘ್ರದಲ್ಲಿ ಶಿಕ್ಷಣ ಪಡೆಯಲು ಸೂಕ್ತ ಕ್ರಮಕೈಗೊಳ್ಳುವುದು ಅವಶ್ಯಕ.

೨. ಕೊರಗ ಮತ್ತು ಸಿದ್ದ ಬುಡಕಟ್ಟು ಮಕ್ಕಳಿಗೆ ವಸತಿಶಾಲೆ ಆರಂಭಿಸಿ ಆಯಾ ಸಮುದಾಯದ ಒಂದಿಬ್ಬರು ಶಿಕ್ಷಕರು ಹಾಊ ಸಿಬ್ಬಂದಿ ವರ್ಗದವರನ್ನು ನೇಮಿಸಿಕೊಳ್ಳುವ ಮೂಲಕ ಸಮುದಾಯದ ಮಕ್ಕಳಿಗೆ ನೈತಿಕ ಬೆಂಬಲ ನೀಡಬಹುದಾಗೆ.

೩. ಕ್ರೈಸ್ತ ಕೊರಗ ಮತ್ತು ಸಿದ್ದಿ ಮಕ್ಕಳಿಗೆ ವಸತಿ ಶಾಲೆಯನ್ನು ಕಾಡಿನ ಅಂಚಿನಲ್ಲಿ ಆರಂಭಿಸಿ ತರಗತಿಯ ಒಳಗೆ ಕಳಿಸುವ ಬದಲು ಬಯಲಿನಲ್ಲಿ ಮರದ ಕೆಳಗೆ ಕುಳ್ಳಿರಿಸಿ ಮಕ್ಕಳ ಮನಸ್ಸಿನ ಇಂಗಿತವನ್ನು ಅರ್ಥೈಸಿಕೊಂಡು ಮುಕ್ತವಾಗಿ ಕಲಿಕೆಯಲ್ಲಿ ತೊಡಗುವಂತೆ ಪ್ರೇರೇಪಿಸುವುದು ಸೂಕ್ತ.

೪. ಕೊರಗ ಮತ್ತು ಸಿದ್ದಿ ಸಮುದಾಯದ ಮಕ್ಕಳಿಗೆ ಶಿಕ್ಷನದ ಜೊತೆಗೆ ಕ್ರೀಡೆಯಲ್ಲಿ ಆಸಕ್ತಿ ಮೂಡಿಸಿ ತರಬೇತಿ ನೀಡುವುದರಿಂದ ಉತ್ತಮ ಭವಿಷ್ಯ ರೂಪಿಸುವುದು ಸಾಧ್ಯವಿದೆ. (ಈಗಾಗಲೇ ಕೆಲವು ಸಿದ್ದ ಮಕ್ಕಳಿಗೆ ಬೆಂಗಳೂರಿನಲ್ಲಿ ಕ್ರೀಡಾ ತರಬೇತಿ ನೀಡಲಾಗುತ್ತಿದೆ.)

೫. ಸಂವಿಧಾನಬದ್ಧವಾಗಿ ದೊರೆಯಬೇಕಾದ ಸೌಲಭ್ಯಗಳನ್ನು ಬುಡಕಟ್ಟು ಸಮುದಾಯವೇ ಪಡೆಯುವಂತಾಗಲು ಯುವಕರು ಜಾಗೃತಿ ತರಬೇತಿ ಶಿಬಿರಗಳನ್ನು ಜಿಲ್ಲಾವಾರು ಏರ್ಪಡಿಸುವುದು ಹೆಚ್ಚು ಉಪಯುಕ್ತ (ಈಗಾಗಲೇ ಕನ್ನಡ ವಿಶ್ವವಿದ್ಯಾಲಯ ಹಂಪಿ, ಬುಡಕಟ್ಟು ಅಧ್ಯಯನ ವಿಭಾಗವು ಬುಡಕಟ್ಟು ಸಂಶೋಧಕ ಕೇಂದ್ರ, ಬೆಂಗಳೂರು ಇವರ ನೆರವಿನ ಅಡಿಯಲ್ಲಿ ಸುಮಾರು ೧೨ ಜಾಗೃತಿ ಶಿಬಿರಗಳನ್ನು ಹಮ್ಮಿಕೊಳ್ಳಲಾಗಿ ಇದರಲ್ಲಿ ಮೂರು ಶಿಬಿರಗಳು ಬುಡಕಟ್ಟು ಯುವಕರಿಗಾಗಿ ನಡೆಸಲಾಗಿದೆ.

೬. ಸಾಮಾನ್ಯವಾಗಿ ಬುಡಕಟ್ಟು ಸಮುದಾಯಗಳಲ್ಲಿ ಬೇಡ ಮತ್ತು ಮೇದ ಸಮುದಾಯಗಳನ್ನು ಹೊರತುಪಡಿಸಿ ಪ್ರಮುಖವಾಹಿನಿಯಿಂದ ದೂರದಲ್ಲಿದ್ದು ಯಾವ ಕಚೇರಿಯಿಂದ ಯಾವ ಸೌಲಭ್ಯ ಸಿಗುತ್ತದೆ ಎಂಬ ಅರಿವು ಇರುವುದಿಲ್ಲ. ಆದ ಕಾರಣ ಜಾಗೃತಿ ಶಿಬಿರದಲ್ಲಿ ಪ್ರತಿಯೊಂದು ಇಲಾಖೆಯ ಅಧಿಕಾರಿಗಳು ತಮ್ಮನ್ನು ಪರಿಚಯಿಸುವುದೇ ಅಲ್ಲದೇ ಆಯಾ ಇಲಾಖೆಯ ಕಾರ್ಯವೈಖರಿ ಕುರಿತು ಸಾರ್ವಜನಿಕರಿಗೆ ಅವರಿಂದ ಸಲ್ಲಿಸುವ ಸೇವೆಗಳನ್ನು ಕುರಿತು ಮಾಹಿತಿ ನೀಡಬೇಕು.

೭. ಉದಾಹರಣೆಗೆ ಜಿಲ್ಲಾ ಅಥವಾ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ಪರಿಶಿಷ್ಟ ಪಂಗಡದ ವಿಶೇಷ ಅಧಿಕಾರಿಗಳು, ತಹಶೀಲ್ದಾರ್, ಬ್ಯಾಂಕ್ ಮ್ಯಾನೇಜರ್, ಪೊಲೀಸ್ ಅಧಿಕಾರಿ, ಅರಣ್ಯ ಇಲಾಖೆ ಅಧಿಕಾರಿಗಳು, ಆಯುರ್ವೇದ ವೈದ್ಯರು, ಸ್ವಯಂ ಸೇವಾ ಸಂಸ್ಥೆ, ಮುಖ್ಯಸ್ಥರು, ಧರ್ಮಾಧಿಕಾರಿಗಳು (ಹಿಂದೂ ಸ್ವಾಮೀಜಿ, ಕ್ರೈಸ್ತರ ಪಾದ್ರಿ, ಇಸ್ಲಾಂ ಮುಲ್ಲಾ, ಜೈನಗುರು, ಬೌದ್ಧಬಿಕ್ಕು ಇತ್ಯಾದಿ) ಗಳನ್ನುಕರೆಯಿಸಿ ಅವರ ಮೂಲಕ ಧರ್ಮಗಳು ಹೇಗೆ ಜನಸೇವೆಯಲ್ಲಿ ತೊಡಗಿಸಿಕೊಂಡಿವೆ. ಅವುಗಳಿಂದ ಸಾರ್ವಜನಿಕರು ಏನೆಲ್ಲಾ ಅನುಕೂಲಗಳನ್ನು ಪಡೆದುಕೊಳ್ಳಬಹುದು ಎಂಬ ತಿಳಿವಳಿಕೆಯನ್ನು ಕೊಡಿಸಬೇಕು.

೮. ರಾಜ್ಯಮಟ್ಟ ಆಥವಾ ವಲಯಮಟ್ಟದಲ್ಲಿ ಬುಡಕಟ್ಟು ಕಲಾ ಸಮ್ಮೇಳನವನ್ನು ಏರ್ಪಡಿಸುವ ಮೂಲಕ ಅವರ ಕಲೆಗೆ ಪ್ರೋತ್ಸಾ ನೀಡುವುದೇ ಅಲ್ಲದೆ ಇತರೆ ಬುಡಕಟ್ಟು ಸಮುದಾಯದ ಕೆಲಗಳನ್ನು ನೋಡಿ ಪರಸ್ಪರ ವಿಚಾರ ವಿನಿಯಮ / ಸಂವಾದಕ್ಕೆ ಅವಕಾಶ ಕಲ್ಪಿಸಬೇಕು.

೯. 'ಅವರವರ ಉದ್ಧಾರ ಅವರಿಂದಲೇ' ಎಂಬ ಸತ್ಯದ ನುಡಿಯ ಅಡಿಯಲ್ಲಿ ಆಯಾ ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗೆ ಅವರೇ ತೊಡಗಿಸಿಕೊಳ್ಳುವಂತೆ ಪ್ರೋತ್ಸಾಹ ನೀಡಬೇಕು.

೧೦. ಬುಡಕಟ್ಟು ಸಮುದಾಯಗಳನ್ನು ಅಭಿವೃದ್ಧಿಪಡಿಸಬೇಕು ಎಂಬ ಉದ್ದೇಶದಿಂದ ಆರಂಭಿಸಿದ ಸ್ವಯಂ ಸೇವಾಸಂಸ್ಥೆಗಳ ಕನಿಷ್ಟ ೨೦ ರಿಂದ ೨೫ ವರ್ಷಗಳು ಮಾತ್ರ ಸೇವೆ ಸಲ್ಲಿಸಿ ಆನಂತರದಲ್ಲಿ ಸಮುದಾಯದ ಯುವಕರಿಗೆ ಅದರ ನಿರ್ವಹಣೆಯನ್ನು ಬಿಟ್ಟುಕೊಟ್ಟು ಹೊರ ಹೋಗುವುದು ಸಮುದಾಯದ ದೃಷ್ಟಿಯಿಂದ ಆರೋಗ್ಯಪೂರ್ಣ.

೧೧. ಬುಡಕಟ್ಟು ಸಮುದಾಯಗಳನ್ನು ಅಭಿವೃದ್ಧಿ ಪಡಿಸುತ್ತೇವೆ ಎಂದು ಸ್ವಯಂ ಸಂಸ್ಥೆಯನ್ನು ನಡೆಸುತ್ತಾ ಶಾಶ್ವತವಾಗಿ ಅಲ್ಲೇ ಉಳಿಯವುದು ಆ ಸಮುದಯಾವನ್ನು ಪರಾವಲಂಬಿಗಳನ್ನಾಗಿ ಮಾಡುತ್ತದೆ. ಅಲ್ಲದೇ ಅವರು ಕೇವಲ ಗುಮಾರಂತೆ ಸದಾ ಸಂಸ್ಥೆಗೆ ಋಣಿಗಳಾಗಿರಲು ಪ್ರಯತ್ನಿಸುತ್ತಾರೆ.

೧೨. ಕೇವಲ ಸಂಸ್ಥೆ ನಡೆಸುವವರೇ ದೇಸ ವಿದೇಶಗಳಿಗೆ ಹೋಗಿ ತಮ್ಮ ಸೇವೆಯ ಬಗ್ಗೆ ಹೆಗ್ಗಳಿಕೆಯನ್ನು ತೋರುವುದಕ್ಕಿಂತ ಬುಡಕಟ್ಟು ಸಮುದಾಯದ ಪ್ರತಿಭಾವಂತ ಯುವಕರನ್ನು ಕಳುಹಿಸಿಕೊಡಬೇಕು.

೧೩. ಮುಗ್ದ ಬುಡಕಟ್ಟು ಸಮುದಾಯವನ್ನು ಸಾಮಾನ್ಯವಾಗಿ ಬ್ಯಾಂಕ್‌ಗಳು, ಸಾರ್ವಜನಿಕರು, ಸಂಸ್ಥೆಗಳವರು , ಅಧಿಕಾರಿಳು ಮತ್ತು ಅರಣ್ಯ ಉತ್ಪನ್ನ ಸಂಗಹಿಸುವ ಗುತ್ತಿಗೆದಾರರು ವಂಚಿಸುವುದು ಸಾಮಾನ್ಯ ಸಂಗತಿಯಾಗಿದೆ. ಮೊದಲು ಇದನ್ನು ನಿಯಂತ್ರಿಸುವುದು ಅವಶ್ಯಕ.

೧೪. ಸ್ವಯಂ ಸೇವಾ ಸಂಸ್ಥೆಗಳು ನೇರವಾಗಿ ಸರ್ಕಾರ (ಕೇಂದ್ರ , ರಾಜ್ಯ) ಮತ್ತು ಒರ ರಾಷ್ಟ್ರಗಳ ಜೊತೆ ಸಂಪರ್ಕಿಸಿ ಕೋಟ್ಯಾಂತರ ಮೊತ್ತದ ಹಣ ಪಡೆದು ಖರ್ಚು ಮಾಡುವುದರ ಬಗ್ಗೆ ಸಾರ್ವಜನಿಕರಿಗೆ ಉತ್ತರಿಸಬೇಕಾದ ಜವಾಬ್ದಾರಿ (Accountability ) ಇರಬೇಕು.

**ಅವಲೋಕನ** ಅರಣ್ಯವಾಸಿಗಳು ಹಾಗೂ ಬುಡಕಟ್ಟು ಸಮುದಾಯಗಳನ್ನು ಕುರಿತು ಅಧ್ಯಯನ ನಡೆಸುವುದು ಸರಳವಾದ ಸಂಗತಿಯಲ್ಲ. ಏಕೆಂದರೆ ಬುಡಕಟ್ಟು ಸಮುದಾಯಗಳಲ್ಲಿ ಸಾಮಾನ್ಯವಾಗಿ ಅನುಮಾನದ ದೃಷ್ಟಿಯಿಂದಲೇ ನೋಡುವ ಪ್ರವೃತ್ತಿ ಮನೆ ಮಾಡಿದೆ. ಕೆಲವು ಬುಡಕಟ್ಟುಗಳು ಸ್ವಯಂ ಸೇವಾ ಸಂಸ್ಥೆಗಳ ತೆಕ್ಕೆಯಲ್ಲಿದ್ದಾರೆ. ಇನ್ನು ಕೆಲವು ಅಧ್ಯಯನಕಾರರು

ಅನ್ಯರ ಸಹಾಯವಿಲ್ಲದೆ ಹೋಗಲು ಅಸಾಧ್ಯವಾದ ಅರಣ್ಯದ ಒಳಭಾಗದಲ್ಲಿರುತ್ತಾರೆ. ಆದರೆ ಬುಡಕಟ್ಟುಗಳ ಒಳಿತಿನ ದೃಷ್ಟಿಯಿಂದ ಅಧ್ಯಯನಕಾರರು ಎಲ್ಲಾ ರೀತಿಯ ಸಮಸ್ಯೆಗಳನ್ನು ಎದುರಿಸಿ ತಮ್ಮ ಉದ್ದೇಶದಲ್ಲಿ ಯಶಸ್ವಿಯಾಗುವ ಪ್ರಯತ್ನ ಮಾಡಲೇಬೇಕಾಗುತ್ತದೆ.

ಬುಡಕಟ್ಟು ಮತ್ತು ಅವರ ಅಭಿವೃದ್ಧಿಗೆ ಅಧ್ಯಯನಕಾರರು ಅಥವಾ ಸಮಾಜ ವಿಜ್ಞಾನಿಗಳು ಕೊಂಡಿಯಿದ್ದಂತೆ. ಈ ನಿಟ್ಟಿನಲ್ಲಿ ಅವರ ಕೊಡುಗೆಯು ಅಪಾರ. ಭಾರತದ ನೆಲದಲ್ಲಿ ಸಮುದಾಯಗಳ ಕುರಿತ ಅಧ್ಯಯನಕ್ಕೆ ಒಂದು ಶತಮಾನಕ್ಕೆ ವಾಲ್‌ಹೌಸ್ ೧೮೭೫ ಹಿಂದಿನಿಂದಲೇ ಆರಂಭವಾಗಿದೆ. ಅವುಗಳು ಆಯಾ ಕಾಲಘಟ್ಟದ ಅಗತ್ಯಕ್ಕೆ ಅನುಗುಣವಾಗಿ ಇದ್ದಿರಲೇಬೇಕು.

ಹಾಗೆಯೇ ಭಾರತ ಸ್ವಾತಂತ್ರ್ಯ ಹೊಂದಿದ ಬಳಿಕ ಸರ್ವಾಂಗೀಣ ಅಭಿವೃದ್ಧಿಯನ್ನು ಹಮ್ಮಿಕೊಳ್ಳುವುದು ಅನಿವಾರ್ಯವಾಯಿತು. ಅಂತಹ ಸಂದರ್ಭದಲ್ಲಿ ಗೊತ್ತು ಗುರಿಯಿಲ್ಲದೆ ಅಭಿವೃದ್ಧಿ ಯೋಜನೆಗಳನ್ನು ಅನುಷ್ಠಾನಗೊಳಿಸುವುದು ಸಾಧ್ಯವಿಲ್ಲ. ಆದಕಾರಣ ವಿವಿಧ ಉದ್ದೇಶಗಳಿಗಾಗಿ ಸಮೀಕ್ಷೆ ಹಾಗೂ ಅಧ್ಯಯನಗಳು ನಡೆದವು. ಅಲ್ಲಿಂದ ಮೊದಲ್ಗೊಂಡು ಇಂದಿನವರೆಗೂ ಮುಂದುವರೆದಿದೆ. ವಿಶೇಷವಾಗಿ ಸಮುದಾಯಗಳನ್ನು ಕುರಿತು ನಡೆದಿರುವ ಸಮೀಕ್ಷೆ ಮತ್ತು ಅಧ್ಯಯನಗಳಲ್ಲಿ ಬುಡಕಟ್ಟುಗಳನ್ನು ನಡೆದಿರುವ ಅಧ್ಯಯನ ಬಹಳ ಕಡಿಮೆ ಎಂದೇ ಹೇಳಬೇಕು. ಏಕೆಂದರೆ ಸ್ವಾತಂತ್ರ್ಯದ ಅನಂತರವು ಭಾರತದ ನೂರಾರು ಬುಡಕಟ್ಟುಗಳು ಅಜ್ಞಾತವಾಗಿಯೇ ಉಳಿದಿದ್ದವು. ಸಂವಿಧಾನದ ಮೇಲೆ ಧ್ಯೇಯೋದ್ದೇಶಗಳಲ್ಲಿ ಉದ್ಧರಿಸಿರುವಂತೆ "ಸರ್ವರಿಗೂ ಸಮಪಾಲು, ಸರ್ವರಿಗೂ ಸಮಬಾಳು" ಎಂಬ ತತ್ವದ ಅಡಿಯಲ್ಲಿ ಕಾರ್ಯ ಆರಂಭಿಸಿತು. ಅಂದಿನ ಕೇಂದ್ರ ಸರ್ಕಾರವು ಸಹಜವಾಗಿ ಅಭಿವೃದ್ಧಿ ಯೋಜನೆಗಳ ಮೂಲಕ ರಾಷ್ಟ್ರದ ಎಲ್ಲಾ ಜನವರ್ಗಗಳಿಗೆ, ವಿಶೇಷವಾಗಿ ಬುಡಕಟ್ಟು ಜನರಿಗೆ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಾಕಷ್ಟು ಪ್ರಗತಿಯನ್ನು ಸಾಧಿಸಿದೆ. ಅಭಿವೃದ್ಧಿ ಕಾರ್ಯಗಳು ಕೇವಲ ಏಕಮುಖವಾದುದಲ್ಲ. ಸರ್ಕಾರ ಹಾಗೂ ಅಭಿವೃದ್ಧಿ ಹೊಂದಬೇಕಾಗಿರುವ ಸಮುದಾಯಗಳು ಇವರ ನಡುವೆ ಯೋಜನೆಯನ್ನು ಜನರಿಗೆ ತಲುಪಿಸಬೇಕಾಗಿರುವ ಸಂಬಂಧಪಟ್ಟ ವಿವಿಧ ಹಂತದ ಅಧಿಕಾರಿಗಳು ಸೇರಿ ಒಮ್ಮನಸ್ಸಿನಿಂದ ಇದ್ದಾಗ ಮಾತ್ರ ಉದ್ದೇಶಿತ ಯೋಜನೆ ಯಶಸ್ಸನ್ನು ಕಾಣುತ್ತದೆ. ಈಗಾಗಲೇ ಹತ್ತು ಹಲವಾರು ಯೋಜನೆಗಳು

ಬುಡಕಟ್ಟುಗಳ ಅಭಿವೃದ್ಧಿಗಾಗಿ ಅನುಷ್ಠಾನಗೊಳಿಸಿದಾಗ್ಯೂ ಇಂದಿಗೂ ಅವರು ನಿರೀಕ್ಷಿತ ಮಟ್ಟದಲ್ಲಿ ಫಲ ನೀಡಿಲ್ಲ. ಇದಕ್ಕೆ ಕಾರಣಗಳು ಅನೇಕ.

ಇತ್ತೀಚಿನ ದಶಕದಲ್ಲಿ ಅಭಿವೃದ್ಧಿ ಯೋಜನೆಗಳು ಹೆಚ್ಚು ಫಲಕಾರಿಯಾಗಬೇಕು ಎಂಬುದನ್ನು ಮನಗಂಡು ಸರ್ಕಾರವು ವೈಜ್ಞನಿಕವಾಗಿ ಯೋಜನೆಗಳನ್ನು ರೂಪಿಸಲು ಪ್ರಯತ್ನಿಸುತ್ತಿದೆ. ಅದಕ್ಕಾಗಿಯೇ ಪ್ರತಿಯೊಂದು ಸಮುದಾಯಗಳ ಸೂಕ್ಷ್ಮ ಅಧ್ಯಯನ ನಡೆಸುವ ಮೂಲಕ ಪ್ರತಿಯೊಂದು ಬಡಕಟ್ಟಿನ ಸಮಸ್ಯೆಗಳನ್ನು ನಿರ್ದಿಷ್ಟವಾಗಿ ಗುರುತಿಸಿಬಹುದು ಹಾಗೂ ಅಂತಹ ಸಮಸ್ಯೆಗಳ ಸೂಕ್ತವಾದ ಪರಿಹಾರವನ್ನು ಕಂಡುಕೊಳ್ಳುವುದು ಸಾಧ್ಯವಿದೆ. ಇದಲ್ಲದೆ ಬುಡಕಟ್ಟು ಸಮುದಾಯಗಳ ತ್ವರಿತ ಏಳಿಗೆಗಾಗಿ ಅನುಕೂಲವಾಗುವಂತೆ ಪ್ರಾದೇಶಿಕ ಮಟ್ಟದಲ್ಲಿ ಬುಡಕಟ್ಟು ನಿರ್ದೇಶನ ಕೇಂದ್ರಗಳನ್ನು ವಿಸ್ತಿರಿಸುವುದು ಒಂದು ಗುಣಾತ್ಮಕ ಅಂಶವಾಗಿದೆ. ಇಂತಹ ಕೇಂದ್ರದ ಅಧಿಕಾರವರ್ಗದವರು ರಾಜ್ಯದಾದ್ಯಂತ ಇರುವ ವಿಶ್ವವಿದ್ಯಾಲಯಗಳು, ಸ್ವಯಂ ಸೇವಾ ಸಂಸ್ಥೆಗಳು ಹಾಗೂ ಬುಡಕಟ್ಟು ಸಂಘ ಸಂಸ್ಥೆಗಳ ಜೊತೆಗೂಡಿ ಸಮಾಲೋಚನೆಯನ್ನು ನಡೆಸಿ ಸಮರ್ಪಕ ಕಾರ್ಯಕ್ರಮಗಳನ್ನು ರೂಪಿಸುವಲ್ಲಿ ತೊಡಗಿಸಿಕೊಂಡಿದ್ದಾರೆ. ಇದರಿಂದ ಹತ್ತು ಹಲವಾರು ಮಾದರಿಯ ಪ್ರಗತಿಪೂರಕ ಕೆಲಸಗಳು ಆಗುತ್ತವೆ ಎಂಬ ಭರವಸೆಗಳನ್ನು ಹೊಂದಬಹುದು.




ದೀಕ್ಷಾಸ್ನಾನದ ಆಮಂತ್ರಣ ಪತ್ರ



ದೀಕ್ಷಾಸ್ನಾನದ ಅನಂತರ ಜರುಗುವ ಆಚರಣೆ



ದೀಕ್ಷಾಸ್ನಾನದಲ್ಲಿ ಯಾಜಕರಿಂದ ಅಭ್ಯಂಜನ



ಕೊರಗ ಕ್ರೈಸ್ತರ ವಿವಾಹ ಕಾರ್ಯಕ್ರಮ




ಕೊರಗ ಕ್ರೈಸ್ತರ ವಿವಾಹಪೂರ್ವ ಆಚರಣೆ



ಕೊರಗ ಕ್ರೈಸ್ತರ ವರನಿಂದ ವಧುವಿಗೆ ತಾಳಿ ಕಟ್ಟುವುದು



ಶ್ರಮದಾನದ ಸಂದರ್ಭದಲ್ಲಿ ಸಿದ್ದಿ ಯುವಕರು



ಪ್ರವಾಸದಲ್ಲಿ ಸಿದ್ದಿ ಯುವಕ ಯುವತಿಯರು



ವಿಶೇಷ ಸಂದರ್ಭದಲ್ಲಿ ಸಾಮೂಹಿಕ ಊಟ



ಕ್ರೀಡಾಶಕ್ತ ಸಿದ್ದಿ ಯುವಕ



ಸಿದ್ದಿ ಯುವಕ ಕೂಲಿ ಕಾರ್ಮಿಕನಾಗಿ



ಅರಣ್ಯ ಕಾವಲುಗಾರನಾಗಿ ಸಿದ್ದಿ



ಅರಣ್ಯ ಕಾವಲುಗಾರ ಮತಿಯಾಸ್ ಸಿದ್ದಿ
ಕಾರ್ಯನಿರತನಾಗಿರುವುದು



ಚರ್ಚ್ ದಾಳಿಯ ವಿರುದ್ಧ ಪ್ರತಿಭಟನೆ ಮೆರವಣಿಗೆ



ಸಾಮಾಜಿಕ ಪಿಡುಗಿನ ವಿರುದ್ಧ ಜನ ಜಾಗೃತಿಯಲ್ಲಿ ಸಿದ್ದಿ ಕ್ರೈಸ್ತರು



ಬಲಿ ಪೂಜಾ ಸಮಯದಲ್ಲಿ ಸಿದ್ದಿ ಮತ್ತು ಕೊರಗ ಕ್ರೈಸ್ತರು



ಜನಜಾಗೃತಿ ಮೇಳದಲ್ಲಿ ಸಿದ್ದಿ ಯುವಕ - ಯುವತಿಯರು




ಜನ ಜಾಗೃತಿ ಜಾಥಾದಲ್ಲಿ ಸಿದ್ದಿ ಮಹಿಳೆಯರು



ಜನ ಜಾಗೃತಿ ಜಾಥಾವಲ್ಲಿ ನೃತ್ಯದಲ್ಲಿ ತೊಡಗಿರುವ ಸಿದ್ದಿ ಯುವಕರು



ಪರಮ ಪ್ರಸಾದ ಸ್ವೀಕರಿಸುತ್ತಿರುವ ಸಿದ್ದಿ ಬಾಲಕಿ



ಸಂತ ಮೈಕಲರ ಹಬ್ಬದಲ್ಲಿ ಪಾಲ್ಗೊಂಡಿರುವ ಕೊರಗ ಕ್ರೈಸ್ತರು



ಕ್ರಿಸ್ಮಸ್ ಹಬ್ಬಕ್ಕೆ ಗೋದಲಿ ನಿರ್ಮಿಸುತ್ತಿರುವುದು

## ಬುಡಕಟ್ಟು ಕ್ರೈಸ್ತರಿಗೆ ಅರಿವು ಮೂಡಿಸುವ ಕಾರ್ಯಕ್ರಮ

### Our Beneficiaries

**Our target groups hail from various ethnic and linguistic socio-cultural communities that include - Gowlis (cattle rearing tribe), Gollars (migrants), Lamanis (gypsies from northern India), Vadders who are available as stone cutters and Siddis, the people of African Origin brought to India as slaves, Korwars who also migrated into the state during the severe FAMINE of 1911 and minority groups of Christians and Muslims. The history of these communities has been a song of struggle in the context of socio-politico-economic-philosophical-spiritual and cultural injustice and oppression at the hands of upper strata of the society.**

---

## ಹರಿಕೆಯ ಕರಪತ್ರಗಳು

# ಕೆಲವು ಪಾರಿಭಾಷಿಕ ಪದಗಳ ವಿವರಣೆ

| | |
|---|---|
| ಅನಾಯಿಟಿಂಗ್ ದಿ ಸಿಕ್ | - ಗಂಭೀರವಾಗಿ ರೋಗಗ್ರಸ್ತರಾದವರಿಗೆ ನಡೆಸುವ ಏಳು ಸಂಸ್ಕಾರಗಳಲ್ಲಿ ಒಂದು. |
| ಅಪೋಸ್ತಲ್ (Apostle) | - ಯೇಸು ಕ್ರಿಸ್ತನ ಹನ್ನೆರಡು ಮಂದಿ ಆಪ್ತ ಶಿಷ್ಯರಲ್ಲಿ ಒಬ್ಬನು. |
| ಬೈಬಲ್ (Bible ) | - ಪವಿತ್ರ ಗ್ರಂಥ ; ಕ್ಯಾಥೋಲಿಕರು ಹಳೆಯ ಒಡಂಬಡಿಕೆಯ 46 ಪುಸ್ತಕಗಳನ್ನೂ ಹೊಸ ಒಡಂಬಡಿಕೆಯ 27 ಪುಸ್ತಕಗಳನ್ನೂ ಪರಿಗಣಿಸುತ್ತಾರೆ. |
| ಬಿಷಪ್ (Bishop) | - ಮೇಲುವರ್ಗದ ಮಠೀಯ ಅಧಿಕಾರಿಗಳ ಸಂಸ್ಕಾರಗಳನ್ನು ಪೂರ್ಣವಾಗಿ ಪಡೆದುಕೊಂಡಿರುವವನು ; ಸಾಮಾನ್ಯವಾಗಿ ಇವನು ಒಂದು ಧರ್ಮಪ್ರಾಂತದ ಮುಖ್ಯಸ್ಥನಾಗಿರುತ್ತಾನೆ. |
| ಬ್ಲೆಸೆಡ್ ವರ್ಜಿನ್ (Blessed Virgin) | - ಸಾಮಾನ್ಯವಾಗಿ ಯೇಸು ಕ್ರಿಸ್ತನ ತಾಯಿ ಮೇರಿಯನ್ನು ಉಲ್ಲೇಖಿಸುವ ರೀತಿ; ಧನ್ಯಕನ್ಯೆ. |
| ಕೆಟಿಕಿಸಂ (Catechism ) | - ಧಾರ್ಮಿಕ ಬೋಧನೆ. |
| ಕ್ಯಾಥೋಲಿಕ್ ಚರ್ಚ್ (Catholic Church) | - ಸರ್ವೋನ್ನತ ಮುಖ್ಯಸ್ಥನು ಪೋಪ್, ರೋಮಿನ ಬಿಷಪ್ ಆದ್ದರಿಂದ ರೋಮನ್ ಕ್ಯಾಥೋಲಿಕ್ ಚರ್ಚ್ ಎಂದೂ ಕರೆಯುತ್ತಾರೆ. ಕ್ಯಾಥೋಲಿಕ್ ಚರ್ಚಿನ ಸದಸ್ಯರು ತಮ್ಮದೇ ನಿಜವಾದ ಚರ್ಚ್ ಎಂದೂ ಅದರಿಂದ ಸಿಡಿದು ಬೇರೆಯಾಗಿ ಹೋದವರನ್ನು ಭಿನ್ನಮತೀಯರು ಎಂದೋ ಸಂಪ್ರದಾಯ ಬಾಹಿರರು (ಪಾಷಂಡಿಗಳು) ಎಂದೂ ಪರಿಗಣಿಸುತ್ತಾರೆ. |
| ಸಿಲಿಬಸಿ (Celibacy) | - ಅವಿವಾಹಿತ ಸ್ಥಿತಿ; ಒಂಟಿಯಾಗಿ ಉಳಿಯುತ್ತೇವೆ ಎಂಬುದಾಗಿ ವ್ರತ ಸ್ವೀಕರಿಸಿರುವವರ ಸ್ಥಾನಮಾನ, ಕ್ಲೆರಿಕ್‌ಗಳು ಮತ್ತು ರಿಲಿಜಿಯಸ್ ವರ್ಗದವರಿರುವ ಹಾಗೆ. |
| ಸೆಮೆಟರಿ (Cemetery) | - ಮೃತರನ್ನು ಸಮಾಧಿ ಮಾಡುವುದಕ್ಕಾಗಿ ಮೀಸಲಾಗಿರಿಸಿರುವ ಸ್ಥಳ. |
| ಚರ್ಚ್ (Church) | - ಮುಖ್ಯವಾಗಿ ಕ್ರೈಸ್ತರು ಆರಾಧನೆ ಮಾಡಲು, ವಿಶೇಷವಾಗಿ ಸಾಮೂಹಿಕ ಪ್ರಾರ್ಥನೆ ಪ್ರವಚನಗಳನ್ನು ಸಂಸ್ಕಾರಗಳನ್ನು ನಡೆಸಲು ಅನುಕೂಲವಾಗುವಂತೆ ನಿರ್ಮಿಸಿರುವ ಅಥವಾ ಹೊಂದಾಣಿಕೆ ಗೊಳಿಸಿರುವ ಕಟ್ಟಡ ಪ್ಯಾರಿಷ್ ಚರ್ಚ್ ಎನ್ನುವುದು ಒಂದು ಪ್ಯಾರಿಷಿನಲ್ಲಿರುವ ಮುಖ್ಯ ದೇವಾಲಯ. ಅಲ್ಲಿ ಪ್ಯಾರಿಷ್ ಪ್ರೀಸ್ಟನು ಧಾರ್ಮಿಕ ವಿಧಿಗಳನ್ನು ನೆರವೇರಿಸುತ್ತಾನೆ ಮತ್ತು ಸಂಸ್ಕಾರಗಳನ್ನು ಬೋಧಿಸುತ್ತಾನೆ, ನಿರ್ವಹಿಸುತ್ತಾನೆ. |
| ಕನ್‌ಫೆಷನ್ (Confession) | - ಪ್ರಾಯಶ್ಚಿತ್ತ ಸಂಸ್ಕಾರದಲ್ಲಿ ಒಬ್ಬನು ತಾನು ಮಾಡಿರುವ ಪಾಪ ಕೃತ್ಯಗಳನ್ನು ಒಪ್ಪಿಕೊಳ್ಳುವುದು. |

| | | |
|---|---|---|
| ಕನ್ಫರ್ಮೇಷನ್ (Confirmation) | - | ಏಳು ಸಂಸ್ಕಾರಗಳಲ್ಲಿ ಒಂದು. ಒಬ್ಬ ವ್ಯಕ್ತಿಯ ಪ್ರೌಢತ್ವಕ್ಕೆ ಕಾಲಿಡುವುದನ್ನು ಅದು ಗುರುತಿಸುತ್ತದೆ. |
| ಕಾನ್ವೆಂಟ್ (Convent) | - | ರಿಲೀಜಿಯಸ್ ವರ್ಗದ ಸ್ತ್ರೀಯರು ವಾಸ ಮಾಡುವ ಕಟ್ಟಡ. |
| ಕ್ರೀಡ್ (Creed) | - | ಕ್ಯಾಥೊಲಿಕ್ ನಂಬಿಕೆಗಳ ಸಂಕ್ಷಿಪ್ತ ಪಟ್ಟಿ, ಕ್ರೀಡೆಗಳಲ್ಲಿ ತುಂಬಾ ಪ್ರಸಿದ್ಧವಾದದ್ದು ಅಪೋಸ್ತಲ್ಸ್ ಕ್ರೀಡ್. ಇದನ್ನು ಪೋಸ್ತಲರು ರೂಪಸಿದರೆಂದು ಹೇಳಲಾಗಿದೆ. ಇನ್ನೊಂದು ನಿಸೀನ್ ಕ್ರೀಡ್. ಇದನ್ನು ಕ್ರಿ. ಶ. 325ರಲ್ಲಿ ನೈಸಿಯ ಕೌನ್ಸಿಲ್ ಸಮಾವೇಶವು ರೂಪಿಸಿತು. |
| ಕ್ರಾಸ್ (Cross) | - | ಶಿಲುಬೆ ; ಯೇಸುಕ್ರಿಸ್ತನು ಯಾವುದರ ಮೇಲೆ ಮರಣ ಹೊಂದಿದನೋ ಅದರ ಮಾದರಿ. ಅದು ಸರದ ಪದಕವಾಗಿ ಧರಿಸಲು ಯೋಗ್ಯವಾಗುವಂತೆ ಚಿಕ್ಕದಾಗಿರಬಹುದು, ಇಲ್ಲವೆ ಬಹಿರಂಗ ಸ್ಥಳಗಳಲ್ಲಿ ಪ್ರದರ್ಶಿಸಲು ತಕ್ಕಂತೆ ದೊಡ್ಡದಾಗಿರಬಹುದು. |
| ಡಯೋಸೀಸ್ (Diocese ) | - | ಕ್ಯಾಥೊಲಿಕ್ ಚರ್ಚಿನ ಭೂಪ್ರದೇಶ ವಿಭಾಗ, ಬಿಷಪ್ ಇದರ ಮುಖ್ಯಸ್ಥ. |
| ಡಿಸೈಪಲ್ ( Disciple) | - | ಯೇಸುಕ್ರಿಸ್ತನ ಪ್ರತ್ಯಕ್ಷ ಅನುಯಾಯಿ, ಅಪೋಸ್ತಲನಂತೆ |
| ಈಸ್ಟರ್ (Easter) | - | ಯೇಸುಕ್ರಿಸ್ತನ ಪುನರುತ್ಥಾನವನ್ನು ನೆನಪು ಕೊಡುವ ಭಾನುವಾರ. |
| ಯೂಖರಿಸ್ಟ್ (Eucharist) | - | ಸಪ್ತ ಸಂಸ್ಕಾರಗಳಲ್ಲಿ ಅತ್ಯಂತ ಮುಖ್ಯವಾದುದು. ಆ ವಿಧಿಯನ್ನು ಮಾಸ್ ಎಂದು ಕರೆಯುತ್ತಾರೆ. ಇದರ ಮುಖ್ಯವಾದ ಆಚರಣೆ ಬ್ರೆಡ್ಡನ್ನೂ ವೈನನ್ನೂ ಯೇಸುಕ್ರಿಸ್ತನ ದೇಹ ಮತ್ತು ರಕ್ತವೆಂದು ಪವಿತ್ರೀಕರಿಸುವುದು. ಕಮ್ಯೂನಿಯನಂ ಎನ್ನುವುದು ಯೇಸು ಕ್ರಿಸ್ತನ ದೇಹ ಮತ್ತು ರಕ್ತದ ಸ್ವೀಕಾರ |
| ಗಾಸ್ಪೆಲ್ (Gospel ) | - | ಸುವಾರ್ತೆ ಅಥವಾ ಯೆಸುಕ್ರಿಸ್ತನ ಬೋಧನೆಗಳು, ಸೀಮಿತ ಅರ್ಥದಲ್ಲಿ ನಾಲ್ವರು ಇವಾಂಜಲಿಸ್ಟರಾದ ಮ್ಯಾಥ್ಯು, ಮಾರ್ಕ್, ಲೂಕ್ ಮತ್ತು ಜಾನ್ ಇವರು ಬರೆದಿಟ್ಟಂತೆ ಯೇಸುಕ್ರಿಸ್ತನು ಮಾಡಿದ ಉಪದೇಶಗಳು ಮತ್ತು ಪವಾಡಗಳ ನಿರೂಪಣೆ. |
| ಗ್ರೇಸ್ (Grace) | - | ವ್ಯಕ್ತಿಯ ಮೇಲೆ ಪ್ರಭಾವ ಬೀರುವ, ಭಗವಂತನ ಉಡುಗೊರೆ ಅಥವಾ ನೆರವು. |
| ಹೇಲ್ ಮೇರಿ (Hail Mary) | - | ಕನ್ಯೆಮೇರಿ ಅಥವಾ ಅವರ್ ಲೇಡಿಯನ್ನು ಸಂಬೋಧಿಸುವ ಒಂದು ಪ್ರಾರ್ಥನೆ. ಮೊದಲ ಎರಡು ಪದಗಳಿಂದ ಈ ಹೆಸರು ಆ ಪ್ರಾರ್ಥನೆಗೆ ಬಂದಿದೆ. |
| ಹೆರೆಸಿ (Heresy) | - | ಮಿಥ್ಯಾ ಸಿದ್ಧಾಂತ ಅಥವಾ ನಿಜವಾದ ಸಿದ್ಧಾಂತವೊಂದರ ತಪ್ಪು ವ್ಯಾಖ್ಯಾನ. |
| ಹೋಲಿ ಸ್ಪಿರಿಟ್ (Holy Spirit) | - | ದೈವೀ ತ್ರಿವಳಿಯ ಮೂರನೆಯ ವ್ಯಕ್ತಿ, ಇನ್ನೆರಡು ತಂದೆಯಾದ ದೇವರು ಮತ್ತು ಮಗನಾದ ದೇವರು, ಅವನೇ ಯೇಸು ಕ್ರಿಸ್ತನಾಗಿ ಮನುಷ್ಯನಾಗಿ ಜನಿಸಿದನು. |

| | |
|---|---|
| ಇನ್‌ಕ್ವಿಸಿಷನ್ ( Inquisition) | - ಮೊದಲು ಪೋಪ್ ಒಂಬತ್ತನೆಯ ಗ್ರೆಗರಿಯು 1229 ರಲ್ಲಿ ಧರ್ಮಬಾಹಿರರ ವಿಚಾರಣೆ ನಡೆಸುವುದಕ್ಕಾಗಿ ಸ್ಥಾಪಿಸಿದ ನ್ಯಾಯಾಧಿಕರಣ. ಆ ಮೇಲೆ ಈ ಬಗೆಯ ನ್ಯಾಯಸ್ಥಾನಗಳನ್ನು ಸ್ಪೇಯಿನ್, ಪೋರ್ಚುಗಲ್ ಮೊದಲಾದ ಇತರ ದೇಶಗಳಲ್ಲೂ ಗೋವೆಯಂತಹ ಸ್ಥಳಗಳಲ್ಲೂ ಸ್ಥಾಪಿಸಲಾಯಿತು. |
| ಮೇರಿ, ಬ್ಲೆಸ್‌ಡ್ ವರ್ಜಿನ್ | - ಯೇಸು ಕ್ರಿಸ್ತನ ತಾಯಿ, ಸಾಮಾನ್ಯವಾಗಿ ಬ್ಲೆಸ್‌ಡ್ |
| (Mary, Blessed Virgin) | - ವರ್ಜಿನ್ ಅಥವಾ ಅವರ್ ಲೇಡಿ ಎಂದು ಕರೆಯಲಾಗುತ್ತದೆ. |
| ನನ್ (Nun) | - ಮಹಿಳೆಯರ ರಿಲಿಜಿಯಸ್ ವರ್ಗದ ಸದಸ್ಯೆ, ಸಾಮಾನ್ಯವಾಗಿ ಸಿಸ್ಟರ್ ಎಂದು ಕರೆಯಲಾಗುತ್ತದೆ. |
| ಒರಿಜಿನಲ್ ಸಿನ್ ( Original Sin) | - ಆದಂ ಮತ್ತು ಈವ್ ಮಾಡಿದ ಆದಿ ಪಾಪದ ಪರಿಣಾಮಗಳಲ್ಲಿ ಒಂದು. ಆ ಪಾಪವನ್ನೇ ಎಲ್ಲ ಮಾನವ ಜೀವಿಗಳೂ ಹಂಚಿಕೊಂಡಿದ್ದಾರೆ. ಅದು ವ್ಯಕ್ತಿಯನ್ನು ಸ್ವರ್ಗ ಪ್ರವೇಶ ಮಾಡದಂತೆ ತಡೆಯುತ್ತದೆ. |
| ಪೇಪಸಿ (Papacy) | - ಪೋಪ್ ಪದವಿ |
| ಪ್ಯಾರಿಷ್ (Parish) | - ಒಂದು ನಿರ್ದಿಷ್ಟ ಪ್ರದೇಶದಲ್ಲಿ ವಾಸಮಾಡುತ್ತಿರುವ ಕ್ಯಾಥೊಲಿಕರ ಒಂದು ಸಮುದಾಯ, ಪ್ಯಾರಿಷ್ ಪ್ರೀಸ್ಟ್ ಇದಕ್ಕೆ ಮುಖ್ಯಸ್ಥ. |
| ಪ್ಯಾರಿಷ್ ಚರ್ಚ್ (Parish Church) | - ಒಂದು ಪ್ಯಾರಿಷಿನಲ್ಲಿರುವ ಅಧಿಕೃತವಾದ ಚರ್ಚು. |
| ಪ್ಯಾರಿಷ್ ಪ್ರೀಸ್ಟ್ (Parish Priest) | - ಒಂದು ಪ್ಯಾರಿಷಿನ ಹೊಣೆಯನ್ನು ವಹಿಸಿಕೊಂಡಿರುವ ಪಾದ್ರಿ. |
| ಪ್ಯಾರಿಷನರ್ (Parishioner) | - ಒಂದು ಪ್ಯಾರಿಷಿನ ಸದಸ್ಯ. |
| ಪೋಪ್ (Pope) | - ಕ್ಯಾಥೊಲಿಕ್ ಚರ್ಚಿನ ಸರ್ವೋನ್ನತ ಮುಖ್ಯಸ್ಥ, ರೋಮಿನ ಬಿಷಪ್. |
| ಪ್ರಾಟೆಸ್ಟೆಂಟ್ ಚರ್ಚಸ್ | - ಕ್ಯಾಥೊಲಿಕ್ ಚರ್ಚ್ ಮತ್ತು ಆಂಗ್ಲಿಕನ್ ಚರ್ಚ್ |
| (Protestant Churches) | - ಮೊದಲಾದ ಸಾಂಪ್ರದಾಯಕಿ ಚರ್ಚುಗಳಿಗಿಂತ ಅನ್ಯವಾದ, ಹೊರಗಿನ ಎಲ್ಲಾ ಕ್ರೈಸ್ತ ಪಂಥಗಳಿಗೆ ಅನ್ವಯಿಸುವ ನಾಮ. ಪ್ರಾಟೆಸ್ಟೆಂಟ್ ಚರ್ಚುಗಳು ಉದಿಸಿದುದು ರಿಫರ್ಮೇಷನ್ (ಸುಧಾರಣೆ)ಯಿಂದ. |
| ಪ್ರಾಟೆಸ್ಟೆಂಟ್ ( Protestant) | - ಒಂದು ಪ್ರಾಟೆಸ್ಟೆಂಟ್ ಚರ್ಚಿನ ಸದಸ್ಯ. |
| ಪ್ರಾವಿನ್ಸ್ ( Province) | - ಹಲವು ಡಯೋಸೀಸ್‌ಗಳನ್ನು ಒಳಗೊಂಡ ಒಂದು ಪ್ರಾದೇಶಿಕ ವಿಭಾಗ, ಅದಕ್ಕೆ ಆರ್ಚ್ ಬಿಷಪ್ ಮುಖ್ಯಸ್ಥರು. |
| ರಿಫರ್ಮೇಷನ್ (Reformation) | - 16ನೆಯ ಶತಮಾನದಲ್ಲಿ ಪಶ್ಚಿಮ ಯೂರೋಪಿನ ಧಾರ್ಮಿಕ ಜೀವನದಲ್ಲಿ ಉಂಟಾದ ಕ್ರಾಂತಿಯು ಪ್ರಾಟೆಸ್ಟಂಟ್ ಚರ್ಚುಗಳು ರೂಪುಗೊಳ್ಳಲು ಕಾರಣವಾಯಿತು. |
| ರಿಲಿಜಿಯಸ್ (Religious) | - ಒಂದು ರಿಲಿಜಿಯಸ್ ಪಂಥದ ಸದ |

| | | |
|---|---|---|
| ರೋಮನ್ ಕ್ಯಾಥೊಲಿಕ್ | - | ಮೊದಲು ಕ್ಯಾಥೊಲಿಕ್ ಚರ್ಚನ್ನು ಉಲ್ಲೇಖಿಸುವಾಗ ಅವಹೇಳನದ ಪದವಾಗಿ ಪ್ರಾಟೆಸ್ಟೆಂಟರು ಬಳಸಿದರು. ಆದರೆ ಈಗ ಅದು ಕ್ಯಾಥೊಲಿಕರನ್ನು ಅಥವಾ ಕ್ಯಾಥೊಲಿಕ್ ಚರ್ಚನ್ನು ಉಲ್ಲೇಖಿಸುವುದೆಂದು ವಿಶ್ವದಾದ್ಯಂತ ಸ್ವೀಕೃತವಾಗಿದೆ. |
| ರೋಸರಿ (Rosary) | - | ಪ್ರಾರ್ಥನೆಗಳ ಸರಣಿ. ಜಪಿಸುತ್ತಿರುವಾಗ, ಪೋಣಿಸಿರುವ ಮಣಿಗಳನ್ನು ಲೆಕ್ಕ ಹಾಕುತ್ತಾರೆ. ಮಣಿಗಳ ಈ ಮಾಲೆಯನನು ರೋಸರಿ (ಜಪಸರ ) ಎನ್ನುತ್ತಾರೆ. |
| ಸ್ಯಾಕ್ರಮೆಂಟ್ (Sacrament ) | - | ಯೇಸುಕ್ರಿಸ್ತನು ಕೃಪೆ ತೋರಿಸಲು (ಗ್ರೇಸ್) ರೂಪಿಸಿದ ಒಂದು ಚಾಕ್ಷುಷವಾದ ಕುರುಹು, ಸಂಸ್ಕಾರ. ಇವು ಏಳು ಇವೆ. ಬ್ಯಾಪ್ಟಿಸಂ, ಕನ್‌ಫರ್ಮೇಷನ್, ಯೂಖರಿಸ್ಟ್, ಪೆನಾನ್ಸ್, ಹೋಲಿ ಆರ್ಡರ್ಸ್, ಮ್ಯಾಟ್ರಿಮೊನಿ ಮತ್ತು ಅನಾಯಿಂಟಿಂಗ್ ದಿ ಸಿಕ್ ( ಇವು ಕ್ರಮವಾಗಿ ಜ್ಞಾನಸ್ನಾನ, ಸ್ಥಿರೀಕರಮ, ದೀಕ್ಷೆ, ಪಶ್ಚಾತ್ತಾಪ, ಪವಿತ್ರ ಆದೇಶಗಳು, ವಿವಾಹ ಮತ್ತು ಅಭ್ಯಂಗ ) |
| ಸೇಂಟ್ (Saint) | - | ಮರಣ ಹೊಂದಿದೊಡನೆಯೇ ಸ್ವರ್ಗಕ್ಕೆ ಹೋಗಿರುವನೆಂದು ನಂಬಲಾಗಿರುವ ವ್ಯಕ್ತಿ. |
| ಸೆಮಿನರಿ (Seminary) | - | ಸೇಮಿನೇರಿಯನ್ನರು ಪಾದ್ರಿಗಳಾಗುವ ಸಲುವಾಗಿ ತರಬೇತಿ ಪಡೆಯುವ ಸಂಸ್ಥೆ ಅಥವಾ ಅಧ್ಯಯನ ಮಂದಿರ. |
| ಸರ್ಮನ್ (Sermon) | - | ಕ್ರಮಬದ್ಧವಾದ ಧಾರ್ಮಿಕ ಪ್ರವಚನ. |
| ವಿಕರ್ (Vicar) | - | ಒಬ್ಬ ಕ್ಲೆರಿಕ್‌ನ ಸ್ಥಳದಲ್ಲಿ ಅವನ ಪ್ರತಿನಿಧಿಯಾಗಿ ಕಾರ್ಯನಿರ್ವಹಿಸುವ ಕ್ಲೆರಿಕ್. ಸಾಮಾನ್ಯವಾಗಿ ಬಿಷಪರನ್ನು ಪ್ರತಿನಿಧಿಸುವ ಪ್ಯಾರಿಷ್ ಪ್ರೀಸ್ಟ್‌ನಿಗೆ ಈ ಪದವನ್ನು ಅನ್ವಯಿಸಲಾಗುತ್ತದೆ. |
| ವಿಕರ್ ಜನರಲ್ (Vicar General) | - | ಬಿಷಪನಿಗೆ ಡಯೋಸೀಸಿನ ಆಡಳಿತ ನಿರ್ವಹಣೆಯಲ್ಲಿ ನೆರವಾಗಲು ನೇಮಿತವಾಗಿರುವ ಪ್ರೀಸ್ಟ್. |
| ವಿಕಲ್ ಅಪೋಸ್ತಲಿಕ್ (Vicar Apostolic) | - | ವಿಕರಿಯೆಟ್ ಎಂದು ಕರೆಯುವ ಒಂದು ಪ್ರದೇಶದ ಆಡಳಿತ ನಿರ್ವಾಹ ಮಾಡುವ ಬಿಷಪ್. |
| ವಿಕರಿಯೇಟ್ | - | ಇನ್ನೂ ಒಂದು ಡಯೋಸೀಸ್ ಆಗಿ ಅಭಿವೃದ್ಧಿ ಗೊಳ್ಳಬೇಕಾಗಿರುವ ಪ್ರದೇಶ. |
| ವವ್ (Vow) | - | ಪ್ರತಿಜ್ಞೆ, ವ್ರತ, ಸ್ವಯಂ ಪ್ರೇರಣೆಯಿಂದ ಭಗವಂತನಿಗೆ ಮಾಡಿಕೊಟ್ಟ ವಾಗ್ದಾನ. |

## ಅನುಬಂಧ

### 1 ಸಂಸ್ಕೃತ ಪ್ರಾರ್ಥನೆ

(ಧಾರೆ ಮುಹೂರ್ತದ ಸಂದರ್ಭದಲ್ಲಿ ಹೇಳುವಂಥದ್ದು)

ಜ್ಯೋತಿರ್ಶಚ ಕ್ರೇಷು ಸಮಸ್ಥಿತ ಅಸ್ಮಾಕ ಪಿತಃ
ಯಷ್ಮಾಕಂ ನಾಮ ಚಿತ್ತಂ
ಯಷ್ಮಾಕಂ ರಾಜಸ್ಯ ಅಗಮ ನಾರ್ಥಂ
ಯಷ್ಮಾಕಂ ಚಿತ್ತಂ ಜ್ಯೋತಿಶ್ಚ ಕ್ರೇಷು
ಯಥಾ ಕ್ರಿಯತ್ ತಥಾ ಭೂಮಂಡಲೇಷು ಚ ಕ್ರಿಯತಾಂ
ಪ್ರತಿದಿನಂ ಅಸ್ಮಾಕಂ ಭೋಜ್ಯಂ ಅಸ್ಮಾಕಂ ಅದ್ಯಾಂಜಯ್ಯತಾಂ
ಅಸ್ಮಾಕಂ ಪಾಪಸ್ಯ ಅಸ್ಮಾಕಂ ಕ್ಷಮಸ್ಯ
ಅಸ್ಮಾನ್ ಶೋಧನೇನಾ ಪ್ರವೇಶಾಚಿಮ ವಿಷೇಭ್ಯ:
ಆಸ್ಮಾನ್ ರಕ್ಷಸ್ಯ ಅಮೆನ್

ಪಿತಾಚ, ಸುರಶ್ಚ , ಸ್ಪಿರಿತುಸಾಂಕ್ತುಶ್ಚ ನಾಮಿ ಅಮೆನ್.

2. **ದುರಾಸೆಯ ಪ್ರತಿಫಲ** ಬ್ರಾಹ್ಮಣನೊಬ್ಬ ಕಾರ್ಯನಿಮಿತ್ತ ಪಕ್ಕದ ಹಳ್ಳಿಗೆ ಹೋಗಿದ್ದ. ಹಿಂತಿರುಗುವಾಗ ರಾತ್ರಿಯಾಗಿ ಕತ್ತಲು ಕವಿದಿರುತ್ತದೆ. ಮೇಲಾಗಿ ಕಾಡಿನ ದಾರಿ. ಕಾಡನ್ನು ಹಾದು ಹೋಗುವಾಗ ಅರ್ಧರಾತ್ರಿಯಾಗುತ್ತದೆ. ದೆವ್ವಗಳು ಅವನ ಸುತ್ತಲೂ ಕೇಕೆ ಹಾಕಿ ಕುಣಿಯಲಾರಂಬಿಸುತ್ತವೆ. ಬ್ರಾಹ್ಮಣ ಹೆದರಿ ಬೆವತುಹೋಗುತ್ತಾನೆ. ತನ್ನ ಬಾಯಿಗೆ ಬಂದ ಮಂತ್ರವನ್ನೆಲ್ಲಾ ಜಪಿಸಿದರೂ ಅವು ದಾರಿ ಬಿಟ್ಟುಕೊಡುವುದಿಲ್ಲ. ಕಾಲುಗಳು ನಡುಗಲಾರಂಭಿಸಿ ನಿಂತಲ್ಲೇ ಕುಸಿದುಕುಳಿತು ಬಿಡುತ್ತಾನೆ. ಬ್ರಾಹ್ಮಣನ ನೆರೆಮನೆಚಿುಲ್ಲಿ ಕ್ರೈಸ್ತರ ಕುಟುಂಬವೊಂದು ವಾಸವಿದ್ದು, ಅವರು ಪ್ರತಿದಿನ ಮನೆಯಲ್ಲಿ ಜಪ ಮಾಡುವುದು ಬ್ರಾಹ್ಮಣನಿಗೆ ತಿಳಿದಿತ್ತು. ಆ ಜಪವನ್ನು ಪಠಿಸಲು ಪ್ರಯತ್ನಿಸುತ್ತಾನೆ. "ಪವಿತ್ರ ಶಿಲುಬೆ ಎಂದು ಉಪದೇಶೀ, ಗುರ್ತಿನ ಮೂಲಕ ಎಂದ ಉಪದೇಶಿ" ಎಂದು ಪದೇ ಪದೇ ಅದನ್ನೇ ಉಚ್ಚರಿಸಿದ. ಆಗ ದೆವ್ವಗಳು ಮಾಯವಾಗುತ್ತವೆ. ಅವನಿಗೆ ಉತ್ತೇಜನ ದೊರೆತಂತಾಗಿ ಕಣ್ಣುಮುಚ್ಚಿಕೊಂಡು ಜೋರಾಗಿ ಪಠಿಸಲಾರಂಭಿಸುತ್ತಾನೆ. ಬೆಳಕು ಹರಿಯುತ್ತದೆ. ಕಣ್ಣುತೆರೆದು ನೋಡಿದಾಗ ಫಳಫಳ ಹೊಳೆಯುವ ನಾಣ್ಯಗಳಿಂದ ತುಂಬಿದ ಒಂದು ಕೊಪ್ಪರಿಗೆ ಅವನ ಮುಂದಿರುತ್ತದೆ. ಬ್ರಾಹ್ಮಣ ಅದನ್ನು ಅದನ್ನು ಎತ್ತಿಕೊಂಡು ಮನೆಗೆ ಬರುತ್ತಾನೆ. ನಡೆದುದನ್ನೆಲ್ಲಾ ಹೆಂಡತಿಗೆ ಹೇಳುತ್ತಾಳೆ. "ತಿನ್ನುವ ಅನ್ನಕ್ಕೇ ಗತಿಯಿಲ್ಲದ ಇವರಿಗೆ

ಸೇರಿನಲ್ಲಿ ಅಳೆಯುವಂಥದು ಏನಿರಬಹುದು" ಎಂಬ ಕೆಟ್ಟ ಕುತೂಹಲದಿಂದ ಉಪದೇಶಿಯ ಹೆಂಡತಿ ಸೇರಿನ ತಳಭಾಗಕ್ಕೆ ಹುಣಿಸೇಹಣ್ಣು ಅಚಿಟಿಸಿ ಕೊಡುತ್ತಾಳೆ. ಬ್ರಾಹ್ಮಣನ ಹೆಂಡತಿ ನಾಣ್ಯಗಳನ್ನು ಅಳೆದಾಗ, ಸೇರಿನ ತಳಭಾಗದಲ್ಲಿ ಒಚಿದು ಚಿನ್ನದನಾಣ್ಯ ಅಂಟಿಕೊಂಡಿರುತ್ತದೆ. ಇದನ್ನು ಕಂಡು ಆಶ್ಚರ್ಯಚಕಿತಳಾದ ಉಪದೇಶಿಯ ಹೆಂಡತಿ ಮೆಲ್ಲನೆ ಬ್ರಾಹ್ಮಣನ ಹೆಂಡತಿಯ ಬಾಯಿ ಬಿಡಿಸುತ್ತಾಳೆ. ವಿಷಯವನ್ನೆಲ್ಲಾ ಗ್ರಹಿಸಿದ ನಚಿತರ ತನ್ನ ಗಂಡನಿಗೆ ತಿಳಿವಳಿಕೆಕೊಟ್ಟು ಜನಪರ, ಜಪದ ಪುಸ್ತಕವನ್ನು ಕೊಟ್ಟು ಕಾಡಿಗೆ ಅಟ್ಟುತ್ತಾಳೆ. ಉಪದೇಶಿ ಕಾಡಿನಲ್ಲಿ ಎಷ್ಟು ಹೊತ್ತು ಕುಳಿತರೂ ದೆವ್ವಗಳು ಬರಲಿಲ್ಲ. ಪ್ರಾರ್ಥನೆ, ಹಾಡುಗಳನ್ನು ಹೇಳಿದರೂ ದೆವ್ವಗಳು ಬರಲಿಲ್ಲ, ಹಣವನ್ನೂ ಕೊಡಲಿಲ್ಲ. ಬೆಳಗಾದ ಮೇಲೆ ಜೋಲುಮೋರೆ ಹಾಕಿಕೊಂಡು ಅವನು ಮನೆಗೆ ಬಂದ.

ಈ ಕಥೆಯಿಂದ ವ್ಯಕ್ತವಾಗುವ ಅಂಶಗಳು ಮೂರು:

ಅ) ಕ್ರೈಸ್ತ ಧರ್ಮವೇ ಶ್ರೇಷ್ಠ ಎಂಬ ಭಾವನೆ.

ಆ) ಬ್ರಾಹ್ಮಣನ ಶ್ರದ್ಧೆ.

ಇ) ಅಸೂಯೆ ಮತ್ತು ದುರಾಸೆಯ ಫಲ.

೩. **ಪ್ರಾರ್ಥನೆಯ ಫಲ** ಒಮ್ಮೆ ಕ್ರೈಸ್ತನೊಬ್ಬ ಗುರುಗಳ ಬಳಿಗೆ ಬಂದು "ಸ್ವಾಮಿ, ನಾನು ದಿನಾಲೂ ತುಂಬಾ ಜಪಮಾಡುತ್ತೇನೆ. ಆದರೆ ಸುಮ್ಮನೆ ಮಂತ್ರಗಳನ್ನು ಜಪಿಸುವುದರಿಂದ ಪ್ರಯೋಜನವಿಲ್ಲ ಎಂದೆನಿಸುತ್ತಿದೆ ನಾನು ಜಪ ಮಾಡೋದನ್ನ ನಿಲ್ಲಿಸಿ ಬಿಡೋಣಾಂತಿದ್ದೀನಿ ಸ್ವಾಮಿ" ಎಂದು ಹೇಳಿದ. ಗುರುಗಳು ಅವನಿಗೆ ಮಾರನೇ ದಿನ ಬೆಳಿಗ್ಗೆ ಬಂದರೆ ಉತ್ತರಕೊಡುವುದಾಗಿ ಹೇಳಿದರು.

ಮಾರನೇ ದಿನ ಬೆಳಿಗ್ಗೆ ಬಂದ ಭಕ್ತನಿಗೆ ಒಂದು ಬಿದಿರಿನ ಕುಕ್ಕೆಯನ್ನೂ ಒಂದು ಬಕೆಟ್ಟನ್ನೂ ಕೊಟ್ಟು "ಇದರೊಳಗೆ ಇಪ್ಪತ್ತೈದು ಬಕೆಟ್ ನೀರು ಹಾಕು" ಎಂದು ಹೇಳಿದರು. ಆ ಕುಕ್ಕೆ ಎಷ್ಟೂ ವರ್ಷಗಳ ಕೊಳೆಯಿಂದ ತುಂಬಿತ್ತು. ಭಕ್ತನು ಗುರುಗಳು ಹೇಳಿದಂತೆಯೇ ಮಾಡಲು ಪ್ರಾರಂವಭಿಸಿದನು. ಅದರಲ್ಲಿ ಒಂದು ತೊಟ್ಟೂ ನೀರು ನಿಲ್ಲುವಚಿತಿರಲಿಲ್ಲ. ಭಕ್ತನಿಗೆ ಸಾಕಾಗಿ ಹೋಯಿತು. ಅಲ್ಲಿಗೆ ಬಂದ ಗುರುಗಳು "ಆಯಿತೇ?" ಎಂದು ಅವನ ಮುಖ ನೋಡಿ ಮುಗುಳ್ನಕ್ಕರು. ತಲೆಯಾಡಿಸಿದ ಭಕ್ತನಿಗೆ "ಇನ್ನೂ ಇಪ್ಪತ್ತೈದು ಬಕೆಟ್ ನೀರು ಹಾಕು" ಎಂದು ಹೇಳಿ ಹೋದರು. ಭಕ್ತನಿಗೆ ಬೇಸರವಾಯಿತು. ಇದೆಂತಹ ಅರ್ಥವಿಲ್ಲದ ಕೆಲಸ ಎಂದು ಕೊಂಡ ಮತ್ತ ನೀರು ಹಾಕಲು ಪ್ರಾರಂಭಿಸಿದ. ನೀರು ಹಾಕಿ ಆದಮೇಲೆ ಅಲ್ಲೇ ಕುಸಿದು ಕುಳಿತ. ಅಲ್ಲಿಗೆ ಬಂದ ಗುರುಗಳು "ಸಾಕಾಯಿತೇ?" ಎಂದರು.

“ಮತ್ತೇನು ಸ್ವಾಮಿ, ಇದ್ರಲ್ಲಿ ಒಚಿದು ತೊಟ್ಟೂ ನೀರು ನಿಲ್ಲುವಂತಿಲ್ಲ, ಸುಮ್ನೆ ಎಲ್ಲಾ ವ್ಯರ್ಥ” ಎಂದ. “ವ್ಯರ್ಥವೇ? ಬಾ ಇಲ್ಲಿ” ಎಚಿದು ಆತನನ್ನು ತಮ್ಮ ಬಳಿಗೆ ಕರೆದು “ಕುಕ್ಕೆಯೊಳಗೆ ನೋಡು” ಎಂದರು. ಆತ ನೋಡಿದ “ಅದಷ್ಟೆ ಶುಚಿಯಾಗಿದೆ ನೋಡು, ಅದರಲ್ಲಿದ್ದ ಕೊಳೆಯೆಲ್ಲಾ ಹೋಗಿ ಬೆಳ್ಳಗಾಗಿದೆ, ಶುದ್ಧವಾಗಿದೆ. ಹಾಗೆಯೇ ಪ್ರಾರ್ಥನೆ ಮಾಡುವುದರಿಂದ ನಮಗರಿವಿಲ್ಲದಂತೆಯೇ ಮನಸ್ಸು, ನಾಲಿಗೆ ಶುದ್ಧವಾಗುತ್ತದೆ. ಪ್ರಾರ್ಥನೆ ಮಾಡುವುದು ವ್ಯರ್ಥವಲ್ಲ. ನಿನಗೆ ತೋಚಿದ ರೀತಿಯಲ್ಲೇ ನಿರಂತರವಾಗಿ ಪ್ರಾರ್ಥನೆಯನ್ನು ಮಾಡುತ್ತಿರು” ಎಂದರು.

4. **ಮರದ ಬೊಂಬೆಯ ಕಥೆ** ಒಂದೂರಲ್ಲಿ ಒಂದು ಅರಮನೆ ಇತ್ತು. ಅದರಲ್ಲಿದ್ದ ರಾಜರಾಣಿಗೆ ಒಬ್ಬಳೇ ಮಗಳು. ಸ್ವಲ್ಪಕಾಲದ ನಂತರ ರಾಣಿ ತೀರಿಕೊಂಡಳು. ರಾಜ ಮಗಳನ್ನು ಸುಖದ ಸುಪ್ಪತ್ತಿಗೆಯಲ್ಲಿ ಬೆಳೆಸಿದ. ಮಗಳು ಮದುವೆಯ ವಚಿುಸ್ಸಿಗೆ ಬಂದಳು. ಒಂದು ದಿನ ಮಗಳು ಸ್ನಾನಮಾಡಲು ಹೋದಾಗ ಬಿಚ್ಚಿಟ್ಟ ತನ್ನ ಉಂಗುರವನ್ನು ಧರಿಸಿಕೊಳ್ಳಲು ಮರೆತು ತನ್ನ ಕೋಣೆಗೆ ಹೋದಳು. ಬಚ್ಚಲಮನೆಗೆ ಬಂದ ರಾಜ ಆ ಉಂಗುರವನ್ನು ತನ್ನ ಬೆರಳಿಗೆ ಹಾಕಿ ನೋಡಿಕೊಂಡು, ಆ ಉಂಗುರದ ಒಡತಿಯನ್ನೇ ಮದುವೆಯಾಗುವುದಾಗಿ ಹಟ ಹಿಡಿದ. ಇದನ್ನು ತಿಳಿದ ಮಗಳು ಇಲ್ಲಿರುವುದ ಸರಿಯಲ್ಲವೆಂದು ಒಂದು ಮರದ ಬೊಂಬೆ ಮಾಡಿಸಿ, ತನಗೆ ಬೇಕಾದ್ದನ್ನೆಲ್ಲಾ ಅದರಲ್ಲಿಟ್ಟು, ದಾದಿಯರನ್ನೂ ಅದರಲ್ಲಿಸಿಕೊಂಡು ತಾನೂ ಅದರಲ್ಲೇ ಅಡಗಿಕೊಂಡು ತಂದೆಗೆ ತಿಳಿಸದೆ ಮನೆಬಿಟ್ಟು ಹೊರಟಳು. ಒಂದು ಕಾಡಿನಲ್ಲಿ ಇಳಿದು ಮರದಬೊಂಬೆ ಮತ್ತು ದಾದಿಯರನ್ನು ಅಲ್ಲೇ ಬಿಟ್ಟು ಎದುರಿಗೇ ಕಾಣುತ್ತಿದ್ದ ಚ್ಚರ್ಚಿನೊಳಗೆ ಪ್ರಜೆಯಲ್ಲಿ ಭಾಗವಹಿಸಲು ಹೋದಳು. ಆ ಊರಿನ ರಾಜನು ಪೂಜೆಗೆಂದು ಬಂದು ಅವಳ ಹಿಂದೆ ಕುಳಿತನು. ಅವಳ ಸೌಂದರ್ಯಕ್ಕೆ ಮಾರು ಹೋಗಿ ಅವಳ ಮುಖವನ್ನು ನೋಡಬೇಕೆಂದು ತನ್ನ ಮುದ್ರೆಯುಂಗುರವನ್ನು ಬಿಚ್ಚಿ ಅವಳ ಬೆನ್ನಿಗೆ ಹೊಡೆದ. ಅವಳು ಹಿಂತಿರುಗಿ ನೋಡದೆಯೇ ಆ ಉಂಗುರವನ್ನು ಎತ್ತಿ ಇಟ್ಟುಕೊಂಡಳು. ಪರಮಪ್ರಸಾದ ಅರ್ಪಣೆಯ ಸಮಯದಲ್ಲಿ ಎಲ್ಲರೂ ತಲೆಬಾಗಿಸಿರುವಾಗ ರಾಜಕುಮಾರಿ ಎದ್ದು ಹೊರಗೆ ಬಂದು, ಮರದಬೊಂಬೆಯೊಳಗೆ ಸೇರಿಕೊಂಡಳು. ಎರಡನೇ ದಿನ ರಾಜನು ಅವಳನ್ನು ನೋಡಲೇಬೇಕೆಂದು ಪೂಜೆಗೆ ಬಂದು ಕುಳಿತಿದ್ದ. ಆಮೇಲೆ ಬಂದ ರಾಜಕುಮಾರಿ ಅವನಿಗಿಂತ ಮುಂದಿನ ಸಾಲಿನಲ್ಲಿ ಕುಳಿತಳು. ರಾಜ ತನ್ನ ಕರವಸ್ತ್ರವನ್ನು ಉಂಡೆಮಾಡಿ ಅವಳ ಬೆನ್ನಿಗೆ ಹೊಡೆದ. ಆಕೆ ಹಿಂತಿರುಗಿ ನೋಡದೆಯೇ ಕರವಸ್ತ್ರವನ್ನು ತೆಗೆದಿಟ್ಟುಕೊಂಡು ಹಿಂದಿನ ದಿನದಂತೆಯೇ ಪ್ರಜೆ ಮುಗಿಯುವ ಮುನ್ನ ಎದ್ದು ಬಂದು ಬಿಟ್ಟಳು. ಅವಳನ್ನು ನೋಡಲೇಬೇಕೆಂದು ಹೊರಗೆ ಬಂದ ರಾಜ ಅವಳನ್ನೆಲ್ಲೂ ಕಾಣದೆ ಮರದಬೊಂಬೆಯನ್ನು ಕೇಳಿದ. ಅದು ತನಗೆ ಗೊತ್ತಿಲ್ಲವೆಂದೂ, ಭಿಕ್ಷೆನೀಡಬೇಕೆಂದು ಕೇಳಿತು. ಅವನು ಅದಕ್ಕೆ

ಒಂದು ನಾಣ್ಯ ಭಿಕ್ಷೆ ನೀಡಿದ. ತನಗೆ ಅಡುಗೆ ಕೆಲಸವೆಲ್ಲಾ ಚೆನ್ನಾಗಿ ಬರುವುದಾಗಿಯೂ, ತನಗೆ ಕೆಲಸಕೊಡಿಸಬೇಕೆಂದೂ ಬೊಂಬೆ ಬೇಡಿಕೊಂಡಿತು. ಮಾರನೆಯ ದಿನ ಅರಮನೆಗೆ ಬರುವಂತೆ ಹೇಳಿ ರಾಜ ಹೊರಟುಹೋದ.

ಮಾರನೆಯ ದಿನ ಮರದಬೊಂಬೆ ಅರಮನೆಗೆ ಹೋಗಿ ಕೆಲಸಕ್ಕೆ ಸೇರಿಕೊಂಡಿತು. ಕೆಲಸದ ವೇಳೆಯಲ್ಲಿ, ಮರದ ಬೊಂಬೆಯಿಂದ ದಾದಿಯರು ಹೊರಬಂದು ಕೆಲಸವನ್ನೆಲ್ಲಾ ಪೂರೈಸಿ ಮರದ ಬೊಂಬೆಯೊಳಗೆ ಸೇರಿಕೊಳ್ಳುತ್ತಿದ್ದರು. ಒಂದು ದಿನ ರಾಜನಿಗೆ ಹೆಣ್ಣು ಹುಡುಕಲು ರಾಜನೂ ಮಂತ್ರಿಯೂ ಹೊರಟರು. ಇಬ್ಬರಿಗೂ ಪ್ರತ್ಯೇಕವಾಗಿ ಬುತ್ತಿಕಟ್ಟಲಾಗಿತ್ತು. ರಾಜ ತನ್ನ ಬುತ್ತಿಯನ್ನು ಬಿಚ್ಚಿ ಮೊದಲು ವಡೆ ಮುರಿದ, ಅದರಲ್ಲಿ ಮುದ್ರೆಯುಂಗುರವಿತ್ತು, ನಂತರ ಒಬ್ಬಟ್ಟು ಮುರಿದ, ಅದರಲ್ಲಿ ಕರವಸ್ತ್ರವಿತ್ತು, ನಚಿತರ ಕಜ್ಜಾಯ ಮುರಿದ, ಅದರಲ್ಲಿ ನಾಣ್ಯವಿತ್ತು. ಇದನ್ನು ನೋಡಿದ ರಾಜ ಇವೆಲ್ಲ ನನ್ನ ವಸ್ತುಗಳಾಗಿವೆ. ಆ ಸುಂದರ ಮೈಮಾಟದ ಹುಡುಗಿಗೇ ನಾನು ಹೊಡೆದದ್ದು ಹಾಗಿದ್ದರೆ ಆ ಹುಡುಗಿ ನಮ್ಮ ಮನೆಯಲ್ಲೇ ಇದ್ದಾಳೆ. ನಾನೇಕೆ ಬೇರೆ ಕಡೆ ಹೆಣ್ಣು ನೋಡಬೇಕು ಎಂದು ಕೊಂಡು ತನಗೆ ಮನಸ್ಸು ಸರಿಯಿಲ್ಲವೆಂದು ಮಂತ್ರಿಗೆ ಹೇಳಿ ಮನೆಗೆ ಬಂದನು. ಅಡುಗೆಮನೆಯ ಅಟ್ಟದಮೇಲೆ ಅಡಗಿ ಕುಳಿತನು. ಮರದಬೊಂಬೆ ಒಳಗೆ ಬಂದಿತು, ಬಾಗಿಲು ಹಾಕಿತು. ನೋಡುತ್ತಿದ್ದಂತೆಯೇ ಇಬ್ಬರು ದಾದಿಯರು ಹೊರಗೆ ಬಂದರು. ನಚಿತರ ರಾಜಕುಮಾರಿ ಬಂದಳು. ಅವಳ ಸೌಚಿದರ್ಯವನ್ನು ನೋಡಿ ರಾಜ ಬೆರಗಾದನು. ರಾಜಕುಮಾರಿಗೆ ದಾದಿಯರು ಸ್ನಾನಮಾಡಿಸಲು ಶುರುಮಾಡಿದರು. ರಾಜನು ಮರದ ಬೊಂಬೆಯನ್ನು ಕದ್ದು ಸುಟ್ಟು ಹಾಕಿದನು. ಸ್ನಾನದ ನಂತರ ಸೀರೆ ತೆಗೆದುಕೊಳ್ಳಲು ನೋಡಿದಾಗ ಮರದಬೊಂಬೆ ಕಾಣಿಸಲಿಲ್ಲ. ನಂತರ ದಾದಿಯರು ರಾಜನ ತಾಯಿಯ ಹತ್ತಿರ ಹೋಗಿ ನಡೆದ ವಿಚಾರವನ್ನೆಲ್ಲಾ ತಿಳಿಸಿದರು. ಅವರು ರಾಜಕುಮಾರಿಗೆ ಒಡವೆ-ವಸ್ತ್ರಗಳನ್ನು ತಂದು ಅಲಂಕರಿಸಿ ನೋಡಿ ಹಿಗ್ಗಿದರು. ನಂತರ ರಾಜನಿಗೂ-ರಾಜಕುಮಾರಿಗೂ ಮದುವೆ ನಿಶ್ಚಿತಾರ್ಥವಾಯಿತು. ಮದುವೆಯ ಕರೆಯೋಲೆ ಎಲ್ಲೆಡೆ ಹೋಯಿತು. ರಾಜಕುಮಾರಿಯ ತಂದೆಯೂ ಯಾರದೋ ಮದುವೆಯೆಂದು ಬಂದಿದ್ದನು. ಮದುವೆಯೂ ಮುಗಿಯಿತು. ನಂತರ ರಾಜಕುಮಾರಿ ಜನರನ್ನು ಉದ್ದೇಶಿಸಿ ಕೆಲವು ಮಾತುಗಳನ್ನಾಡಲು ಬಯಸಿದಳು. ತನ್ನ ತಂದೆಯೇ ತನ್ನನ್ನು ಮದುವೆಯಾಗಲು ಬಯಸಿದ್ದರಿಂದ ಇಲ್ಲಿಯ ತನಕ ಏನೇನೋ ನಡೆದುಹೋಯಿತು ಎಂದು ಹೇಳಿದಳು. ಅಲ್ಲೇ ಇದ್ದ ಆಕೆಯ ತಂದೆ ನಾಚಿಕೆಯಿಚಿದ ಕುಗ್ಗಿಹೋದನು. ಆದರೂ ಎಲ್ಲರ ಮುಂದೆ ತನ್ನ ಮಗಳ ಬಳಿ ಕ್ಷಮಾಪಣೆ ಕೇಳಿದನು.

**5. ಪಾತೊಳ್ಯೊ** ಒಮ್ಮೆ ಅತ್ತೆಯಾದವಳು "ಪಾತೊಳ್ಯೊ" ತಿಂಡಿ ಮಾಡುತ್ತಾಳೆ. ಸೊಸೆ ಗರ್ಭವತಿ. ಪಾತೊಳ್ಯೊ ಘಮ್ಮೆಂದು ಪರಿಮಳ ಬೀರುತ್ತಿತ್ತು. ಅತ್ತೆ ಕೊಡಲೊಲ್ಲಳು, ಸೊಸೆಗೆ ಆಗಲೇ ಒಚೆದು ಪಾತೊಳ್ಯೋ ತೆಗೆದುಕೊಂಡು ಎಲೆಬಿಚ್ಚಿ ಬಾಯಿಗಿಕ್ಕಿದಳು, ಬಾಯಿ ಸುಟ್ಟುಕೊಂಡಿತು. ಆರಿಸಿ ತಿನ್ನುವಷ್ಟು ವ್ಯವಧಾನವಿರಲಿಲ್ಲ. ಅದನ್ನು ಬಿಂದಿಗೆಯೊಳಗೆ ಹಾಕಿಕೊಂಡು "ನೀರಿಗೋಗಗ್ತೀನಿ ಅತ್ಯಮ್ಮ" ಎಚೆದು ಹೇಳಿ ಹೊರಟಳು. ದಾರಿಯಲ್ಲಿಒಂದು ಕಾಳಿಗುಡಿಯಿದ್ದಿತು. ಸೊಸೆ ಅದರೋಳಗೆ ಹೋಗಿ ಬಾಗಿಲು ಹಾಕಿಕೊಂಡು, ಪಾತೊಳ್ಯೊ ತೆಗೆದು ಗಬಗಬ ತಿಂದಳು. ಅವಳು ಬಿಸಿಬಿಸಿ ನುಂಗುತ್ತಿರುವುದನ್ನು ಕಂಡ ಕಾಳಿ ವಿಸ್ಮಯದಿಂದ ಬಾಯಿಮೇಲೆ ಬೆರಳಿಟ್ಟುಕೊಂಡಳು. ಸೊಸೆ ಅದನ್ನು ಗಮನಿಸದೆ ಹೊರಗೆ ಬಂದು ನೀರಿಗೆ ಹೋದಳು.

ಮಾರನೆಯ ದಿನ ಗುಡಿಗೆ ಬಂದಾಗ ಬಾಯಿಯ ಮೇಲೆ ಬೆರಳಿಟ್ಟುಕೊಂಡಿದ್ದ ಕಾಳಿಯನ್ನು ಕಂಡು ಜನರಿಗೆ ಆಶ್ಚರ್ಯವಾಯಿತು. ಭಯಭೀತರಾದರು, ಗುಡಿಯಲ್ಲು ಏನೋ ಅನಾಹುತ ನಡೆದಿರುವ್ಯದರಿಂದಲೇ ಕಾಳಿ ಬಾಯಿಯ ಮೇಲೆ ಬೆರಳಿಟ್ಟುಕೊಂಡಿದೆ ಎಂಬ ವಿಷಯ ಊರಿನಲ್ಲೆಲ್ಲಾ ಹಬ್ಬಿತು. ಪ್ರಜೆ, ಪುನಸ್ಕಾರ, ದಾನಧರ್ಮಗಳೆಲ್ಲ ನಡೆದವು. ಕಾಳಿ ಬಾಯಿಚೆಯು ಮೇಲಿಂದ ಬೆರಳನ್ನು ತೆಗೆಯಲಿಲ್ಲ. ಅತ್ತೆ ಶಾಪಹಾಕಲು ಪ್ರಾರಂಭಿಸಿದಳು. ಸೊಸೆ ಗಾಬರಿಗೊಂಡು "ನಾನು ಚೊಚ್ಚಲ ಮಗುವಿನ ಗರ್ಭಿಣಿ, ಈ ಶಾಪಗಳು ಹುಟ್ಟಲಿರುವ ತನ್ನ ಮಗುವನ್ನು ಬಾಧಿಸಬಾರದು" ಎಚೆದು ಕೊಂಡು ಯಾರೂ ಇಲ್ಲದೆ ಸಮಯದಲ್ಲಿ ಗುಡಿಯ ಒಳಗೆ ಹೋಗಿ ಬಾಗಿಲು ಹಾಕಿಕೊಂಡು ಸೀರೆಯ ನೆರಿಗೆಯನ್ನು ಸೊಂಟಕ್ಕೆ ಸಿಕ್ಕಿಸಿ ಕಾಳಿಯನ್ನು ದುರದುರನೆ ನೋಡುತ್ತಾ "ಮರ್ಯಾದೆಯಿಂದ ಬಾಯಿಮೇಲಿನ ಕೈಯನ್ನು ತೆಗೆದುಬಿಡು, ನಾನೇನು ನಿನಗೆ ಕೇಳಿದೆನಾ? ನೀನು ನನ್ನ ಹಾಗೆ ಹೆಣ್ಣಲ್ಲವೆ? ಅತ್ತೆಯ ಕಾಟದಿಂದ ತಪ್ಪಿಸಿಕೊಂಡು ಬಂದು ಗರ್ಭಿಣಿಯಾದ ನಾನು ಒಚೆದು ಬಿಸಿ ಪಾತೊಳ್ಯೊ ತಿಂದದ್ದು ಮಹಾಪರಾಧವಾಗಿ ಹೋಯಿತೆ? ಬಾಯ್ಮೆಲಿಂದ ಬೆಟ್ ತೆಗಿತಿಯೋ, ಇಲ್ಲ ನನ್ನ ಸೀರೆ ಎತ್ತಿ ತೋರಿಬಿಡ್ಲೋ" ಎನ್ನುತ್ತಾಳೆ. ತಕ್ಷಣ ಕಾಳಿ ಬಾಯಿಮೇಲಿಂದ ಬೆರಳು ತೆಗೆದುಬಿಡುತ್ತಾಳೆ.

ಇಂಥದೇ ಕಥೆ ಕನ್ನಡ ಕ್ರೈಸ್ತರಲ್ಲಿಯೂ ರೂಢಿಯಲ್ಲಿದೆ. ಆವರ ಕಥೆಯಲ್ಲಿ ಸೊಸೆಯು ಕಾಳಿಯನ್ನು ಬಿಂದಿಗೆಯಲ್ಲಿ ಹೊಡೆಯುವುದಾಗಿ ಬೆದರಿಸುತ್ತಾಳೆ. ತಮಿಳು ಕ್ರೈಸ್ತರಲ್ಲಿಯೂ ಈ ಕಥೆ ಪ್ರಚಲಿತವಾಗಿದ್ದು, ಅವರು ಕಾಳಿಗೆ ಚಪ್ಪಲಿಪ್ರಜೆ ಮಾಡುವುದಾಗಿ ಗದರಿಸಿ ಬಾಯಿಯ ಮೇಲಿಂದ ಬೆರಳು ತೆಗೆಸುತ್ತಾರೆ. ಕೊಂಕಣಿ ಕ್ರೈಸ್ತರು ಸ್ವಭಾವತಃ ಹಾಸ್ಯಪ್ರಿಯರು, ಆದ್ದರಿಂದ ತಮಿಳು ಕ್ರೈಸ್ತರ ಕಥೆಗಳಿಗಿಚೆತ ಕೊಂಕಣಿ ಕ್ರೈಸ್ತರ ಕಥೆಯ ಮುಕ್ತಾಯ ಭಿನ್ನವಾಗಿದೆ.

**6. ಪದ್ಮಾವತಿ ಸೂಳೆ** ಒಂದೂರಿನಲ್ಲಿ ಒಬ್ಬ ರಾಜನಿದ್ದ. ಅವನ ರಾಣಿಗೆ ಮಕ್ಕಳಾಗದ ಕಾರಣ ಆಕೆಯನ್ನು ಕುದುರೆಲಾಯದಲ್ಲಿರಿಸಿ, ಮತ್ತೊಬ್ಬಳನ್ನು ಮದುವೆಯಾಗುತ್ತಾನೆ. ಅವಳಿಗೂ ಮಕ್ಕಳಾಗಲಿಲ್ಲ. ಮೂರನೆಯ ಮದುವೆಯಾಗುತ್ತಾನೆ. ಆದರೆ ಅವಳಿಗೂ ಮಕ್ಕಳಾಗಲಿಲ್ಲ. ರಾಜನಿಗೆ ತುಂಬಾ ವ್ಯಥೆಯಾಗುತ್ತದೆ. ದುಃಖವನ್ನು ಮರೆಯಲು ವಿವಿಧ ಬಗೆಯ ತಿಂಡಿತಿನಿಸುಗಳನ್ನು ಕಟ್ಟಿಕೊಂಡು ಶಾಲೆಯ ಬಳಿಗೆ ಹೋಗಿ ಅಲ್ಲಿನ ಮಕ್ಕಳನ್ನು ಮುದ್ದುಮಾಡಿ ತಿನ್ನಿಸುತ್ತಾನೆ. ತಿಂಡಿ ಆಸೆಗೆ ಮಕ್ಕಳು ರಾಜನನ್ನು ಕಂಡೊಡನೆ ಓಡಿ ಬರುತ್ತಿದ್ದವು. ಮಕ್ಕಳ ತಂದೆತಾಯಿ "ತಿಂಡಿ ಕೊಡುವುದು ಯಾರು"? ಎಂದು ಕೇಳಿದಾಗ ಮಕ್ಕಳು "ಮೂರ್ ಹೆಂಡ್ತೀರ್ನ ಕಟ್ಕೊಂಡ್ರೂ ಮಕ್ಕಳಾಗಲಿಲ್ವಲ್ಲ ಆ ರಾಜ" ಎಂದು ಹೇಳುತ್ತವೆ. ಅದಕ್ಕೆ ಅವರು "ಗೊಡ್ಡುರಾಜನ ಹತ್ರ ತಿನ್ನೋದೇನೂ ಬೇಕಿಲ್ಲ" ಎಂದು ಕಟ್ಟುಮಾಡುತ್ತಾರೆ. ಮಾರನೇ ದಿನ ರಾಜ ತಿಂಡಿ ತೆಗೆದುಕೊಂಡು ಶಾಲೆಯ ಬಳಿಗೆ ಬಂದಾಗ ಯಾವ ಮಗುವೂ ಅವನ ಬಳಿಗೆ ಬರುವುದಿಲ್ಲ. ರಾಜನಿಗೆ ಆಶ್ಚರ್ಯವಾಗುತ್ತದೆ. ಒಬ್ಬ ಹುಡುಗನನ್ನು ಹಿಡಿದುಕೊಂಡು ಕೇಳುತ್ತಾನೆ. ಆಗ ಆ ಹುಡುಗ "ನೀವು ಗೊಡ್ ರಾಜನಂತೆ, ನಿಮ್ಮ ಕೈಲಿ ತಿಂಡಿ ತಿಂದ್ರೆ ನಾವೂ ಗೊಡ್ಡಾಗಿ ಬಿಡ್ತೀವಂತೆ" ಎಂದು ಹೇಳಿದ. ರಾಜನಿಗೆ ತುಂಬಾ ಬೇಸರವಾಗುತ್ತದೆ. ಮನೆಗೆ ಬಂದವನೇ ಮಗ್ಗುಲಾಗಿ ಮಲಗಿಬಿಡುತ್ತಾನೆ. ಇಬ್ಬರು ಹೆಂಡತಿಯರೂ ಎಬ್ಬಿಸುತ್ತಾರೆ. "ನನ್ಗೇನೂ ಬೇಡ, ನನ್ನನ್ನು ಗೊಡ್ಡುರಾಜ ಅಂತ ಹೇಳ್ತಾರೆ. ನಾನು ಬದ್ಕೋ ಬದಲು ಸಾಯೋದೇ ಮೇಲು" ಎನ್ನುತ್ತಾನೆ. ಆಗ ರಾಣಿಯರು "ಅದಕ್ಕೇಕೆ ಇಷ್ಟು ದುಃಖಪಡ್ತೀರಿ" ನಿಮಗೆ ಬುತ್ತಿ ಕಟ್ಟಿಕೊಡ್ತೀವಿ. ಕಾಡಿನದಾರಿ ಹಿಡಿದು ಹೋಗ್ತಾ ಇರಿ. ಕಾಡಿನಲ್ಲಿ ದೇವರು ಕಾಣಿಸಿಕೊಂಡು ಮಕ್ಕಳಫಲ ಕೊಡ್ತಾನೆ" ಎಂದು ಹೇಳುತ್ತಾರೆ. ರಾಣಿಯರ ಮಾತಿಗೆ ಒಪ್ಪಿ ರಾಜನು ಬುತ್ತಿಯ ಗಂಟನ್ನು ಹಿಡಿದು ಕಾಡಿನ ದಾರಿಯಲ್ಲಿ ಸಾಗುತ್ತಾನೆ. ಕಾಡನ್ನು ತಲುಪಿದಾಗ ತುಂಬಾ ಸುಸ್ತಾಗಿ ಒಂದು ಮರದಡಿ ಕುಳಿತು ವಿಶ್ರಾಂತಿ ಪಡೆಯುತ್ತಾನೆ. ಅವನ ಕಣ್ಣಿಗೆ ಒಂದು ಮಾವಿನಮರ ಕಾಣಿಸುತ್ತದೆ. ಅದರ ತುಂಬಾ ಕಾಯಿಬಿಟ್ಟಿರುತ್ತದೆ. "ಇಷ್ಟು ಹೊತ್ತಾದ್ರೂ ದೇವ್ರು ಕಾಣ್ಸಿಕೊಳ್ಳಿಲ್ಲ ಈ ಕಾಯಾದ್ರೂ ಕಿತ್ಕೊಂಡು ಹೋಗೋಣ" ಎಂದು ಕೊಂಡು ಮರಹತ್ತಿ ಒಂದು ಚೀಲದ ತುಂಬಾ ಕಾಯಿಗಳನ್ನು ಕಿತ್ಕೊಂಡು ಇಳಿಯುತ್ತಾನೆ. ಇಳಿದಾಗ ಅವು ಮೂರೇ ಮೂರು ಕಾಯಾಗಿಬಿಟ್ಟಿರುತ್ತವೆ. ಆಶ್ಚರ್ಯದಿಂದ ಮತ್ತೆ ಮರಹತ್ತಿ ಚೀಲದ ತುಂಬಾ ಕಾಯಿಗಳನ್ನು ಕಿತ್ತುಕೊಂಡು ಇಳಿಯುತ್ತಾನೆ. ಇಳಿದಾಗ ಅವು ಮೂರೇ ಮೂರು ಕಾಯಾಗಿರುತ್ತವೆ. ಆಶ್ಚರ್ಯ ಪಡುತ್ತಿದ್ದ ರಾಜನಿಗೆ ಒಬ್ಬ ಮುದುಕ ಕಾಣಿಸಿಕೊಂಡು" ನಿನಗಿರುವುದೇ ಮೂರೇ ಫಲ, ನೀನೇಕೆ ವೃಥಾ ಶ್ರಮ ಪಡ್ತೀಯ" ಎಂದು ಹೇಳಿದನು. ಅದನ್ನೆತ್ತಿಕೊಂಡು ಅರಮನೆಗೆ ಬರುತ್ತಾನೆ. ಇಬ್ಬರು ಹೆಂಡತಿಯರಿಗೂ ಒಂದೊಂದು ಕೊಡುತ್ತಾನೆ. ಉಳಿದ ಒಂದು ಕಾಯನ್ನು ದಾದಿಯರು ಅಕ್ಕಿತೊಂಬೆಯಲ್ಲಿ ಹಾಕುತ್ತಾರೆ.

ಕುದುರೆಲಾಯದಲ್ಲಿ ಇರುವ ಹಿರಿಯರಾಣಿಗೆ ತಿಂಗಳಿಗೊಮ್ಮೆ ಧಾನ್ಯವನ್ನು ಕೊಡುವ ಕೆಲಸ ಕಿರಿಯ ರಾಣಿಯರದು. ಅಂದು ಧಾನ್ಯಕ್ಕಾಗಿ ಬಂದು ನಿಂತ ದಾದಿಯರನ್ನು ಕಂಡು "ನಮಗೆ ಮುಟ್ಟು ನಿಂತು ಎರಡು ತಿಂಗಳಾಗಿದೆ. ನಮ್ಮ ಕೈಲಿ ಎತ್ತಿ ಕೊಡಲಾಗೋದಿಲ್ಲ, ಹೋಗ್ರೆ ದಾದೀರ ನೀವೆ ಎತ್ಕೊಳ್ಳಿ" ಅಂತಾರೆ. ಅಕ್ಕಿ ತೆಗೆದುಕೊಳ್ಳಲು ಹೋದ ದಾದಿಯರಿಗೆ ಮಾವಿನಹಣ್ಣು ಸಿಗುತ್ತದೆ. ಇವರಿಬ್ಬರಿಗೂ ಮಾವಿನಹಣ್ಣು ತಿಂದೇ ಮುಟ್ಟು ನಿಂತಿದೆ. ಇದನ್ನು ನಮ್ಮ ರಾಣಿಗೆ ಕೊಡೋಣ ಎಂದು ಒಬ್ಬರಿಗೊಬ್ಬರು ಮಾತಾಡಿಕೊಂಡು ಆ ಹಣ್ಣನ್ನು ತಂದು ಹಿರಿಯರಾಣಿಗೆ ಕೊಡುತ್ತಾರೆ. ಆಗ ರಾಣಿ ಅದನ್ನು ತಿರಸ್ಕರಿಸುತ್ತಾ "ನನ್ನದು ಯಾವ ತಪ್ಪೂ ಇಲ್ಲದೆಯೇ ರಾಜ ನನ್ನನ್ನು ಕುದುರೆಲಾಯದಲ್ಲಿರಿಸಿ ದ್ದಾನೆ. ಇದೊಂದಾದರೆ ನನ್ನನ್ನು ಬಿಟ್ಟುಕೊಡ್ತಾನೆಯೇ? ಬೇಡ" ಎನ್ನುತ್ತಾಳೆ. ದಾದಿಯರು ಒತ್ತಾಯಮಾಡಿ ತಿನ್ನಿಸುತ್ತಾರೆ. ನಂತರ ಹಿರಿಯ ರಾಣಿಗೂ ಮುಟ್ಟುನಿಲ್ಲುತ್ತದೆ. ದಿನತುಂಬಿದಾಗ ಕಿರಿಯ ಹೆಂಡತಿಯರಿಗೆ ಗಂಡು ಮಕ್ಕಳೂ, ಹಿರಿಯಹೆಂಡತಿಗೆ ಹೆಣ್ಣುಮಗುವೂ ಹುಟ್ಟುತ್ತವೆ. ಹಿರಿಯರಾಣಿಗೆ ತುಂಬಾ ಭಯವಾಗುತ್ತದೆ. ಆಗ ದಾದಿಯರು ನೆಲಮಾಳಿಗೆ ತೋಡಿಸಿ ಅದರೊಳಗೆ ಇಟ್ಟುಕೊಂಡು ಸಾಕುತ್ತಾರೆ. ಆ ಹೆಣ್ಣುಮಗು ಅಷ್ಟಾಗಿ ಇಷ್ಟಾಗಿ ಮೂರು ವರ್ಷದ ಮಗುವಾಗುತ್ತೆ. ಆ ಮಗುವಿಗೆ ವಿದ್ಯೆಬುದ್ದಿ ಕಲಿಸುತ್ತಾ ಬಂದರು. ಕಿರಿಯರಾಣಿಯರ ಮಕ್ಕಳು ಶಾಲೆಗೆ ಹೋಗುತ್ತಾ, ಹಾಗೇ ಬೆಳೆದು ದೊಡ್ಡವರಾದರು. ಆಗ ಶಾಲೆಯಲ್ಲಿ ಮಾತು ಮಾತಲ್ಲಿ ಬೇರೆ ಹುಡುಗರು "ಯಾರೋ ಪದ್ಮಾವತಿ ಸೂಳೆಯಂತೆ, ಅವಳು ಪಗಡೆಯಾಟದಲ್ಲಿ ತುಂಬಾ ಎತ್ತಿದ ಕೈಯಂತೆ. ನಾವು ಅಲ್ಲಿ ಹೋಗಿ ಪಗಡೆ ಅಡಿ ಗೆಲ್ಲೋಣ" ಎಂದು ಹೇಳುತ್ತಾರೆ. ಈ ಅಣ್ಣತಮ್ಮಂದಿರು ತಮ್ಮ ತಂದೆತಾಯಿ ಬಳಿ ಅಪ್ಪಣೆ ಕೇಳುತ್ತಾರೆ. "ಮಕ್ಕಳಿಲ್ಲದೆ ಪರಿತಪಿಸಿ ನಾವು ನಿಮ್ಮನ್ನು ಪಡೆದಿದ್ದೇವೆ. ನೀವೆಲ್ಲೂ ಹೋಗಬೇಡಿ" ಎನ್ನುತ್ತಾರೆ. ಅಣ್ಣತಮ್ಮಂದಿರು ಹಟಮಾಡುತ್ತಾ "ನೀವು ಕಳುಹಿಸದಿದ್ದರೆ ನಿಮ್ಮ ಮುಂದೆಯೇ ನಾವು ನಾಲಿಗೆ ಇರ್ಕೊಂಡು ಪ್ರಾಣಬಿಡ್ತೀವಿ" ಎಂದು ಹೆದರಿಸುತ್ತಾರೆ. "ನಮ್ಮ ಹಣೇಬರಹ ಇಷ್ಟೇನೆ. ಹೋಗಿ ಗೆದ್ದು ಬನ್ನಿ" ಎಂದು ಎಲ್ಲಾ ಅನುಕೂಲಗಳನ್ನು ಮಾಡಿಕೊಟ್ಟು ಕಳುಹಿಸುತ್ತಾರೆ.

ಅಣ್ಣತಮ್ಮಂದಿರು ಪದ್ಮಾವತಿಯ ಮನೆಯ ಮುಂದೆ ಇಳಿಯುತ್ತಾರೆ. ಅವಳು ಪಹರೆದಾರರನ್ನು ಕುರಿತು. "ಬಂದಿರುವವರು ಯಾರು? ಅವರನ್ನು ಕರೆದುಕೊಂಡು ಬನ್ನಿ" ಎಂದು ಹೇಳುತ್ತಾಳೆ. ಪಹರೆಯವರು ಕರೆತಂದಾಗ "ನೀವು ಯಾವ ದೇಶದ ರಾಜಕುಮಾರರೋ ನನ್ನೊಡನೆ ಪಗಡೆಯಾಡಲು ಬಂದಿದ್ದೀರಿ. ನನ್ನೊಡನೆ ಪಗಡೆಯಾಡಬೇಕಾದರೆ ಒಂದು ಷರತ್ತನ್ನು ಒಪ್ಪಿಕೊಳ್ಳಬೇಕು" ಎನ್ನುತ್ತಾಳೆ. "ಏನದು ಷರತ್ತು" ಎಂದು ಅಣ್ಣತಮ್ಮಂದಿರು ಕೇಳಿದಾಗ" ಪಗಡೆಯಾಟ ಪ್ರಾರಂಭವಾಗುವ ಮುನ್ನ ನಾನು ಒಂದು ಕೊತ್ತಿಯನ್ನು ಕರೆಯುತ್ತೇನೆ. ಅದರ ತಲೆಯಮೇಲೆ ಒಂದು ತೊಪ್ಪೆ ಸಗಣಿ ಇಟ್ಟು, ಮುಂಗೈಗಾತ್ರ ಬತ್ತಿ ಹಾಕಿ, ಒಂದು ಬಾಟ್ಲಿ ಎಣ್ಣೆ ಸುರಿದು ದೀಪಹಚ್ಚಿ ಇಡ್ತೀನಿ. ನಂತರ ಆಟ ಪ್ರಾರಂಭವಾಗ್ಬೇಕು. ಕೊತ್ತಿ ಬೆಳಗಾನ ದೀಪ ಹೊತ್ಕೊಂಡು ನಿಂತುಬಿಟ್ರೆ ನಾನು ಗೆದ್ದೆ, ನೀವು

ಸೋತ್ರಿ. ನೀವು ಸೋತದ್ದೇ ಆದ್ರೆ ಕವಡೆ ಮೂಗ್ದಾರ ಹಾಕ್ಕೊಂಡು ನನ್ನ ಮನೆಮುಂದೆ ಸೌದೆ ಸೀಳಿಕೊಂಡಿರಬೇಕು. ಕೊತ್ತಿ ಏನಾದ್ರೂ ನಿಲ್ಲದೆ ಓಡಿಬಿಟ್ಟರೆ ನಾನು ಸೋತ ಹಾಗೆ. ನನಗೆ ತಲೆಮೂರು ಪಟ್ಟೆ ಹೊಡೆದು, ಕತ್ತೆಮೇಲೆ ಕೂರಿಸಿ ಊರೆಲ್ಲಾ ಮೆರವಣಿಗೆ ಮಾಡಿಸಿ, ಸಿಗಿದು ತೋರಣ ಕಟ್ಬಿಟ್ಟು, ನನ್ನ ರಾಜ್ಯವನ್ನೆಲ್ಲಾ ನೀವು ತೆಗೆದುಕೊಳ್ಳಿ" ಎಂದು ಸವಾಲೆಸೆಯುತ್ತಾಳೆ. ಅಣ್ಣತಮ್ಮಂದಿರು ಒಪ್ಪಿಕೊಂಡರು ಅವರಿಗೆ ಒಂದು ಕೋಣೆಯನ್ನು ತೋರಿಸಿ "ಅಲ್ಲಿದ್ದು ಸಂಜೆಯಾದ ಕೂಡಲೆ ಬನ್ನಿ" ಎಂದಳು. ಸಂಜೆಯಾದಮೇಲೆ ಇಬ್ಬರೂ ಪಗಡೆಯಾಡಲು ಅವಳಲ್ಲಿಗೆ ಹೋದರು. ಅವಳು ಹೇಳಿದಂತೆಯೇ ಕೊತ್ತಿಯನ್ನು ಕರೆತಂದು ಒಂದು ತೊಪ್ಪೆ ಸಗಣಿ ಇಟ್ಟು ಮುಂಗೈ ಅಗಲ ಬತ್ತಿಹಾಕಿ, ಒಂದು ಬಾಟ್ಲಿ ಎಣ್ಣೆ ಸುರಿದು ದೀಪಹಚ್ಚಿ, ಪಗಡೆಯಾಟ ಪ್ರಾರಂಭಿಸುತ್ತಾಳೆ. ಬೆಳಗಾನ ಅಡ್ತಾ ಇದ್ದರು, ಬೆಳಗಾನ ಕೊತ್ತಿ ದೀಪಹೊತ್ಕೊಂಡು ನಿಂತುಬಿಟ್ಟಿತು. ಅಣ್ಣತಮ್ಮಂದಿರು ಸೋತುಹೋದರು. ಕವಡೆಯ ಮೂಗುದಾರ ಧರಿಸಿ ಅವಳ ಮನೆಮುಂದೆ ಸೌದೆ ಸೀಳಿಕೊಂಡು ಇರುತ್ತಾರೆ.

ರಾಜನಿಗೆ ತನ್ನ ಮಕ್ಕಳ ಸುದ್ಧಿಮುಟ್ಟಿತು. ತುಂಬಾ ವ್ಯಥೆಯಾಯಿತು. ರಾಣಿಯರು ಅಳಲಾರಂಭಿಸಿದರು. ದಾದಿಯರು ಈ ವಿಷಯವನ್ನು ತಿಳಿದುಕೊಂಡು ಹಿರಿಯ ರಾಣಿಗೆ ತಿಳಿಸಿ, ಅವಳ ಮಗಳನ್ನು ಅಲಂಕರಿಸಿ ಕರೆತಂದು ರಾಜನ ಮಡಿಲಲ್ಲಿ ಕೂರಿಸುತ್ತಾರೆ. ಆಗ ರಾಜ ದಾದಿಯರನ್ನು ವಿಚಾರಿಸುತ್ತಾನೆ. ದಾದಿಯರು ಮಾವಿನಹಣ್ಣಿನ ವಿಷಯವನ್ನೆಲ್ಲಾ ರಾಜನಿಗೆ ವಿವರವಾಗಿ ಹೇಳುತ್ತಾರೆ. "ಒಂದು ಶಬ್ದವೂ ಇಲ್ಲದೆ ಹೇಗೆ ಸಾಕಿದಿರಿ?" ಎಂದು ರಾಜ ಕೇಳುತ್ತಾನೆ. "ನಾವು ನೆಲಮಾಳಿಗೆ ತೋಡಿಸಿ ಅದರಲ್ಲಿಟ್ಟು ಸಾಕಿ, ವಿದ್ಯೆಬುದ್ಧಿಯನ್ನೆಲ್ಲಾ ಕಲಿಸಿದೆವು" ಎಂದು ಹೇಳುತ್ತಾರೆ.

ರಾಜ ತುಂಬಾ ಮೆಚ್ಚಿಕೊಂಡು ಹೆಣ್ಣುಮಗುವನ್ನು ನೋಡಿ ಗಂಡುಮಕ್ಕಳನ್ನು ಮರೆತ. ಹೆಣ್ಣುಮಗುವನ್ನೂ, ಅವಳ ತಾಯಿಯನ್ನೂ ಕರೆದುಕೊಂಡು ಸಂತೋಷದಿಂದ ಬಾಳುತ್ತಿದ್ದ. ಸ್ವಲ್ಪದಿನಗಳು ಕಳೆದಮೇಲೆ ಆ ಹುಡುಗಿಗೆ ಅಣ್ಣಂದಿರ ವಿಷಯ ತಿಳಿಯಿತು. ಆಗ ಆಕೆ ಅಣ್ಣಂದಿರನ್ನು ಅಗಲಿರಲಾರದೆ "ನಾನು ಹೋಗಿ ಪದ್ಮಾವತಿಯೊಡನೆ ಪಗಡೆಯಾಡಿ ಅವಳನ್ನು ಸೋಲಿಸಿ ನಮ್ಮಣ್ಣದಿಂರನ್ನು ಕರೆದುಕೊಂಡು ಬರುತ್ತೇನೆ" ಎಂದು ತಂದೆಯ ಬಳಿ ಹೇಳುತ್ತಾಳೆ. ""ಬೇಡ ಮಗಳೇ, ಇಬ್ಬರು ಅಣ್ಣಂದಿರೂ ಅವಳ ಮನೆಯ ಗುಲಾಮರಾಗಿದ್ದಾರೆ. ನಿನ್ನನ್ನೂ ಕಳೆದುಕೊಂಡು ನಾನು ಹೇಗೆ ಬದುಕಲಿ" ಎಂದು ಹೇಳುತ್ತಾನೆ. "ನನ್ನನ್ನು ಕಳುಹಿಸಲೇಬೇಕು. ಇಲ್ಲದಿದ್ದರೆ ನಾನು ನಾಲಿಗೆ ಇರ್ಕೊಂಡು ಸತ್ತೇಹೋಗ್ತೀನಿ" ಹಠಮಾಡುತ್ತಾಳೆ. ರಾಜನು ಇದೂ ತನ್ನ ಹಣೆಬರಹವೆಂದುಕೊಂಡು ಕಳುಹಿಸಲು ಒಪ್ಪಿಕೊಳ್ಳುತ್ತಾನೆ.

ಎರಡು ಜೊತೆ ಗಂಡಸರ ಉಡುಪು, ಒಂದು ಇಲಿ ಕೊಳಪೆ (ಇಲಿಕೊಳವೆ) ಒಂದು ಮಾತಾಡುವ ಗಿಳಿಯನ್ನು ಕೊಡಿಸಲು ಕೇಳುತ್ತಾಳೆ. ರಾಜ ಅವಳು ಕೇಳಿದ್ದನ್ನೆಲ್ಲಾ ಕೊಡಿಸಿ, ಕೈಯಲ್ಲಿ ಕಾಸುದುಡ್ಡನ್ನೂ ಕೊಡುತ್ತಾನೆ. ಗಂಡುವೇಷ ಧರಿಸಿ, ಸೋದರ ಮಾವನನ್ನೂ ಕರೆದುಕೊಂಡು ಕುದುರೆಯನ್ನೇರಿ ಹೊರಡುತ್ತಾಳೆ. ಪದ್ಮಾವತಿಯ ಮನೆಮುಂದೆ ನಿಂತಾಗ, ಪದ್ಮಾವತಿ ಪಹರೆಯವರನ್ನು ಕರೆದು "ಯಾರೂ ರಾಜನಮಗ ಬಂದಿದ್ದಾನೆ ಕರೆದು ತನ್ನಿ" ಎನ್ನುತ್ತಾಳೆ. ಪಹರೆಯವರು ರಾಜನ ಮಗಳನ್ನು ವಿಚಾರಿಸಿದಾಗ "ನಾನು ಪಗಡೆಯಾಡಲು ಬಂದಿದ್ದೇನೆ, ಸುಮ್ಮನೇನೂ ಬಂದಿಲ್ಲ" ಎನ್ನುತ್ತಾಳೆ. ಗಂಡು ವೇಷಧಾರಿ ರಾಜನ ಮಗಳು ಒಂದು ಕೋಣೆಯಲ್ಲಿ ಇಳಿದುಕೊಳ್ಳುತ್ತಾಳೆ. ಸಂಜೆಯಾಗುತ್ತಲೇ ರಾಜನ ಮಗಳು ಗಂಡು ವೇಷಧರಿಸಿ ಪದ್ಮಾವತಿಯ ಬಳಿ ಹೋಗುತ್ತಾಳೆ. ಪದ್ಮಾವತಿ ತನ್ನ ಷರತ್ತನ್ನು ಹೇಳುತ್ತಾಳೆ. ರಾಜನ ಮಗಳು ಷರತ್ತನ್ನು ಒಪ್ಪಿಕೊಳ್ಳುತ್ತಾಳೆ. ಕೊತ್ತಿ ದೀಪ ಹೊತ್ತು ನಿಂತಿರುತ್ತದೆ. ಆಟ ಪ್ರಾರಂಭವಾಗುತ್ತದೆ. ಆಡುತ್ತಾ ಇರುವಾಗ ರಾಜನಮಗಳು ಕೊತ್ತಿಗೆ ಇಲಿ ಕೊಳಪೆಯನ್ನು ತೋರಿಸುತ್ತಾಳೆ. ಕೊತ್ತಿ ಇಲಿಯ ಬೇಟೆಗಾಗಿ ಚಂಗನೆ ಹಾರಿತು. ಪದ್ಮಾವತಿಗೆ ಬಹಳ ಆಶ್ಚರ್ಯವಾಗುತ್ತದೆ.

ಗಂಡು ವೇಷಧಾರಿ ರಾಜನ ಮಗಳು "ನಾನು ಗೆದ್ದೆ, ನೀನು ಸೋತೆ" ಎನ್ನುತ್ತಾಳೆ. ಆಗ ಪದ್ಮಾವತಿ "ಮೂರುಸಾರಿ ಆಡುವುದು ಪದ್ಧತಿ" ಎಂದು ಮತ್ತೆ ಕೊತ್ತಿಯನ್ನು ಕೂರಿಸಿ ಒಂದು ತೊಪ್ಪೆ ಸಗಣಿ ಇಟ್ಟು ಅಂಗೈಯಗಲ ಬತ್ತಿ ಹಾಕಿ ಒಂದು ಬಾಟ್ಲ ಎಣ್ಣೆಸುರಿದು ದೀಪ ಹಚ್ಚುತ್ತಾಳೆ. ಮತ್ತೆ ಆಟ ಪ್ರಾರಂಭವಾಗುತ್ತದೆ. ಆಡುತ್ತಾ ಇರುವಾಗ ರಾಜನ ಮಗಳು ಇಲಿಕೊಳಪೆಯನ್ನು ಕೊತ್ತಿಗೆ ತೋರಿಸುತ್ತಾಳೆ. ಕೊತ್ತಿ ಮತ್ತೆ ಓಡುತ್ತದೆ. "ಈ ಸಲವೂ ಸೋತು ಹೋದೆ" ಎಂದು ರಾಜನ ಮಗಳು ಹೇಳಿದಾಗ "ಆಗಲಿ, ಮತ್ತೊಂದು ಸರದಿ ಇದೆ" ಎಂದು ಪದ್ಮಾವತಿ ಹೇಳಿ, ಮತ್ತೆ ಕೊತ್ತಿಯನ್ನು ಕೂರಿಸಿ, ದೀಪಹಚ್ಚಿ ಆಟಕ್ಕೆ ಆರಂಭಿಸುತ್ತಾಳೆ. ಮೂರನೇ ಸಲವೂ ಕೊತ್ತಿ ಇಲಿ ಕೊಳಪೆಯನ್ನು ನೋಡಿ ಜಾಡಿಸಿ ತಳ್ಳಿಕೊಂಡು ಓಡಿಹೋಗುತ್ತದೆ. ಅಷ್ಟರಲ್ಲಿ ಬೆಳಕು ಹರಿಯುತ್ತದೆ. ಪದ್ಮಾವತಿಯ ಗಂಡ ಮಂತ್ರಿಯನ್ನು ಕಳುಹಿಸಿ ತನ್ನ ಹೆಂಡತಿ ಸೋತಿರುವಳೋ ಗೆದ್ದಿರುವಳೋ ಎಂದು ಕೇಳಿಸುತ್ತಾನೆ. ತಾನು ಸೋತಿರುವುದಾಗಿ ಪದ್ಮಾವತಿ ಹೇಳಿ ಕಳುಹಿಸುತ್ತಾಳೆ. ಮಂತ್ರಿಯಿಂದ ವಿಷಯ ತಿಳಿದ ರಾಜನಿಗೆ ಬಹಳ ಆಶ್ಚರ್ಯವಾಯಿತು. ಇಷ್ಟೊಂದು ಜನ ರಾಜರು ಇಲ್ಲಿ ಪಗಡೆಯಾಡಿ ಸೋತು ಅರಮನೆಯಲ್ಲಿ ಸೌದೆ ಸೀಳುತ್ತಿರುವಾಗ ಈ ತರುಣ ಹೇಗೆ ಗೆದ್ದ? ಇದರಲ್ಲೇನೋ ಕೈವಾಡವಿದೆ ಎಂದು ಕೊಂಡು ಅಲ್ಲಿಗೆ ಬಂದು ನೋಡಲು ಗೆದ್ದವನು ಗಂಡಿನಂತೆ ಕಾಣಿಸದೆ, ಗಂಡುವೇಷಧಾರಿಯಾಗಿ ಕೋಮಲವಾದ ಮುಖವುಳ್ಳ ಸ್ತ್ರೀಯಂತೆ ಕಾಣಿಸಿದನು. ರಾಜನು ಮಂತ್ರಿಯ ಸಲಹೆ ಕೇಳಿದನು. ಮಂತ್ರಿಯು "ಮಾಲಿಯ ಜೊತೆ ಸ್ನಾನಮಾಡಲು ಬಿಡೋಣ, ಆಗ ಗುಟ್ಟು ರಟ್ಟಾಗುತ್ತದೆ" ಎಂದು ಹೇಳಿದನು. ಗಿಳಿ ಇದನ್ನು ಕೇಳಿಸಿಕೊಂಡು ಅಕ್ಕಾ ನೀ ಕೆಟ್ಟಲ್ಲ ಎನ್ನಲು ಆಕೆ ಏನೆಂದು ವಿಚಾರಿಸಿದಳು. ಅದು ರಾಜ ಮತ್ತು ಮಂತ್ರಿಯ

ಸಂಭಾಷಣೆಯನ್ನೆಲ್ಲಾ ಹೇಳಿತು. "ಏನು ಮಾಡೋಣ" ಎಂದು ಗಿಳಿಯನ್ನೇ ಕೇಳಿದಳು. "ಆಗಲಿ ಎಂದು ಒಪ್ಪಿಕೋ" ಎಂದಿತು ಗಿಳಿ. ಆಕೆ ಒಪ್ಪಿಕೊಂಡು ಬಿಡುತ್ತಾಳೆ. ಆಗಾಗಿ "ಅಕ್ಕಾ, ನಾನು ಮಾಲಿಯ ಮನೆಯ ಚಾವಣಿಯಮೇಲೆ ಕಸಕಡ್ಡಿಗಳನ್ನೆಲ್ಲಾ ಹಾಕಿಟ್ಟಿರುತ್ತೇನೆ. ನಿನಗೆ ಮೂರು ಹಂಡೆ ನೀರು ಕಾಯಿಸಿಟ್ಟಿರುತ್ತಾರೆ. ಒಂದು ಚಿಪ್ಪಿನ ತುಂಬಾ ಸೀಗೆಪುಡಿ, ಒಂದು ಚಿಪ್ಪಿನ ತುಂಬಾ ಅರಿಸಿನಪುಡಿ ಇಟ್ಟಿರುತ್ತಾರೆ. ಮಾಲಿ ನಿನ್ನನ್ನು ನೋಡಲು ಹೊರಗೆ ಕಾವಲಿರುತ್ತಾನೆ. ನಾನು ಅವನ ಮನೆಯ ಚಾವಣಿಗೆ ಬೆಂಕಿ ಹಚ್ಚುತ್ತೇನೆ. ಆಗ ಸಮಯ ನೋಡಿ ನೀನು ನಾಲ್ಕು ಚೊಂಬು ನೀರು ಹಾಕಿಕೊಂಡು, ವೇಷಧರಿಸಿ ಹೊರಗೆ ಬಾ" ಎನ್ನುತ್ತದೆ. ಅಂತೆಯೇ ಗಿಳಿ ಚಾವಣಿಗೆ ಬೆಂಕಿ ಹಚ್ಚುತ್ತದೆ. ಮಾಲಿ ಮನೆಯ ಕಡೆಗೆ ಓಡುತಾನೆ. ರಾಜನ ಮಗಳು ಸ್ನಾನ ಮುಗಿಸಿ, ವೇಷಧರಿಸಿ ಹೊರಬರುತ್ತಾಳೆ. ರಾಜನು ಮಂತ್ರಿಯನ್ನು ಮಾಲಿಯ ಬಳಿಗೆ ಕಳುಹಿಸುತ್ತಾನೆ. ಅವನು ಪ್ರತ್ಯೆಕ್ಷ ನೋಡದಿದ್ದರೂ "ಗಂಡೇ ಹೊರತು ಹೆಣ್ಣಲ್ಲ" ಎಂದು ಬಿಡುತ್ತಾನೆ. ಆದರೂ ರಾಜನಿಗೆ ಮಂತ್ರಿಯ ಮಾತಿನಲ್ಲಿ ನಂಬಿಕೆ ಬರುವುದಿಲ್ಲ. ರಾಜ ಮತ್ತೊಂದು ಸಲ ಪರೀಕ್ಷಿಸಲು ಬಯಸಿ "ಅವರನ್ನು ನಮ್ಮ ಮನೆಗೆ ಊಟಕ್ಕೆ ಕರೆಯೋಣ, ಬಾಗಿಲಲ್ಲಿ ಪರಕೆ ಇಡೋಣ, ಹೆಂಗಸಾದರೆ ಅದನ್ನು ತೆಗೆದು ಬದಿಗಿಟ್ಟು ಬರುತ್ತಾಳೆ. ಊಟ ಮಾಡುವಾಗಲೂ ಆತುರ ತೋರುತ್ತಾಳೆ. ಗಂಡಾದರೆ ಪರಕೆಯನ್ನು ತುಳಿದುಕೊಂಡು ಬಂದು, ಸಾವಧಾನವಾಗಿ ಊಟಮಾಡಿ ಏಳುತ್ತಾನೆ" ಎಂದನು. ಗಿಳಿ ಇದನ್ನು ಕೇಳಿಸಿಕೊಂಡು ರಾಜನ ಮಗಳ ಬಳಿಗೆ ಬಂದು "ಅಕ್ಕಾ ನೀ ಕೆಟ್ಟೆಲ್ಲೇ" ಎಂದಿತು. ಆಕೆ ಏನೆಂದು ಕೇಳಲು, ವಿಷಯ ತಿಳಿಸಿ "ಊಟಕ್ಕೆ ಹೋಗಲು ಒಪ್ಪಿಕೋ, ಬಾಗಿಲಲ್ಲಿರೋ ಪರಕೆ ತುಳಿದುಕೊಂಡು ಒಳಗೆ ಹೋಗು, ಊಟದಲ್ಲಿ ಆತುರ ತೋರದೆ ಒಂದೆರಡು ಭಕ್ಷ್ಯಗಳನ್ನು ಸಾವಧಾನವಾಗಿ ತಿಂದು ಕೈತೊಳೆ" ಎಂದು ಹೇಳಿತು. ಅವಳು ಹಾಗೆಯೇ ಮಾಡುತ್ತಾಳೆ. ಮಂತ್ರಿ ರಾಜನನ್ನು "ಈಗೇನು ಹೇಳ್ತೀರಿ" ಎಂದಾಗ ರಾಜ "ನೀನೇನಾದರೂ ಹೇಳು, ಆಕೆ ಹೆಣ್ಣೇ" ಎಂದು ರಾಜ ಹೇಳುತ್ತಾನೆ. "ಈಗೇನು ಮಾಡೋಣ ಹೇಳಿ" "ಈ ದಿನ ರಾತ್ರಿ ನನ್ನ ಹೆಂಡತಿ ಜೊತೆ ಮಲಗಲು ಹೇಳೋಣ. ಆಗ ನಮಗೆ ಗೊತ್ತಾಗಿ ಬಿಡುತ್ತದೆ" ಎಂದು ರಾಜ ಹೇಳಿದ ಮಾತುಗಳನ್ನು ಗಿಳಿ ಕೇಳಿಕೊಂಡು ಬಂದು "ಅಕ್ಕಾ ನೀ ಕೆಟ್ಟೆಲ್ಲೇ" ಎಂದಿತು. ವಿಷಯ ತಿಳಿಸಿ "ಮಂತ್ರಿ ಕೇಳಿದರೆ ಒಪ್ಪಿಕೋ" ಎಂದಿತು. ಹಾಗೆಯೇ ಮಂತ್ರಿಯ ಮಾತನ್ನು ಆಕೆ ಒಪ್ಪಿಕೊಂಡಳು. "ನಿನ್ನ ಸೋದರಮಾವನಿಗೆ ನಿನ್ನ ಉಡುಗೆ ಹಾಕಿ ಪದ್ಮಾವತಿಯಲ್ಲಿಗೆ ಕಳುಹಿಸು" ಎಂದು ಗಿಳಿ ಸಲಹೆ ನೀಡುತ್ತದೆ. ಅವಳು ಹಾಗೆಯೇ ಮಾಡುತ್ತಾಳೆ. ಅಂದು ರಾತ್ರಿ ಪದ್ಮಾವತಿಯ ಬಳಿ ರಾಜನ ಮಗಳ ಸೋದರಮಾವನೇ ಇದ್ದು ಬೆಳಗಿನ ಜಾವಕ್ಕೆ ಎದ್ದು ಹೋಗುತ್ತಾನೆ. ಮಾರನೆಯ ದಿನ ಮಂತ್ರಿ ಪದ್ಮಾವತಿಯನ್ನು ವಿಚಾರಿಸಿದಾಗ ಆಕೆ "ಆತ ಗಂಡೇ ಹೊರತು ಹೆಣ್ಣಲ್ಲ" ಎನ್ನುತ್ತಾಳೆ. ಮಂತ್ರಿಯು ಮಾತನ್ನು ಕೇಳಿದಾಗಲೂ ರಾಜನಿಗೆ ಅನುಮಾನವೇ. ರಾಜನ ಮಗಳು ತಮ್ಮನ್ನು ಕಳುಹಿಸಿಕೊಡುವಂತೆ ಕೇಳುತ್ತಾಳೆ. "ಇನ್ನೊಂದೇ ಒಂದು ಕಾರ್ಯವಿದೆ. ಅದು ಆದಮೇಲೆ ಕಳುಹಿಸಿಕೊಡುತ್ತೇನೆ"

ಎನ್ನುತ್ತಾನೆ. ಮಂತ್ರಿಯ ಹತ್ತಿರ "ಈ ದಿನ ದೇವಸ್ಥಾನಕ್ಕೆ ಹೋಗೋಣ ಅಲ್ಲಿ ಸ್ನಾನ ಮಾಡದೆ ಒಳಗೆ ಹೋಗುವಂತಿಲ್ಲ, ಅಲ್ಲಿ ತರಾವರಿ ಹೂಗಳು ಬಿಟ್ಟಿರುತ್ತವೆ. ಹೆಣ್ಣಾದರೆ ಅವುಗಳನ್ನು ಬಯಸಿ ಕಿತ್ತುಕೊಳ್ಳುತ್ತಾಳೆ" ಎಂದು ಹೇಳುತ್ತಿರುವಾಗ ಗಿಳಿ ಕೇಳಿಸಿಕೊಂಡು ರಾಜನ ಮಗಳ ಹತ್ತಿರ ಬಂದು "ಅಕ್ಕಾ ನೀ ಕೆಟ್ಟಲ್ಲೇ" ಎನ್ನುತ್ತದೆ. ವಿಷಯವನ್ನೆಲ್ಲಾ ತಿಳಿಸಿ "ನೀನು ಒಲ್ಲೆ ಎನ್ನದೆ ಒಪ್ಪಿಕೋ" ಎಂದು ಹೇಳುತ್ತದೆ. ನಂತರ ಮಂತ್ರಿ ಬಂದು ದೇವಸ್ಥಾನಕ್ಕೆ ಹೊರಡುವಂಥ ಹೇಳುತ್ತಾಳೆ. ರಾಜನ ಮಗಳು ಒಪ್ಪಿಕೊಳ್ಳುತ್ತಾಳೆ. ನಂತರ ಗಿಳಿ "ನೀನೇನೂ ಭಯಪಡಬೇಡ, ನಾನು ಒಂದು ಹಲ್ಲಿಯನ್ನು ತಂದು ನಿನ್ನ ಮೇಲೆ ಹಾಕಿ ಬಿಡ್ತೀನಿ. ನೀನು ರಾಜನಿಗೆ " ಈ ಹಾಳು ಗಿಳಿ ಹಲ್ಲಿಯನ್ನು ತಂದು ಹಾಕಿ ಮಲಿನಮಾಡಿತು, ನೀವು ತಡವಾಗಿ ಬನ್ನಿ, ನಾನು ಅಲ್ಲಿರುತ್ತೇನೆ" ಎಂದು ಹೇಳು ಎಂದಿತು. ರಾಜನ ಮಗಳು ಹಾಗೇಯೇ ಹೇಳಿದಳು. ಕುದುರೆಯನ್ನು ವೇಗವಾಗಿ ಓಡಿಸಿಕೊಂಡು ಹೋಗಿ ಅಗಸನ ಬಳಿ ಬಟ್ಟೆಯೆಲ್ಲ ಒಗೆಸಿ ಸ್ನಾನ ಮಾಡಿ ಬೇರೆ ಬಟ್ಟೆ ಧರಿಸಿ ಸಿದ್ದವಾಗಿ ನಿಂತಳು. ದೇವಸ್ಥಾನದ ಬಳಿ ಬಟ್ಟೆಯೆಲ್ಲ ಒಗೆಸಿ ಸ್ನಾನ ಮಾಡಿ ಬೇರೆ ಬಟ್ಟೆ ಧರಿಸಿ ಸಿದ್ಧವಾಗಿ ನಿಂತಳು. ದೇವಸ್ಥಾನದ ಬಳಿ ರಾಜ ಎಲ್ಲಾ ಹೂಗಳನ್ನು ತೋರಿಸಿದಾಗ ಅವಳೊಂದನ್ನೂ ಮುಟ್ಟಲಿಲ್ಲ. ರಾಜ ಒಂದೇ ಒಂದು ಹೂವನ್ನು ಕಿತ್ತು ಕಿವಿಯಲ್ಲಿ ಇಟ್ಟುಕೊಂಡ ಅವಳೂ ಹಾಗೆಯೇ ಮಾಡಿದಳು.

ಮಾರನೇದಿನ ಮತ್ತೆ ತಮ್ಮನ್ನು ಕಳುಹಿಸಿಕೊಡಲು ಕೇಳುತ್ತಾಳೆ. ಆಗ ಪದ್ಮಾವತಿಯ ಷರತ್ತಿನಂತೆ ಆಕೆಯನ್ನು ಕರೆಸಿ ತಲೆಗೆ ಮೂರು ಪಟ್ಟೆ ಹೊಡೆದು ಕತ್ತೆಯ ಮೇಲೆ ಕೂರಿಸಿ ಊರೆಲ್ಲಾ ಮೆರವಣಿಗೆ ಮಾಡಿಸಿ, ಸಿಗಿದು ಊರ ಬಾಗಿಲಿಗೆ ತೋರಣ ಕಟ್ಟಿಸುತ್ತಾನೆ. ಅವಳ ಮನೆಯಮುಂದೆ, ಕವಡೆ ಮೂಗುದಾರ ಧರಿಸಿ ಸೌದೆ ಸೀಳುತ್ತಿದ್ದವರಿಗೆಲ್ಲ ಬಿಡುಗಡೆಮಾಡಿಸಿ, ತನ್ನ ಅಣ್ಣಂದಿರನ್ನೂ ಕರೆದುಕೊಂಡು ತನ್ನ ಊರಿಗೆ ಹಿಂತಿರುಗುತ್ತಾಳೆ. ತೊರೆದಾಟದ ಮೇಲೆ ಡೇರಾ ಒಡ್ಡಿ ತನ್ನ ವೇಷವನ್ನು ಬದಲಿಸಿ ಸ್ತ್ರೀಯಂತೆ ಉಡುಗೆ-ತೊಡುಗೆಗಳನ್ನು ಧರಿಸಿ ಹೊರಬಂದು ರಾಜನಿಗೆ ಕಾಣಿಸುವಂತೆ ತೊರೆಯ ಬಳಿ ನಿಲ್ಲುತ್ತಾಳೆ. ಆಗ ರಾಜ ಮಂತ್ರಿಯನ್ನು ಕರೆದು "ನೋಡು ಅವಳು ಹೆಣ್ಣೇ ಹೊರತು ಗಂಡಲ್ಲ" ಎನ್ನುತ್ತಾನೆ. ರಾಜನ ಮಗಳಿಗೆ ಕೇಳಿಸುವಂತೆ "ನಾನು ನಿನ್ನೇ ಮದುವೆಯಾಗಿ, ನಿನ್ನ ಹೊಟ್ಟೆ ಸಿಗಿದು ಮೂರು ಗಸೆ ರಕ್ತ ಕುಡೀದಿದ್ರೆ ನಾ ಗಂಡೇ ಅಲ್ಲ" ಎಂದು ಶಪಥ ಮಾಡುತ್ತಾನೆ. ಅದಕ್ಕೆ ಪ್ರತ್ಯುತ್ತರವಾಗಿ ಅವಳು "ನಿನ್ನೇ ನಾನು ಮದುವೆಯಾಗಿ ನಿನಗೇ ಒಂದು ಮಗ ಹುಟ್ಸಿ, ನಿನ್ನೇ ಮಂಚಕ್ಕೆ ಮಕ್ಕಾಡೆಯಾಗಿ ಕಟ್ಟಿಸ್ತೀನಿ" ಎಂದು ಕೂಗಿ ಹೇಳುತ್ತಾಳೆ.

ಅರಮನೆಗೆ ಬಂದ ಮಕ್ಕಳನ್ನು ಕಂಡು ರಾಜರಾಣಿಯರು ಬಹಳ ಆನಂದಪಡುತ್ತಾರೆ. ಆಗ ರಾಜನ ಮಗಳು ತಂದೆಗೆ ಹೇಳುತ್ತಾಳೆ. "ಇಂಥ ದೇಶದಿಂದ ಒಬ್ಬ ರಾಜ ಹೆಣ್ಣು ಕೇಳಿಕೊಂಡು ಬರುತ್ತಾನೆ. ಅವನಿಗೆ ನನ್ನನ್ನು ಕೊಡಲ್ಲ ಅಂತ ಮಾತ್ರ ಹೇಳ್ಬೇಡ" ನನ್ನನ್ನು

ಅವನಿಗೇ ಕೊಟ್ಟು ಮದುವೆ ಮಾಡಿಬಿಡು" ಎಂದು ಹೇಳುತ್ತಾಳೆ. ಅಂತೆಯೇ ಸ್ವಲ್ಪಕಾಲದ ನಂತರ ರಾಜ ಬಂದು ಹೆಣ್ಣು ಕೇಳುತ್ತಾನೆ. ಮದುವೆಯೂ ನಡೆದುಹೋಗುತ್ತದೆ. ಸೋಬನಕ್ಕೆ ಮುನ್ನ ರಾಜನ ಮಗಳು ಗೊಂಬೆ ಮಾಡುವವರನ್ನು ಕರೆಸಿ ಮೂರು ಕೊಳಗ ಗೋಧಿ ಕೊಟ್ಟು, ತನ್ನಂತೆಯೇ ಒಂದು ಗೊಂಬೆಮಾಡಿ ಅದರ ಹೊಟ್ಟೆಯ ತುಂಬಾ ಜೇನುತುಪ್ಪ ತುಂಬಿ, ತಂದುಕೊಡುವಂತೆ ಹೇಳಿದ್ದಳು. ಸೋಬನದದಿನ ಕೋಣೆ, ಮಂಚ ಎಲ್ಲವನ್ನೂ ಅಲಂಕಾರ ಮಾಡಿರುತ್ತಾರೆ. ರಾಜನ ಮಗಳು ಗೊಂಬೆಯನ್ನು ಮಂಚದ ಮೇಲೆ ಮಲಗಿಸಿ, ತಾನು ಮಂಚದಡಿ ಅಡಗಿಕೊಳ್ಳುತ್ತಾಳೆ. ರಾಜ ಒಳಗೆ ಬಂದವನೇ ಬಾಗಿಲು ಹಾಕಿಕೊಂಡು ಕೋಪದಿಂದ "ಏನೇ ರಾಣಿ, ನನ್ನ ಹೆಂಡತಿ ಹತ್ತಿರ ಎಷ್ಟೋ ಜನ ಗಂಡಸರು ಪಗಡೆಯಾಟದಲ್ಲಿ ಸೋತು ಹೆಂಗಸರಂತೆ ಗುಲಾಮರಾಗಿದ್ದರು, ನೀನು ಹೆಂಗಸಾಗಿದ್ರೂ ಗಂಡಸರಂತೆಪಗಡೆ ಆಡಿ ನನ್ನ ಹೆಂಡತಿಯನ್ನು ಸೋಲಿಸಿದವಳಲ್ಲವೇ ನೀನು?" ಎನ್ನುತ್ತಾನೆ. "ಹೂಂ" ಎನ್ನುತ್ತಾಳೆ ರಾಣಿ. ಸ್ನಾನದ ಮನೆಯೊಳಗೆ ಹೋಗಿ ಮಾಲಿಯ ಹತ್ತಿರ ಗಂಡೆನಿಸಿಕೊಂಡವಳಲ್ಲವೇ ನೀನು?" 'ಹೂಂ' "ಹೆಂಡತಿ ಜೊತೆ ಮಲಗಲು ಹೇಳಿದಾಗ ಗಂಡೆನಿಸಿಕೊಂಡು ಬಂದವಳಲ್ಲವೇ ನೀನೂ" "ಹೂಂ" "ಊಟಕ್ಕೆ ಕರೆದಾಗ, ದೇವಸ್ಥಾನಕ್ಕೆ ಹೋದಾಗ ಗಂಡೆನಿಸಿಕೊಂಡವಳಲ್ಲವೇ ನೀನು?" "ಹೂಂ" "ಡೇರೆಯಿಂದ ಹೊರಬಂದಾಗ ಸೀರೆ ಉಟ್ಕೊಂಡು, ಒಡವೆ ಧರಿಸಿಕೊಂಡು ಬಂದು ಜಂಭದಿಂದ ನಿಂತು ಸವಾಲೆಸೆದವಳಲ್ಲವೇ ನೀನು" "ಹೂಂ" "ಊಂ". ಈಗ ನೋಡ್ತಿರೇ ಕೊಬ್ಬಿದ ರಾಣಿ, ನನ್ನ ಪಂದ್ಯದಲ್ಲಿ ನಾನೇ ಗೆಲ್ತೀನಿ" ಎಂದು ಹೇಳಿ ಗೋಧಿಗೊಂಬೆಯ ಹೊಟ್ಟೆಸೀಳಿ ಮೂರು ಬೊಗಸೆ ಜೇನುತುಪ್ಪವನ್ನು ಕುಡಿದು ಅಲ್ಲಿಂದ ತಲೆ ತಪ್ಪಿಸಿಕೊಂಡು ಬೇರೆ ದೇಶಕ್ಕೆ ಓಡಿ ಹೋದ.

ಬೆಳಗಾದಾಗ ರಾಣಿಯನ್ನು ಎಬ್ಬಿಸಲು ದಾದಿಯರು ಬರುತ್ತಾರೆ. ಹೊಟ್ಟೆ ಸಿಗಿದು ಬಿದ್ದಿದ್ದ ರಾಣಿಯನ್ನು ಕಂಡು ದಿಗಿಲುಗೊಂಡು ಓಡಿಹೋಗಿ ರಾಜನಿಗೆ ಹೇಳುತ್ತಾರೆ. ಎಲ್ಲರೂ ಓಡಿ ಬಂದು "ಅಯ್ಯೋ ಮಗಳೇ ಇದಕ್ಕೇ ಮದುವೆಯಾದ್ಯೇನೇ?" ಎಂದು ಅಳಲು ಮುದಲುಮಾಡುತ್ತಾರೆ. ಆಗ ಅವಳು ಮಂಚದಡಿಯಿಂದ ಹೊರಬಂದು "ಯಾರೂ ಅಳಬೇಡಿ, ನಾನು ಸತ್ತಿಲ್ಲ" ಎನ್ನುತ್ತಾಳೆ.

ಸ್ವಲ್ಪಕಾಲದ ನಂತರ ಆ ಊರಿಗೆ ಬಂದ ದೊಂಬರ ಜೊತೆ ಹೋಗಿ ದೊಂಬರಾಟ ಕಲಿಯುವುದಾಗಿ ಕೇಳುತ್ತಾಳೆ. ಆಗ ಅವಳ ತಂದೆ "ಬೇಡಾಮ್ಮ, ನಿನ್ನ ಮದುವೆಯಾಗಿ ನೀನೇನೂ ಸುಖಪಡಲಿಲ್ಲ, ಈಗ ನೀನು ದೊಂಬರಾಟ ಆಡಿದರೆ ಜನ ಏನನ್ನುತ್ತಾರೆ?" ಎನ್ನುತ್ತಾನೆ. ಆಗ ಅವಳು "ನೀನು ಕಳುಹಿಸದಿದ್ದರೆ, ನಾನಿಲ್ಲೇ ನಾಲಿಗೆ ಇರ್ಕೊಂಡು ಸತ್ತು ಹೋಗ್ತೀನಿ" ಎಂದು ಹಠಮಾಡುತ್ತಾಳೆ. ವಿಧಿಯಿಲ್ಲದೆ ರಾಜ ಒಪ್ಪಿಕೊಳ್ಳುತ್ತಾನೆ. ದೊಂಬರಿಗೆಲ್ಲಾ ಎಚ್ಚರಿಕೆಯಿಂದ ಮಗಳನ್ನು ನೋಡಿಕೊಳ್ಳಬೇಕೆಂದು ಹೇಳಿ ಕಳುಹಿಸಿ ಕೊಡುತ್ತಾನೆ. ದೊಂಬರು ಅವಳನ್ನು ಕರೆದುಕೊಂಡು ದೊಂಬರಾಟ ಆಡ್ತಾ ಆಡ್ತಾ ಅವಳ

ಗಂಡ ಇದ್ದ ಊರಿಗೆ ಬರುತ್ತಾರೆ. ಒಂದು ದಿನ ಅವರು ದೊಂಬರಾಟ ಪ್ರದರ್ಶನ ಏರ್ಪಡಿಸುತ್ತಾರೆ. ದೊಂಬರಾಟ ಮುಗಿದಬಳಿಕ ಎಲ್ಲರೂ ಡೇರೆಗಳೊಳಗೆ ಹೋಗಿ ಮಲಗುತ್ತಾರೆ. ರಾಣಿಯೂ ಆಟ ಆಡಿ, ತನ್ನ ಡೇರೆ ಸೇರಿಕೊಳ್ಳುತ್ತಾಳೆ. ಅವಳ ರೂಪ ಸೌಂದರ್ಯವನ್ನು ಕಂಡು ಮರುಳಾದ ರಾಜ ಹೇಗಾದರೂ ಅವಳನ್ನು ಪಡೆಯಬೇಕೆಂದು ಬಯಸಿ, ಡೇರೆಗಳ ಬಳಿ ಬಂದು ಡಂಬರನ್ನು ಕರೆಸಿ "ಇವತ್ತೊಂದು ದಿನ ಆಕೆಯೊಡನೆ ಮಲಗಬೇಕೆಂಬುದು ನನ್ನಾಸೆ" ಎಂದು ಹೇಳುತ್ತಾನೆ. ಅವರು ರಾಣಿಯ ಡೇರೆಗೆ ಬಂದು ಹಾಗೆಯೇ ಹೇಳುತ್ತಾರೆ. ಆಕೆಗೆ ಗೊತ್ತು ಅವನೇ ತನ್ನ ಗಂಡನೆಂದು ಆದರೆ ಅವನಿಗೆ ಈಕೆ ರಾಣಿಯೆಂದು ಗೊತ್ತಿಲ್ಲ. ಆಕೆ ಒಪ್ಪಿಗೆ ನೀಡುತ್ತಾಳೆ. "ನಾನನು ಬರುವಾಗ ಏನು ತರಬೇಕು" ಎಂದು ರಾಜ ಕೇಳಿದಾಗ "ಏನೂ ಬೇಡ, ಮೂರು ಸೇರು ರಾಗಿ ತರಲಿ" ಎಂದು ರಾಣಿ ಹೇಳಿಕಳುಹಿಸುತ್ತಾಳೆ. "ಅಯ್ಯೋ ರಾಗಿಗೆ ಬೆಂಬಿಸಿಕೊಂಡಳೇ ಎಂದು ಕೊಂಡು ನಲವತ್ತು ಸೇರು ರಾಗಿಯನ್ನು ಆಳುಗಳ ಕೈಯಲ್ಲಿ ಹೊರಿಸಿಕೊಂಡು, ಬಂದು ಡೇರೆಯೊಳಗೆ ಹಾಕಿಸುತ್ತಾನೆ. ಅಲ್ಲೇ ಕುಳಿತುಕೊಳ್ಳುತ್ತಾನೆ. ರಾಣಿ ತಾನು ಅಲ್ಲಿಗೆ ಹೋಗದೆ, ಒಂದು ಮಂದೆ ಕೋಳಿಗಳನ್ನು ಅಲ್ಲಿಗೆ ಬಿಡಿಸುತ್ತಾಳೆ. ಅವು ರಾಜನನ್ನು ಕುಕ್ಕಲು, ರಾತ್ರಿಯೆಲ್ಲಾ ಕೋಳಿಗಳಿಗೆ ರಾಗಿ ಹಾಕುವುದೇ ಅವನ ಕೆಲಸವಾಗುತ್ತದೆ. ಹಾಗೆಯೇ ಬೆಳಕು ಹರಿಯುತ್ತದೆ.

ಮಾರನೆಯ ದಿನ ಮತ್ತೆ ದೊಂಬರಾಟ ಏರ್ಪಡಿಸುತ್ತಾರೆ. ಅಂದೂ ಹಾಗೆಯೇ ರಾಜ ಹೇಳಿಕಳುಹಿಸುತ್ತಾನೆ. "ಇವತ್ತೇನು ತರಲಿ" ಎಂದಾಗ "ಮೂರು ಮಂಕರಿ ರಾಗಿಹಿಟ್ಟು ಮಾಡ್ಸಿ ತರಲಿ" ಎಂದು ಹೇಳಿಕಳುಹಿಸುತ್ತಾಳೆ. "ಅಯ್ಯೋ ಹಿಟ್ಟಗೆ ಬೆಂಬಿಸಿಕೊಂಡಳೇ" ಎಂದು ಕೊಂಡು ನಾಲ್ಕು ಮಂಕರಿ ತುಂಬಾ ರಾಗಿಹಿಟ್ಟು ಮಾಡಿಸಿಕೊಂಡು ತರುತ್ತಾನೆ. ಡೇರೆಯಲ್ಲಿ ಇಳಿಸಿ ಕುಳಿತುಕೊಳ್ಳುತ್ತಾನೆ. ಒಂದು ಮಂದೆ ಹಂದಿಗಳನ್ನು ರಾಣಿ ಡೇರೆಯೊಳಗೆ ಅಟ್ಟುತ್ತಾಳೆ. ರಾತ್ರಿಯೆಲ್ಲಾ ಹಂದಿಗಳಿಗೆ ಹಿಟ್ಟು ಹಾಕುವುದು ಅವನ ಕೆಲಸವಾಗುತ್ತದೆ. ಹಾಗೆಯೇ ಬೆಲಗಾಗಿ ಹೋಗುತ್ತದೆ.

ಮೂರನೇ ದಿನ "ಏನು ತರಲಿ" ಎಂದಾಗ "ಏನೂ ಬೇಡ ಬರಹೇಳಿ" ಎನ್ನುತ್ತಾಳೆ. ಅಂದು ರಾಣಿ, ರಾಜನನ್ನು ಕೂಡುತ್ತಾಳೆ. ಅವನು ಅವಳಿಗೆ ತನ್ನ ಮುದ್ರೆಯುಂಗುರ ಕೊಟ್ಟು ಹೋಗುತ್ತಾನೆ. ರಾಣಿಗೆ ಮುಟ್ಟು ನಿಲ್ಲುತ್ತದೆ. ತನ್ನ ದೇಶಕ್ಕೆ ಹಿಂದಿರುಗುತ್ತಾಳೆ. ಅವಳ ಸ್ಥಿತಿಯನ್ನು ಕಂಡು ರಾಜರಾಣಿಯರಿಗೆಲ್ಲಾ ದುಃಖವಾಗುತ್ತದೆ. "ಗಂಡನಿಲ್ಲದ ನೀನು ಬಿಮ್ಮನಿಸೆಯಾದರೆ ಜನ ಏನೆನ್ನುವುದಿಲ್ಲ"? ಎನ್ನುತ್ತಾರೆ. "ನೀವ್ಯಾರೂ ಚಿಂತೆಪಡಬೇಕಾಗಿಲ್ಲ, ಮುಂದಕ್ಕೆ ನಿಮಗೇ ತಿಳಿಯುತ್ತದೆ" ಎನ್ನುತ್ತಾಳೆ ರಾಣಿ.

ದಿನ ತುಂಬಿದ ಮೇಲೆ ಒಂದು ಗಂಡನ್ನು ಹಡೆಯುತ್ತಾಳೆ. ಅವನಿಗೆ ವಿದ್ಯಬುದ್ಧಿ ಕಲಿಸುತ್ತಾ ಹತ್ತುವರ್ಷ ಕಳೆಯುತ್ತದೆ. ಆಗ ದೊಂಬರನ್ನು ಕರೆಸಿ ಅವರೊಂದಿಗೆ

ಹೋಗುವುದಾಗಿ ತಂದೆಯನ್ನು ಕೇಳುತ್ತಾಳೆ. ತಂದೆ ಬೇಡವೆನ್ನುತ್ತಾನೆ. "ಕಳುಹಿಸದಿದ್ದರೆ ನಾಲಿಗೆ ಇರ್ಕೊಂಡು ಸತ್ತು ಹೋಗ್ತೀನಿ" ಎನ್ನುತ್ತಾಳೆ. ತಂದೆ ಒಪ್ಪುತ್ತಾನೆ. ಮಗನನ್ನೂ ಕರೆದುಕೊಂಡು ದೊಂಬರ ಜೊತೆ ಹೋಗುತ್ತಾಳೆ. ತನ್ನ ಗಂಡ ಇರುವ ಊರಿಗೆ ತಲುಪುತ್ತಾಳೆ. ದೊಂಬರಾಟ ಪ್ರದರ್ಶನ ಏರ್ಪಾಡಾಗುತ್ತದೆ. ಆ ದಿನ ರಾಜ ಅವಳನ್ನು ಬಯಸಿ "ಏನು ತರಲಿ" ಎಂದು ಕೇಳಿದಾಗ, "ಏಳು ಮಾರುದ್ದ ನೂಲಗ್ಗ ತರಲು ಹೇಳಿ" ಎಂದು ರಾಣಿ ಹೇಳಿಕಳುಹಿಸುತ್ತಾಳೆ. "ಅಯ್ಯೋ ಹಗ್ಗಕ್ಕೆ ಬೆಂಬಿಸಿಕೊಂಡಳೇ" ಎಂದು ಕೊಂಡು, ಅಂದು ರಾತ್ರಿ ಹಗ್ಗ ತೆಗೆದುಕೊಂಡು ಬಂದು ಕೊಟ್ಟು, ಅವಳನ್ನು ಕೊಡುತ್ತಾನೆ. ಸುಖನಿದ್ರೆಯಲ್ಲಿದ್ದಾಗ ಮಗನ ಕೈಲಿ ಹಗ್ಗಕೊಟ್ಟು ಮಂಚಕ್ಕೆ ಮಕ್ಕಾಡೆಯಾಗಿ ಬಿಗಿಸುತ್ತಾಳೆ. ಬೆಳಗಾದಾಗ ಕಣ್ಣುಬಿಟ್ಟು ನೋಡ್ತಾನೆ, ಮಂಚಕ್ಕೆ ಕಟ್ಟಲ್ಪಟ್ಟಿರುತ್ತಾನೆ. "ಯಾಕೆ ಹೀಗೆ ಕಟ್ಟಿದ್ದೀಯಾ?" ಅಂತ ಕೇಳುತ್ತಾನೆ. ಅವಳು ಮುದ್ರೆಯುಂಗುರವನ್ನು ತೋರಿಸಿ" ನೆನಪಾಯಿತೇ? ಪದ್ಮಾವತಿ ಸೂಳೆಯ ಹತ್ತಿರ ನಾನು ಬಂದಾಗ ಏನು ಹೇಳಿದ್ದೆ? ನನ್ನನ್ನು ಮದುವೆಯಾಗಿ, ಹೊಟ್ಟೆ ಸಿಗಿದು ರಕ್ತ ಕುಡಿಯುತ್ತೇನೆ ಎಂದಿದ್ದೆಯಲ್ಲವೇ? ಈಗ ನೋಡು ನಿನ್ನ ಮಗನ ಕೈಯಲ್ಲೇ ನಿನ್ನನ್ನು ಮಂಚಕ್ಕೆ ಮಕ್ಕಾಡೆ ಬಿಗಿಸಿದ್ದೀನಿ" ಎಂದಳು.

"ನಾನು ಸೋತು ಹೋದೆ, ನನ್ನನ್ನು ಕ್ಷಮಿಸುಬಿಡು" ಎಂದ ರಾಜನನ್ನು ಕ್ಷಮಿಸಿ ಕಟ್ಟುಬಿಚ್ಚಿದಳು. ಅವರೆಲ್ಲಾ ಒಟ್ಟಿಗೆ ಸೇರಿ ಆಕೆಯ ತಂದೆಯ ಊರಿಗೆ ಬಂದು ವಿಷಯವನ್ನೆಲಾ ತಿಳಿಸಿ ಸುಖವಾಗಿ ಬಾಳುತ್ತಿದ್ದರು.

**7. ಕ್ರಿಸ್ಮಸ್ ಹಬ್ಬದ ಸಚಿದರ್ಭದಲ್ಲಿ ಹಾಡುವ ಕೋಲಾಟದಹಾಡು**

ಯೆರೋದರಾಯರಿಂದ ಬಂದ ನಿರೂತದಾತರಿಗೆ
ದಾವಿದ ಮಗನಾದ ಜೋಸೆಫೈ ತಂದಾ ಪತ್ನಿಯೊಂದಿಗೆ
ಜೆರ್ಸ್ಲೇಮ್ ನಗರಿಗೆ ಇಬ್ಬರು ಚಿತ್ತೈಸಿ ಬಂದರು
ಮನೆಗಳು ಸಿಕ್ಕದೆ, ದನಗಳ ಕೊಟ್ಟಿಗೆ ಮಧ್ಯದಿ ನಿಂತರು
ಡಿಸೆಂಬರ್ ತಿಂಗಳು 25ನೇ ದಿನದಲಿ॥ ಮಧ್ಯರಾತಿ
ಕನ್ಯಾಮ್ಮರಿಯಮ್ಮನ ಮಗನು ಹುಟ್ಟಿದರು
ಆಕಾಸದಿಂದಿಳಿದು ದೇವದೂತರುಗಳು
ಮಂದೆಕಾಯುವ ಗೊಲ್ಲರಿಗೆ ಕೊಟ್ಟರು ಸುದ್ಧಿಚಿನು
ಗೊಲ್ಲರು ಓಡಿಬಂದು ಹೇಳಿದ ಕೊಠಡಿಯೊಳು ಹೋಗಿ

ಹುಲ್ಲಿನ ಮೇಲೆ ಮಲಗಿರುವ ಬಾಲರ ನೋಡಿದರು
ಸಾಷ್ಟಾಂಗ ನಮಸ್ಕಾರ ಸ್ವಾಮಿ ಸತ್ಯದ ಸರುವೇಶ
ಲೋಕದ ಪಾಪವ ಪರಿಹರಿಸುವ ಸತ್ಯದ ಸರುವೇಶ
ರಕ್ಷಣ್ಯ ಉಂಟಾಯ್ತು ಸ್ವಾಮಿ ಈವತ್ತಿನ ದಿನದಲ್ಲಿ
ಅದಾಮು ಎಂಬ ಅಳಿದರು ಕೊಟ್ಟ ವಾಗ್ದಾನ ನಿಜವಾಯ್ತು.

# ಪರಾಮರ್ಶನ ಗ್ರಂಥಗಳು


1. ಅಂತಪ್ಪ ಐ 1990 "ದೇವನಹಳ್ಳಿ ಮತ್ತು ಚಿಕ್ಕಬಳ್ಳಾಪುರ ತಾಲ್ಲೂಕುಗಳಲ್ಲಿ ಕ್ರೈಸ್ತ ಧರ್ಮದ ಉಗಮ" ಕಥೋಲಿಕ ಕ್ರೈಸ್ತರ ಕನ್ನಡ ಸಾಹಿತ್ಯ ಸಂಘ ಬೆಂಗಳೂರು ಮಹಾಧರ್ಮ ಪ್ರಾಂತ್ಯ ಬೆಂಗಳೂರು – 560002.
2. ಕೃಷ್ಣಕುಮಾರ್ ಸಿ.ಪಿ. 1983 ಜನಪದ ಸಾಹಿತ್ಯ ಪ್ರವೇಶಿಕೆ ವಿತ್ರಭಾನು ಪ್ರಕಾಶನ 2265 19 "ಭಾರತಿ" ಜಯಲಕ್ಷ್ಮಿಪುರಂ, ಮೈಸೂರು – 12
3. ಖಂಡೋಬಾ ಪಿ.ಕೆ. 1991 ಕರ್ನಾಟಕದ ಲಂಬಾಣಿಗಳು: ಒಂದು ಸಾಂಸ್ಕೃತಿಕ ಅಧ್ಯಯನ ತೇಜ್‌ಸಿಂಗ್ ರಾಠೋಡ ಮೆಮೋರಿಯಲ್ ಟ್ರಸ್ಟ್ ಗುಲ್ಬರ್ಗ.
4. ಗದ್ದಗಿಮಠ ಬಿ.ಎಸ್. 1963 ಕನ್ನಡ ಜಾನಪದ ಗೀತೆಗಳು ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ – 580003.
5. ಗುಂಜಾಳ ಎಸ್.ಆರ್. 1982 ಉತ್ತಂಗಿ ಚೆನ್ನಪ್ಪನವರು ಕ.ಸಾ.ಪ. ಚಾಮರಾಜಪೇಟೆ ಬೆಂಗಳೂರು 560 018.
6. ಚೆನ್ನಬಸಪ್ಪ ಗೊ.ರು 1991 ಜಾನಪದ ದರ್ಶನ ಬೈರಮಂಗ ರಾಮೇಗೌಡ ಕ.ಸಾ.ಒ ಚಾಮರಾಜಪೇಟೆ ಚಕ್ಕರೆ ಶಿವಶಂಕರ ಬೆಂಗಳೂರು.
7. ಜವರೇಗೌಡ .ದೇ 1986 ಜಾನಪದ ವಾಹಿನಿ ಡಿ.ವಿ.ಕೆ. ಮೂರ್ತಿ, ಮೈಸೂರು– 4 1991 ಜಾನಪದ ಅಧ್ಯಯನ ಚೇತನಾ ಬುಕ್‌ಹೌಸ್ ನಾರಾಯಣಶಾಸ್ತ್ರಿ ರಸ್ತೆ ಮೈಸೂರು– 24.
8. ಜ್ಯೋತಿ ಹೊಸೂರು 1981 ಜಾನಪದ ಉಪಾಸನೆ ಜಾನಪದ ಮಂಟಪ ಕಾಲಗತಿ ಪ್ರಕಾಶನ, ರಾಯಭಾಗ ಬೆಳಗಾವಿ ಜಿಲ್ಲೆ.
9. ತಲ್ವಾಡಿ ಬಿ.ಎಸ್.1983 ಕ್ರೈಸ್ತ ಜನಪದ ಗೀತೆಗಳು ದಯಾನಂದ ಪ್ರಭು, ಸಂತ ಫಿಲೋಮಿನಾ ಬೋರ್ಡಿಂಗ್ ಮೈಸೂರು– 1
10. 1989 ಕರ್ನಾಟಕ ಕ್ರೈಸ್ತರ ಇತಿಹಾಸ ಕನ್ನಡ ಕಥೋಲಿಕ ಸಂಘ (ನೋಂ) ಯಶವಂತಪುರ, ಬೆಂಗಳೂರು. 1991 ಜಂಗಮ ಜಗದ್ಗುರು ಕರ್ನಾಟಕ ಕ್ರೈಸ್ತ ಜಾನಪದ ಕೇಂದ್ರ ಬೆಂಗಳೂರು.
11. ದಯಾನಂದಪ್ರಭು 1994 ಮೈಸೂರು ಸಂಸ್ಥಾನದ ಕ್ರೈಸ್ತರ ಇತಿಹಾಸ ಶ್ವೇತ ಪ್ರಕಾಶನಸಂತ ಜೋಸೆಫರ ಪ್ರೌಢಶಾಲೆ ಸೋಮವಾರಪೇಟೆ, ಉ. ಕೊಡಗು.
12. ದೇಸಾಯಿ ಟಿ.ಎಫ್.1992 ಇಸ್ಲಾಂ ಧರ್ಮದ ತತ್ವಗಳು ಅಝಾದ್ ಬುಕ್ ಹೌಸ್ ದುರ್ಗದ ಬೈಲ ಹುಬ್ಬಳ್ಳಿ – 580020
13. ನಾಯಕ ಹಾ.ಮಾ. 1971ಜಾನಪದ ಸ್ವರೂಪ ತ.ವೆಂ.ಸ್ಮಾರಕ ಗ್ರಂಥಮಾಲೆ ಮೈಸೂರು.
14. ನಾಗೇಗೌಡ ಎಚ್.ಎಲ್. 1969 ಪ್ರವಾಸಿ ಕಂಡ ಇಂಡಿಯಾ– 3 ನಿರ್ದೇಶಕರು ಪ್ರಸಾರಾಂಗ ಮಾನಸಗಂಗೋತ್ರಿ, ಮೈಸೂರು.
15. ಪರಮಶಿವಯ್ಯ ದೇ.ಶಂ. 1975 ಜಾನಪದ: ಕೆಲವು ಮುಖಗಳು ಕರ್ನಾಟಕ

ಸಹಕಾರಿ ಪ್ರಕಾಶನ ನಿ ಚಾಮರಾಜಪೇಟೆ, ಬೆಂಗಳೂರು.

16. ಪದ್ಮಪ್ರಸಾದ್ ಎಸ್.ಪಿ. 1987 ಜೈನ ಜನಪದ ಸಾಹಿತ್ಯ ಸಹನ ಪ್ರಕಾಶನ, ಶಿವಮೊಗ್ಗ.

17. ಬಿಳಿಮಲೆ ಪುರುಷೋತ್ತಮ 1990 ಕರಾವಳಿ ಜಾನಪದ ಶೋಭನ ಎಸ್.ಎನ್. ಶಾರದಾ ಪ್ರೆಸ್, ಮಂಗಳೂರು

18. 17. ಪೈ .ಸಿ.ಸಿ.ಎ. 1978ಜಾನಪದ ವೈಜ್ಞಾನಿಕ ಕ್ಷೇತ್ರ ಕಾರ್ಯ ವ್ಯಾಸಂಗ ವಿಸ್ತರಣ ಪ್ರಕಾಶನಾ ವಿಭಾಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

19. ಮಾರಾ ಎಸ್.ಎ. 1972 ಭಾರತೀಯ ಕ್ರೈಸ್ತಸಭಾ ಚರಿತ್ರೆಯ ಪ್ರವೇಶಿಕೆ ಕನ್ನಡ ದೈವಜ್ಞಾನ ಸಾಹಿತ್ಯ ಸಮಿತಿ ಮಂಗಳೂರು.

20. ಮ್ಯಾನುಯೆಲ್ .ಎಸ್ 1981 "ನಾ ನಿನ್ನಲಿ, ನೀ ನನ್ನಲಿ, ದೈವವು ನಮ್ಮಲ್ಲಿ" ಸಂತ ಫಿಲೋಮಿನ ಚರ್ಚ್, ಮೈಸೂರು.

21. ರಾಗೌ 1969 ಕರ್ನಾಟಕದ ಜನಪದ ಕಥೆಗಳು ತ.ವೆಂ. ಸ್ಮಾರಕ ಗ್ರಂಥಮಾಲೆ ಮೈಸೂರು.

22. ಶಂಕರನಾರಾಯಣ ತೀ.ನಂ. 1974ಸಂಕೀರ್ಣ ಜನಪದ ಕಥೆಗಳು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ ಮೈಸೂರು. 1982 ಕಾಡುಗೊಲ್ಲದ ಸಂಪ್ರದಾಯಗಳು ಮತ್ತು ನಂಬಿಕೆಗಳು ಪ್ರಸಾರಾಂಗ, ಮೈಸೂರು ವಿ.ವಿ. ಮೈಸೂರು

23. ಶ್ರೀನಿವಾಸ ಹಾವನೂರು 1974 ಹೊಸಗನ್ನಡ ಅರುಣೋದಯ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ ಮೈಸೂರು.

24. ಸೈಯದ್ ಅಬ್ದುಲ್ ಅಲಾಮೌದೂದಿ 1993 ಇಸ್ಲಾಂ ಧರ್ಮ, ಶಾಂತಿ ಪ್ರಕಾಶನ ಬೆಂಗಳೂರು

25. ಅಂಬಳಿಕೆ ಹಿರಿಯಣ್ಣ 1978 ಮಲೆನಾಡ ಜನಪದ ಸಂಪ್ರದಾಯಗಳು ಪುಸ್ತಕ ಚಿಲುಮೆ ಪ್ರಕಾಶನ ಮೈಸೂರು 1982 ಮಲೆನಾಡ ಒಕ್ಕಲಿಗರು ಮತ್ತು ಅವರ ಜಾನಪದ ಅಪ್ರಕಟಿತ, ಪಿ.ಎಚ್.ಡಿ. ನಿಬಂಧ 1986ಜಾನಪದ ವಿವ ಪ್ರಜ್ವಲ ಪ್ರಕಾಶನ ಕುವೆಂಪುನಗರ, ಮೈಸೂರು– 23

# ಬಳಸಿಕೊಂಡ ಬಿಡಿಲೇಖನ ಸೂಚಿ


1. ಅಂತಪ್ಪ ಐ.1943 ಧಾರೆಮುಹೂರ್ತಕ್ಕೆ ಪ್ರಾರ್ಥನೆಗಳು ದೊಡ್ಡ ಜಪದ ಪುಸ್ತಕ ಕಥೋಲಿಕ ಕ್ರೈಸ್ತರ ಸಾಹಿತ್ಯ ಸಂಘ ಬೆಂಗಳೂರು
2. ಎಡ್ವರ್ಡ್ ನೊರೋನ್ಹಾ 1984 ಕಥೋಲಿಕ ಸಾಹಿತ್ಯದ ರೂಪರೇಷೆಗಳು "ದೂತ" ವಜ್ರ ಮಹೋತ್ಸವ ಸಂಚಿಕೆ ಸಂ.ಫಾ॥ ದಯಾನಂದ ಪ್ರಭು ಮೈಸೂರು.
3. ಕೃಷ್ಣಸ್ವಾಮಿ ಐಯ್ಯಂಗಾರ್ ಎಚ್.ಎಸ್. 1982 "ದೂತ" ವಜ್ರ ಮಹೋತ್ಸವ ಸಂಚಿಕೆ ಸಂ.ಫಾ॥ ದಯಾನಂದ ಪ್ರಭು ಮೈಸೂರು.
4. ಕಾರ್ಲೊತೋಮೆ (ಬಿಷಪ್) 1702 "ಬುದ್ದಿ ಕಡಿಮೆಯಿಂದಾ ಹೆಚ್ಚಾಗಿ ತಿಳಿಯಲಾರದ ಕ್ರಿಸ್ತುವರ ಜ್ಞಾನೋಪದೇಶ ವಿಷಯದಲ್ಲಿ ಪರೀಕ್ಷಿಸುವ ಬಗೆ" ಹಸ್ತಪ್ರತಿ ಮಾರ್ಡನ್ ಕಲೆಕ್ಷನ್ 12903 ಕನ್ನಡ ಇಲಾಖೆ, ಮಾನಸಗಂಗೋತ್ರಿ – ಕೆ.ಎ. 606
5. ಚಂದ್ರಶೇಖರ ಕಂಬಾರ 1985 ಕನ್ನಡ ಜಾನಪದ ವಿಶ್ವಕೋಶ ಕನ್ನಡ ಸಾಹಿತ್ಯ ಪರಿಷತ್ತು ಚಾಮರಾಜಪೇಟೆ ಬೆಂಗಳೂರು
6. ತಿಪ್ಪೇಸ್ವಾಮಿ ಜಿ.ಆರ್. 1989 ಶೋಕಾಚರಣೆ ಜಾನಪದ ಗಂಗೋತ್ರಿ– 3 ಸಂ. ಎಸ್.ಕೆ. ಕರೀಂಖಾನ್ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು
7. ತೆಳಗಡಿ ಬಿ.ಎಂ. 1980 ಹೆಳವರು ಜಾನಪದ ಸಾಹಿತ್ಯದರ್ಶನ– 6 ಸಂ.ಎಂ.ಎಸ್. ಸುಂಕಾಪುರ ಪ್ರಸಾರಾಂಗ, ಕ.ವಿ.ವಿ., ಧಾರವಾಡ.
8. ನಾಯಕ್ ಬಿ.ಆರ್. 1988 ಜಾತ್ರೆಗಳ ಸ್ವರೂಪ ಕರ್ನಾಟಕ ಜಾತ್ರೆಗಳು ಸಂ. ಸಿ.ಎಸ್. ಶಿವಕುಮಾರ್ (ವಿಚಾರಸಂಕಿರಣದ ಪ್ರಬಂಧಗಳು) ಬಿ.ಆರ್. ಪ್ರಾಜೆಕ್ಟ್
9. ನಿಂಗಣ್ಣ ಸಣ್ಣಕ್ಕಿ 1980 ಗೊಂದಲಿಗರು ಜಾನಪದ ಸಾಹಿತ್ಯದರ್ಶನ– 6 ಸಂ.ಎಂ.ಎಸ್. ಸುಂಕಾಪುರ ಪ್ರಸಾರಾಂಗ, ಕ.ವಿ.ವಿ., ಧಾರವಾಡ.
10. ಪೈ.ಸಿ.ಸಿ.ಎ 1989 ಕ್ರೈಸ್ತ ಜಾನಪದ ವಿಶಿಷ್ಟ ಜಾನಪದ ಕ.ವಿ.ವಿ. ಧಾರವಾಡ
11. ವರದರಾಜು ಎಂ.ವಿ 1991 ಪುರಂದರದಾಸರು ಮತ್ತು ಜಯದೇವಕವಿ ದಾಸಸಾಹಿತ್ಯ ಸುಧೆ ಸಂ. ನಾಗರತ್ನ ಟಿ.ಎಸ್. ಗಾನಭಾರತಿ (ರಿ) ಮೈಸೂರು.
12. ವಿಲ್ಯಂ ಮಾಡ್ತ 1987 ಕ್ರಿಸ್ಮಸ್ ಹಬ್ಬ ಜಾನಪದ ಸಾಹಿತ್ಯದರ್ಶನ– 10 ಪ್ರಸಾರಾಂಗ, ಕ.ವಿ.ವಿ., ಧಾರವಾಡ.
13. ಶ್ರೀನಿವಾಸ ಕೊಪ್ಪಳ .ವಿ 1990 ದೇಶವಿದೇಶಗಳಲ್ಲಿ ಕ್ರಿಸ್ಮಸ್ "ದೂತ" ಮಾಸಿಕ ಸಂ. ಜಿ. ಜೋಸೆಫ್ ಕಥೋಲಿಕ ಕೇಂದ್ರ, ಮೈಸೂರು.
14. ಹಿರಿಯಣ್ಣ ಅಂಬಳಿಕೆ 1983 ಹಬ್ಬ ಜಾತ್ರೆಗಳು ಮಲೆನಾಡು ಜಾನಪದ ಸಂ. ಡಾ. ಎಚ್. ತಿಪ್ಪೇರುದ್ರಸ್ವಾಮಿ ವಿಚಾರಸಂಕಿರಣದ ಪ್ರಬಂಧಗಳು ಬಿ.ಆರ್.ಪ್ರಾಜೆಕ್ಟ್

15. ಅಮೃತ ಕ್ರೈಸ್ತರ ಭಕ್ತಿಗೀತೆಗಳು

16. ಕನ್ನಡ ವಿಶ್ವಕೋಶ– 10

17. ಕನ್ನಡ ವಿಷಯ ವಿಶ್ವಕೋಶ

18. ಕಾಮತ್. ಎಸ್.ಜಿ 1973 ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಬೆಂಗಳೂರು.

19. ಗಣಪತಿ ರಾವ್.ಎ 1923 ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, ಮಂಗಳೂರು.

20. ನಂದಿಮಟ್ 1970 ಕನ್ನಡ ನಾಡಿನ ಚರಿತ್ರೆ ೧೧, ಬೆಂಗಳೂರು.

21. ಸ್ವಾಮಿ, 1974 ತಿಪ್ಪೆರುದ್ರ ಎಚ್ ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಮೈಸೂರು .

22. ಬಿ.ಎಸ್. ತಲ್ವಾಡಿ 1983 ಕ್ರೈಸ್ತ ಜಾನಪದ ಗೀತೆಗಳು, ಮೈಸೂರು.

23. ಸ್ವಾಮಿ ಪಿ.ಅಂತಪ್ಪ (1648-1800) ಕೊಳ್ಳೇಗಾಲ ತಾಲ್ಲೂಕಿನಲ್ಲಿ ಮತ್ತು ಸುತ್ತಮುತ್ತಲಲ್ಲಿ ಕ್ರೈಸ್ತ ಧರ್ಮದ ಉಗಮ ಕಥೋಲಿಕ ಕ್ರೈಸ್ತರ ಕನ್ನಡ ಸಾಹಿತ್ಯ ಸಂಘ ಕ್ರೈಸ್ತು ಪ್ರಭಾಲಯ, 4 ನೇ ಹರಹು, 16 ನೇ ಮುಖ್ಯರಸ್ತೆ, ಜಯನಗರ, ಬೆಂಗಳೂರು – 38 1997

# BIBLIOGRAHY


1. Abbe Dubois 1906 Hindu Manners, customs and ceremonies. OFORD University Ely house, London Press.
2. Charles Duff 1963 The Gypsies Penguin Books Ltd Middlesex England
3. David E Hunter & A studyu of Anthropology Phillips Whilten1976Harper & Row Publishers New york.
4. Eliot T.S.1939The Idea of a Christian Society, London London
5. Eugene Pittard 1989 Races and Culture of the world Printwell publishers Tilaknagar, Jaipur, India.
6. Fr. Ferroli 1955 Jesuits in Mysore Kozhi kode Mangalore.
7. Joseph Thekkedath 1982 History of Christianity in India Theolgical Publication In India Banglore.
9. Julius Lippert 1931 The Evalution of Culture New york.
10. Nanjundiah H.V. & 1930 The Mysore Tribes & Ananthakrishna Iyer Castes Vol. III Mysore University Myosre.
11. Pritchard James 1950Ancient near Eastern Texrs (Anet) Princatiom University Press.
12. Richard M. Dorson 1968 Peasant Customs and Savage Myth Rautladge & Kegan Paul Ltd. Broadway House 68-74 carter lane, London EC 4.
13. Shyam Parmer 1972 Folklore of Madyapradesh National Book Trust India, Green Park Delhi.
14. Talwadi B.S. 1984 Christian Folklore St. Mary's IS Press St. Mary's Town Bangalore.
15. Vassall Phillips 1916 Catholic Christianity R & T was Bourne Ltd. Pater Noster Row London.
16. Bible Comentry 1988 Thr Thompdon Chain Refference
17. The Catholic Encyclopidia1980 Child Craft Vol. VII International Ins.
18. The World Book Encyclopedia 1980
19. New age Encyclopedia 1979 Vol-VI
20. Encyclopedia of Religion & Ethics 1909 Vol-II Edit by James Hastings
21. William Braggs Tomorrow's People Progress Publishers, Moscow 1988.
22. The Hon. Secretary : Soliga the Tribe and Stride Vivekananda Girijana Kalyana Kendra. B.R. Hills P.O. Mysore, District, 571313, 1990
23. Austin Flannery. O.P : Vatican council St. Poul Publiciations, Bombay – 400 050 - 1983.

